# ಸಮಗ್ರ ದಾಸ ಸಾಹಿತ್ಯ

ಸಂಪುಟ : ೨೬



## ಶ್ರೀ ಗುರುಜಗನ್ನಾಥದಾಸರು ಮತ್ತು ಇತರ ಸಮಕಾಲೀನರ ಕೃತಿಗಳು

ಸಮಗ್ರ ದಾಸ ಸಾಹಿತ್ಯ
ಸಂಪುಟ : ೨೬

# ಶ್ರೀ ಗುರುಜಗನ್ನಾಥದಾಸರು ಮತ್ತು ಇತರ ಸಮಕಾಲೀನರ ಕೃತಿಗಳು

## (ಶ್ರೀ ಗುರುಜಗನ್ನಾಥದಾಸರು, ಶ್ರೀ ವರದೇಶವಿಠ್ಠಲರು ಹಾಗೂ ಶ್ರೀ ಸುಂದರವಿಠ್ಠಲರು)

*ಸಂಪಾದಕರು*
ಡಾ. ನಾರಾಯಣಾಚಾರ್ಯ ಧೂಳಖೇಡ

ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

**SAMAGRA DASA SAHITYA SAMPUTA - 26 :**

Sri Gurujagannathadasaru Mattu Itara Samakalinara Kruthigalu, Edited by Dr. Narayanacharya Dhulkhed and Published by Sri. Y.K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 113 + ೪೦೨



ಪ್ರಥಮ ಮುದ್ರಣ : ೨೦೦೩

ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦

ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

**ಮುದ್ರಣ ನಿರ್ವಹಣೆ :**

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨

**ಮುದ್ರಕರು :**

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯಮಯ ವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾರ್ಯದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನು ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಆವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮೂವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ-ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೩ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' - ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೇ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

# ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು– ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವಕ್ಕೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ಡಾ. ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ-ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಶ್ರೀ ಗುರುಜಗನ್ನಾಥದಾಸರು

(ಕ್ರಿ.ಶ.೧೮೩೭-೧೯೧೮)

### ಜೀವನವಿಚಾರ

ಕನ್ನಡ ಸಾಹಿತ್ಯೇತಿಹಾಸದಲ್ಲಿ ಹರಿದಾಸ ಸಾಹಿತ್ಯವು ತನ್ನದೇ ಆದ ವೈಶಿಷ್ಟ್ಯದಿಂದ ಮನಾಕರ್ಷಣೀಯವಾಗಿದೆ. ಶ್ರೀಮದಾನಂದತೀರ್ಥರಿಂದ ಪ್ರಣೀತವಾದ ದ್ವೈತಸಿದ್ಧಾಂತವನ್ನು ಭೂಯಿಷ್ಠವಾಗಿಟ್ಟುಕೊಂಡು ಹೊರಟ ಈ ಮಾರ್ಗವು ಸಮಗ್ರ ಸಿದ್ಧಾಂತವನ್ನು ಕನ್ನಡ ಭಾಷೆಯಲ್ಲಿ ಬಹು ಪರಿಣಾಮಕಾರಿಯಾಗಿ ಅಭಿವ್ಯಕ್ತಿಪಡಿಸಿದುದೇ ಇದರ ಹಿರಿಮೆ. ಕೇವಲ ಸಿದ್ಧಾಂತವನ್ನಷ್ಟೇ ತನ್ನ ಧ್ಯೇಯವಾಗಿಟ್ಟುಕೊಂಡು ಹೊರಟಿದ್ದರೆ ಈ ಸಾಹಿತ್ಯಕ್ಕೆ ಇಷ್ಟೊಂದು ಬೆಲೆ-ಮನ್ನಣೆ ಸಿಗುತ್ತಿರಲಿಲ್ಲ. ಸಾಮಾಜಿಕವಾಗಿ, ನೈತಿಕವಾಗಿ ಬಹು ಮೌಲಿಕ ವಿಚಾರಗಳನ್ನು ತನ್ನ ಅಭಿವ್ಯಕ್ತಿಯಲ್ಲಿ ಅಳವಡಿಸಿಕೊಂಡ ಈ ಸಾಹಿತ್ಯವು ಸಮಾಜದ ಎಲ್ಲ ಸ್ತರಗಳ ಜನರ ಮನಸ್ಸಿಗೆ ಮುಟ್ಟಿ. ಅವರನ್ನು ಜಾಗೃತಗೊಳಿಸಿದ್ದು ಇದರ ಹಿರಿಮೆ ಎನ್ನಬಹುದು.

ಸಮಗ್ರ ಹರಿದಾಸ ಸಾಹಿತ್ಯವನ್ನು ಪರಿಶೀಲಿಸಿದಾಗ ಏಳು ಪ್ರಜ್ಞೆಗಳನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

ಮೊದಲನೆಯದಾಗಿ ತನ್ನತನವನ್ನೇ ಮೆರೆಯುವ ವ್ಯಷ್ಟಿ ಪ್ರಜ್ಞೆಯನ್ನು ನಾವು ಕಾಣಬಹುದು. ಎರಡನೆಯದಾಗಿ ಎಲ್ಲರಿಗೂ ಅನ್ವಯಿಸುವ ಸಮಷ್ಟಿ ಪ್ರಜ್ಞೆಯನ್ನು ಇಲ್ಲಿ ಗುರುತಿಸಬಹುದು, ನಂತರದ್ದು ಭಾಷಾಪ್ರಜ್ಞೆ. ಸಂಸ್ಕೃತ ಭಾಷೆಯಲ್ಲಿ ಇದ್ದ

ಅಮೂಲ್ಯ ವಿಚಾರಗಳನ್ನು ಜನ ಸಂಪರ್ಕ ಭಾಷೆಯಾದ ಕನ್ನಡದಲ್ಲೆ ವ್ಯಕ್ತಪಡಿಸಿ, ತನ್ಮೂಲಕ ಸಾಮಾನ್ಯ ಮನುಷ್ಯನವರೆಗೂ ತಲುಪಿಸಿದುದು ಹರಿದಾಸ ಸಾಹಿತ್ಯದ ಹಿರಿಮೆ ಎಂದು ಹೇಳಬಹುದು. ತಮ್ಮ ಆಡು ಭಾಷೆಯಲ್ಲಿಯೇ ಸುಂದರವಾಗಿ ಅರಳಿದ ವಿಚಾರಗಳನ್ನು ತಿಳಿದಾಗ ಜನರು ಬಹು ಸಂತೋಷದಿಂದ ಈ ಸಾಹಿತ್ಯವನ್ನು ಅಪ್ಪಿಕೊಂಡರು : ಓದಿದರು; ಕೇಳಿದರು; ಸಂತೋಷಪಟ್ಟರು.

ನಾಲ್ಕನೆಯದಾಗಿ ಸಾಮಾಜಿಕ ಪ್ರಜ್ಞೆ. ಕನ್ನಡದ ಹರಿದಾಸರು ತಮ್ಮಷ್ಟಕ್ಕೆ ತಾವೇ ಪಾಠ–ಪ್ರವಚನ ಮಾಡುತ್ತ, ತಮ್ಮ ಬಳಿಗೆ ಬಂದವರಿಗೆ ಮಾತ್ರ ತತ್ತ್ವೋಪದೇಶ ಮಾಡಿದವರಲ್ಲ. ದಾಸರು ಯಾಯಿವಾರವನ್ನು ಕೈಗೊಂಡು, 'ಮಧುಕರ' ವೃತ್ತಿಯನ್ನು ತಮ್ಮ ಜೀವನ ವೃತ್ತಿಯನ್ನಾಗಿ ಸ್ವೀಕರಿಸಿ, 'ಲಜ್ಜೆಬಿಟ್ಟು ಗೆಜ್ಜೆಕಟ್ಟಿ ಹರಿಯನಾಮ'ವನ್ನು ಹಾಡುತ್ತ 'ಮುತ್ತು ಬಂದಿದೆ ಕೊಳ್ಳಿರೋ', 'ಜೇನು ಬಂದಿದೆ ಕೊಳ್ಳಿರೋ' ಎಂದು ಹಾಡುತ್ತ, ನರ್ತಿಸುತ್ತ, ಕೇರಿ–ಕೇರಿ–ಸುತ್ತುತ್ತ ಗ್ರಾಮಪ್ರದಕ್ಷಿಣೆ ಮಾಡಿದರು. ತಮ್ಮ ಕಾಲದ ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸಿದರು. ಸಮಾಜದ ಓರೆ–ಕೊರೆಗಳನ್ನು, ಅಂಕು–ಡೊಂಕುಗಳನ್ನು ಕಂಡುಹಿಡಿದು, ಅವುಗಳನ್ನು ಕುರಿತು ನಿರ್ಭಯವಾಗಿ ವಿಶ್ಲೇಷಿಸಿದರು. ಆಯಾ ಕಾಲದಲ್ಲಿ ಬಂದ ಹರಿದಾಸರು ತಮ್ಮ ತಮ್ಮ ಕಾಲದಲ್ಲಿ ತಾವು ಕಂಡ ಸಾಮಾಜಿಕ ದೋಷಗಳನ್ನು ಖಂಡಿಸಿ, ಸಮಾಜವನ್ನು ತಿದ್ದುವ ಕಾರ್ಯವನ್ನು ಬಹುಸಮರ್ಥವಾಗಿ ಮಾಡಿದರು. ನರಹರಿತೀರ್ಥರಿಂದ ಪ್ರಾರಂಭಿಸಿ ಗುರುಜಗನ್ನಾಥ ದಾಸರ ವರೆಗೂ ಪರಿಣಾಮಕಾರಿಯಾಗಿ ಮೂಡಿ ಬಂದ ಈ ಸಾಮಾಜಿಕ ಪ್ರಜ್ಞೆಯನ್ನು ಅವರ ಕೀರ್ತನೆಗಳಲ್ಲಿ, ಉಗಾಭೋಗಗಳಲ್ಲಿ, ಸುಳಾದಿಗಳಲ್ಲಿ ಕಾಣಬಹುದಾಗಿದೆ.

ಹರಿದಾಸ ಸಾಹಿತ್ಯದ ಇನ್ನೊಂದು ಮಹತ್ವಪೂರ್ಣವಾದ ಅಂಶ ನೈತಿಕ ಪ್ರಜ್ಞೆ. ಈ ಪ್ರಜ್ಞಾವಂತಿಕೆಯ ಎರಡು ಮುಖಗಳನ್ನು ಹರಿದಾಸ ಸಾಹಿತ್ಯದಲ್ಲೆ ಗುರುತಿಸಬಹುದು. ಸಮಾಜದ ಸ್ವಾಸ್ಥ್ಯಕ್ಕಾಗಿ, ಒಳಿತಿಗಾಗಿ ಹಲವು ಹನ್ನೊಂದು ಬಗೆಯ ನೀತಿಯನ್ನು ಬೋಧಿಸುವದರೊಂದಿಗೆ, ತಾವೂ ಕೂಡ ಅಂತಹ ಬದುಕನ್ನು ಬದುಕಿ, ಋಜುಮಾರ್ಗದರ್ಶಿಗಳಾದುದು ಈ ದಾಸರ ಹಿರಿಮೆ; ಮೇಲ್ಮೆ,

ತತ್ತ್ವ ನೀತಿ-ಸಿದ್ಧಾಂತಗಳನ್ನು ಬೋಧಿಸಿದರೆ ಮಾತ್ರ ಸಾಲದು. ನುಡಿದಂತೆ ನಡೆದಾಗ ಮಾತ್ರ ಆ ಬೋಧನೆ ಪರಿಣಾಮಕಾರಿಯಾಗಬಲ್ಲದು. ತಾವು ಆತ್ಮಶೋಧನೆ ಮಾಡಿಕೊಳ್ಳುವದರೊಂದಿಗೆ ಇತರರನ್ನೂ ಶೋಧಿಸಿಕೊಳ್ಳಲು ಪ್ರೇರೇಪಿಸಿದರು. ಹಾಗೆ ಶೋಧಿಸಿಕೊಂಡು, ತಿದ್ದಿಕೊಳ್ಳಲು ಉಪದೇಶಿಸಿದರು.

ಇದರೊಂದಿಗೆ ತಮ್ಮತನವನ್ನು ಬಿಟ್ಟುಕೊಡದ ತಾವು ನಂಬಿ-ದೀಕ್ಷಾಬದ್ಧರಾಗಿ ತಮ್ಮ ಜೀವನದ ಕೊನೆಯವರೆಗೂ ಬದುಕಿದ ಸಿದ್ಧಾಂತ ಮಾರ್ಗ. ಈ ಸಿದ್ಧಾಂತ ಪ್ರಜ್ಞೆಯೂ ಎಲ್ಲ ಹರಿದಾಸರಲ್ಲಿ ಅಭಿವ್ಯಕ್ತಗೊಂಡಿದೆ. ಎಲ್ಲ ಹರಿದಾಸರೂ ಶ್ರೀಮಧ್ವಾಚಾರ್ಯರ ಅನುಯಾಯಿಗಳು. ಅವರು ಬೋಧಿಸಿದ ಜ್ಞಾನ-ಭಕ್ತಿ-ಕರ್ಮಗಳ ಸಂದೇಶಕ್ಕೆ ಮಾರುಹೋಗಿ. ಅವರ ಸಿದ್ಧಾಂತದ ಬೆಳಕಿನಲ್ಲಿ ಬದುಕಿನ ಋಜುಮಾರ್ಗವನ್ನು ಕಂಡು, ತೃಪ್ತಿಪಟ್ಟವರು. ಆ ಸಿದ್ಧಾಂತಪ್ರಜ್ಞೆಯು ಅಂದರೆ ಶ್ರೀಮಧ್ವಾಚಾರ್ಯರ ದ್ವೈತಸಿದ್ಧಾಂತವು ದಾಸರ ಕೃತಿಗಳಲ್ಲಿ ವ್ಯಾಪಕವಾಗಿ ಅಭಿವ್ಯಕ್ತಿಗೊಂಡಿದೆ.

ಇವೆಲ್ಲವುಗಳೊಂದಿಗೆ ಸಂಗೀತದ ಪ್ರಜ್ಞೆ. ಶ್ರೀಪುರಂದರದಾಸರು ಕರ್ನಾಟಕ ಸಂಗೀತದ ಪಿತಾಮಹರೆಂದು ಪರಿಗಣಿಸಲ್ಪಡುತ್ತಾರೆ. ಇವರಿಗೂ ಪೂರ್ವದಲ್ಲಿ ಹರಿದಾಸರೆಂದು ಪ್ರಸಿದ್ಧರಾದ ಶ್ರೀಪಾದರಾಜರು ಹಾಗೂ ಶ್ರೀವ್ಯಾಸರಯರಲ್ಲಿಯೂ ಸಂಗೀತದ ಗುಣಗಳನ್ನು ನಾವು ಕಾಣಬಹುದು. ಸಂಗೀತ ಬಹು ಪರಿಣಾಮಕಾರಿಯಾದ ಮಾಧ್ಯಮ ಎಂಬುದರಲ್ಲಿ ಎರಡು ಮಾತಿಲ್ಲ. ಇಂದಿಗೂ ದಾಸರಪದಗಳು ಬಹು ಜನಪ್ರಿಯವಾಗಿರುವುದು, ಈ ಸಂಗೀತದ ಗುಣದಿಂದ. ಜನಸಾಮಾನ್ಯರ ಮನಸ್ಸನ್ನು ಬಹು ಸುಲಭವಾಗಿ ಆಕರ್ಷಿಸುವ ಶಕ್ತಿ ಸಂಗೀತಕ್ಕಿದೆ. ಎಲ್ಲ ಹರಿದಾಸರು ತಮ್ಮ ಕೃತಿಗಳನ್ನು ತಾಳಬದ್ಧವಾಗಿ ಲಯಬದ್ಧವಾಗಿ ವಿವಿಧ ರಾಗಗಳಲ್ಲಿ ಹಾಡಿದ್ದಾರೆ. ಅರ್ಥ ತಿಳಿಯದ ಜನಸಾಮಾನ್ಯರೂ ಸಹಿತ ಸಂತೋಷಕ್ಕಾಗಿಯಾದರೂ, ಬೇಸರ ಕಳೆದುಕೊಳ್ಳುವುದಕ್ಕಾಗಿಯಾದರೂ, ದಾಸರ ಪದ್ಯಗಳನ್ನು ಹಾಡಿಕೊಳ್ಳುತ್ತಾರೆ. ಈ ದೃಷ್ಟಿಯಲ್ಲಿ ಹರಿದಾಸರದು ಬಹು ಮೌಲಿಕ ಸಾಧನೆ ಎಂದೇ ಹೇಳಬಹುದು.

ಆಚಾರ್ಯ ಮಧ್ವರ ನಂತರ ಆ ಪೀಠಕ್ಕೆ ಬಂದ ಶ್ರೀನರಹರಿತೀರ್ಥರು ಹಲವು ಕನ್ನಡ ಕೃತಿಗಳನ್ನು ಬರೆದು ಹರಿದಾಸ ಸಾಹಿತ್ಯಕ್ಕೆ ನಾಂದಿ ಹಾಡಿದರು. ಅವರ ಕೆಲವು ಕೃತಿಗಳು ಉಪಲಬ್ಧವಿವೆ. ನಂತರ ಶ್ರೀ ಶ್ರೀಪಾದರಾಜರು ಹಲವಾರು ಕೃತಿಗಳನ್ನು ಬರೆಯುವುದರ ಮೂಲಕ ಹರಿದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ನಂತರದಲ್ಲಿ ಬಂದ ಶ್ರೀವ್ಯಾಸರಾಯರು ದಾಸಸಾಹಿತ್ಯವನ್ನು ಬೆಳೆಸುವುದರೊಂದಿಗೆ ದಾಸಸಾಹಿತ್ಯಕ್ಕೆ ಕನಕ, ಪುರಂದರ ಎಂಬ ಎರಡು ಅಮೂಲ್ಯ ಕಾಣಿಕೆಗಳನ್ನು ನೀಡಿ ದಾಸಸಾಹಿತ್ಯದ ಸುವರ್ಣಯುಗವನ್ನು ನಿರ್ಮಿಸಿದರು.

ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆಯನ್ನು ನೀಡಿದ ಶ್ರೀ ಪುರಂದರದಾಸರು ಹಾಗೂ ಶ್ರೀ ಕನಕದಾಸರು ತಾವು ಬದುಕಿದ ಅಂದಿನ ಸಮಾಜದೊಡನೆ ಸಂಪೂರ್ಣ ಬೆರೆತು ಸಮಾಜದ ಎಲ್ಲ ಸ್ತರದ ಜನರೊಡನೆ ಸ್ಪಂದಿಸಿ ದಾಸಸಾಹಿತ್ಯದ ಮೇರೆಗಳನ್ನು ಕನ್ನಡ ನಾಡಿನ ತುಂಬ ವಿಸ್ತರಿಸಿದರು. ಕನಕ–ಪುರಂದರ ಯುಗ ಎಂದು ಕರೆಯುವಷ್ಟರ ಮಟ್ಟಿಗೆ ಅವರು ನಿರ್ಮಿಸಿದ ಸಾಹಿತ್ಯ, ಪ್ರಭಾವಶಾಲಿಯೂ ಹಾಗೂ ಜನಪ್ರಿಯವೂ ಆಗಿದೆ. ಮುಂದೆ ಹದಿನೆಂಟನೆಯ ಶತಮಾನದಲ್ಲಿ ಅವತರಿಸಿದ ಶ್ರೀವಿಜಯದಾಸರು ಹಿಂದಿನಿಂದ ನಡೆದು ಬಂದ ಈ ಹರಿದಾಸ ಸಾಹಿತ್ಯವು ಇಂದಿನವರೆಗೂ ಮುಂದುವರೆಯುವಂತೆ ಮಾಡಿ ತಮ್ಮ ಸುಳಾದಿ, ಕೀರ್ತನೆಗಳ ಮೂಲಕ ಚಿರಂತನವಾಗುವಂತೆ ಮಾಡಿದುದು ಶ್ಲಾಘನೀಯ. ದಾಸಸಾಹಿತ್ಯ ಸಂಪತ್ತನ್ನು ಬೆಳೆಸುವುದರೊಂದಿಗೆ ಅಮೂಲ್ಯವಾದ ಶಿಷ್ಯ ಸಂಪತ್ತನ್ನೂ ಬೆಳೆಸಿ ತನ್ಮೂಲಕ ಹರಿದಾಸ ಸಾಹಿತ್ಯದ ಬೆಳವಣಿಗೆಗೆ ಅಪರೂಪದ ಕಾಣಿಕೆಯನ್ನು ನೀಡಿದ್ದಾರೆ. ಅವರ ಶಿಷ್ಯರೇ ಗೋಪಾಲದಾಸರು. ಅವರ ಶಿಷ್ಯರೇ ಶ್ರೀ ಹರಿಕಥಾಮೃತಸಾರದ ಕರ್ತೃಗಳಾದ ಶ್ರೀ ಜಗ್ನನಾಥ ದಾಸರು. ಇಪ್ಪತ್ತನೆಯ ಶತಮಾನದವರೆಗೂ ಈ ಪರಂಪರೆಯು ಮುಂದುವರೆದು ಬಂದಿರುವುದೇ ಈ ಪರಂಪರೆಯ ವೈಶಿಷ್ಟ್ಯ.

ಹರಿದಾಸ ಸಾಹಿತ್ಯವನ್ನು ಸ್ಥೂಲವಾಗಿ ಹೀಗೆ ವಿಂಗಡಿಸಬಹುದು. ಶ್ರೀ ನರಹರಿ ತೀರ್ಥರಿಂದ ಪ್ರಾರಂಭಿಸಿ ಶ್ರೀ ಪುರಂದರ ಹಾಗೂ ಶ್ರೀ ಕನಕದಾಸರ

ವರೆಗಿನದು ಒಂದು ಯುಗ. ಶ್ರೀ ವಿಜಯದಾಸರಿಂದ ಪ್ರಾರಂಭಿಸಿ ಶ್ರೀ ಜಗನ್ನಾಥದಾಸರವರೆಗಿನದು ಎರಡನೆಯ ಯುಗ; ಅವರ ಶಿಷ್ಯರಾದ ಶ್ರೀಪ್ರಾಣೇಶದಾಸರಿಂದ ಪ್ರಾರಂಭಿಸಿ ಶ್ರೀ ಗುರುಗೋವಿಂದದಾಸರು ಹಾಗೂ ಶ್ರೀ ಸುಂದರವಿಠಲರವರೆಗಿನದು ಮೂರನೇ ಯುಗ. ಹತ್ತೊಂಬತ್ತನೆಯ ಶತಮಾನದಲ್ಲಿ ಅವತರಿಸಿದ ಶ್ರೀ ಗುರುಜಗನ್ನಾಥದಾಸರು ತಮ್ಮ ಜೀವನ–ಕೃತಿಗಳಿಂದ ಹರಿದಾಸ ಸಾಹಿತ್ಯವನ್ನು ಮತ್ತಷ್ಟು ಶ್ರೀಮಂತಗೊಳಿಸಿ ವಿಜೃಂಭಿಸುವಂತೆ ಮಾಡಿದರು. ಹರಿದಾಸರಲ್ಲಿ ಬಂದ ಕೊನೆಯ ಅಪರೋಕ್ಷ ಜ್ಞಾನಿಗಳು ಶ್ರೀಗುರುಜಗನ್ನಾಥರೇ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಅವರ ಜೀವನ ಕೃತಿಗಳು–ಸಾಧನೆ–ಹಾಗೂ ಅವರ ಕೃತಿಗಳ ಸ್ಥೂಲ ಅವಲೋಕನವನ್ನು ಇಲ್ಲಿ ಮಾಡಲಾಗಿದೆ.

## ಜನನ ಹಾಗೂ ಬಾಲ್ಯ

ಶ್ರೀಗುರುಜಗನ್ನಾಥದಾಸರು ಜನ್ಮವೆತ್ತಿದ ಸ್ಥಳ ಕೋಶಿಗಿ. ಇದೊಂದು ಚಿಕ್ಕಗ್ರಾಮ. ಇಂದಿನ ಆಂಧ್ರಪ್ರದೇಶದಲ್ಲಿರುವ ಕರ್ನೂಲ ಜಿಲ್ಲೆಗೆ ಸೇರಿದೆ. ಶ್ರೀಗುರುಜಗನ್ನಾಥದಾಸರು ಅವತರಿಸಿದ ಸಮಯದಲ್ಲಿ, ಈ ಊರಲ್ಲಿ ಒಂದು ಅಗ್ರಹಾರವಿದ್ದು ಸದಾಚಾರ ಸಂಪನ್ನರೂ ಹಾಗೂ ಶಾಸ್ತ್ರವೇತ್ತರೂ ಆದ ಅನೇಕ ವಿದ್ವಾಂಸರು ಈ ಊರಲ್ಲಿ ಇದ್ದುದಾಗಿ ತಿಳಿದು ಬರುತ್ತದೆ. ಆಗಿನ ಕಾಲದಲ್ಲಿ ಈ ಊರಿನ ಇನ್ನೊಂದು ವೈಶಿಷ್ಟ್ಯವೆಂದರೆ ಸುಪ್ರಸಿದ್ಧವಾದ ಶ್ರೀವಾಯುದೇವರ ಮಂದಿರ. ಇಂದಿಗೂ ಕೋಶಿಗಿ ಹನುಮಪ್ಪ ನೆಂದು ಪ್ರಸಿದ್ಧವಾದ ಪ್ರಾಣದೇವರ ಗುಡಿ ಇದು. ಕೌಶಿಕ ಗೋತ್ರೋತ್ಪನ್ನರಾದ ಶ್ರೀ ವೆಂಕಟಗಿರಿಯಾಚಾರ್ಯ–ಸೌ। ಸೀತಮ್ಮ ಎಂಬ ದಂಪತಿಗಳು ಈ ಊರಿನಲ್ಲಿ ವಾಸವಾಗಿದ್ದರು. ವೈದಿಕ ವೃತ್ತಿಯನ್ನೇ ಆಧರಿಸಿದ ಅವರು ತಮ್ಮಧರ್ಮಕ್ಕನುಸಾರವಾಗಿ ಸದಾಚಾರ ಸಂಪನ್ನರಾಗಿದ್ದರು. ಮಂತ್ರಾಲಯದ ಶ್ರೀರಾಘವೇಂದ್ರಸ್ವಾಮಿಗಳನ್ನು ತಮ್ಮ ಉದ್ಧಾರಕರೆಂದು ತಿಳಿದ ಅವರು ಶ್ರೀಗುರುರಾಜರ ಅಂತರಂಗ ಭಕ್ತರಾಗಿದ್ದುಕೊಂಡು ಅವರ ಸೇವೆ ಸ್ಮರಣೆಯಲ್ಲಿಯೇ ಕಾಲ ಕಳೆಯುತ್ತಿದ್ದರು.

ಈ ದಂಪತಿಗಳಿಗೆ ಜೀವನದ ಎಲ್ಲ ಸೌಭಾಗ್ಯಗಳಿದ್ದರೂ ಪುತ್ರಸಂತಾನವಿರಲಿಲ್ಲ. ಇಂಥ ಸ್ಥಿತಿ ಉಂಟಾದರೆ ಯಾವ ತಂದೆ-ತಾಯಿಗಳು ಸುಖದಿಂದಿದ್ದಾರು? ಭಾವುಕರೂ, ಗುರುಭಕ್ತರೂ ಆದ ಅವರು ತಮ್ಮ ಊರನ್ನು ಬಿಟ್ಟರು. ಮಂತ್ರಾಲಯದ ಮಂದಿರಕ್ಕೆ ಬಂದಿಳಿದರು. ವಂಶೋದ್ಧಾರಕ ಪುತ್ರನನ್ನು ಅನುಗ್ರಹಿಸಲು ಗುರುಗಳ ಮುಂದೆ ಪ್ರಾರ್ಥನೆ ಇಟ್ಟರು. ಸೇವಾದೀಕ್ಷೆಯನ್ನು ತೊಟ್ಟರು. ಏಕಾಗ್ರಚಿತ್ತದಿಂದ ಭಕ್ತಿಪೂರ್ವಕ ಶ್ರೀಗುರುರಾಜರ ಸೇವೆ ಮಾಡಿದರು. ಮತ್ತೆ ಊರಿಗೆ ಮರಳಿದರು. ಗುರುಗಳ ಸೇವೆ ವ್ಯರ್ಥವಾದೀತೆ? ಶ್ರೀಗುರುರಾಜರ ಅನುಗ್ರಹದ ರೀತಿ ಹಲವು ಹನ್ನೊಂದು ವಿಧ. ಆಗಿನ ಕಾಲದಲ್ಲಿ ಶ್ರೀಕೃಷ್ಣಾಚಾರ್ಯರೆಂಬ ಅಪೂರ್ವ ಸಾಧಕರೊಬ್ಬರಿದ್ದರು. ಇವರು ಇಭರಾಮಪುರದವರು. ಈ ಊರು ಮಂತ್ರಾಲಯದ ಹತ್ತಿರದಲ್ಲಿದೆ. 'ಇಭರಾಮಪುರದ ಅಪ್ಪಾ ಅವರೇ' ಎಂದು ಜನರು ಭಕ್ತಿಯಿಂದ ಅವರನ್ನು ಸಂಬೋಧಿಸುತ್ತಿದ್ದರು. ಸಜ್ಜನರ ಉದ್ಧಾರಕ್ಕಾಗಿಯೇ ಅವತರಿಸಿದ ಅಪೂರ್ವ ರತ್ನ ಇವರು. ಮಂತ್ರಾಲಯದ ಶ್ರೀಗುರುರಾಜರ ಅವಿಚ್ಛಿನ್ನ ಭಕ್ತರಾಗಿದ್ದ ಇವರು ಆಧ್ಯಾತ್ಮಸಾಧನೆಯಲ್ಲಿ ಸೀಮಾ ಪುರುಷರಾಗಿದ್ದರು. ಅಂದು ಈ ನಾಡಿನ ಸುತ್ತ ಮುತ್ತಲಿನ ಜನರು ಇವರ ಅನುಗ್ರಹಾಕಾಂಕ್ಷಿಗಳಾಗಿದ್ದರು.

ಶ್ರೀಕೃಷ್ಣಾಚಾರ್ಯರು ಹಾಗೂ ಶ್ರೀವೆಂಕಟಗಿರಿಆಚಾರ್ಯರು ಬಾಲ್ಯದಿಂದಲೇ ಆತ್ಮಿಯ ಸ್ನೇಹಿತರಾಗಿದ್ದರು. ಒಂದು ಅಪೂರ್ವಯೋಗವೋ ಎಂಬಂತೆ ಶ್ರೀ ಕೃಷ್ಣಾಚಾರ್ಯರು ಯಾವ ಮುನ್ಸೂಚನೆಯೂ ಇಲ್ಲದೆ ಕೋಶಿಗಿಗೆ ಬಂದು ತಮ್ಮ ಆತ್ಮೀಯ ಮಿತ್ರರಾದ ಶ್ರೀವೆಂಕಟಗಿರಿಯಾಚರ್ಯರ ಮನೆಯಲ್ಲಿ ವಾಸ್ತವ್ಯ ಮಾಡಿದರು. ಆಧ್ಯಾತ್ಮ-ತತ್ತ್ವಜ್ಞಾನಗಳ ವಿಷಯವೇ ಇವರ ಹರಟೆಗೆ ಗ್ರಾಸವಾಗಿತ್ತು. ಈ ಪ್ರಸಂಗದಲ್ಲಿಯೇ ಶ್ರೀವೆಂಕಟಗಿರಿಯಾಚಾರ್ಯರು ತಮ್ಮ ಅಂತರಂಗದ ಅಳಲನ್ನು ಒಟ್ಟಾರೆ ಅವರ ಮುಂದೆ ತೋಡಿಕೊಂಡರು. ತಮಗೆ ಪುತ್ರ ಸಂತಾನವಾಗುವಂತೆ ಅನುಗ್ರಹಿಸಲು ಕೇಳಿಕೊಂಡರು. ಅಪ್ಪಾ ಅವರು ಪ್ರಾಣದೇವರ ಉಪಾಸಕರಾಗಿದ್ದರು. ಪಂಚಮುಖಿಪ್ರಾಣದೇವರೆಂದರೆ ಅವರಿಗೆ

ಪಂಚಪ್ರಾಣ. ತಾವು ಹೋದಲ್ಲೆಲ್ಲಾ ಪ್ರಾಣದೇವರ ಮೂರುತಿಯನ್ನು ತೆಗೆದುಕೊಂಡೇ ಹೋಗುತ್ತಿದ್ದರು ಹಾಗು ಭಕ್ತಿಯಿಂದ ಪೂಜಿಸುತ್ತಿದ್ದರು. ಇದು ಅವರ ದಿನಚರಿಯ ಒಂದು ಭಾಗ.

ಶ್ರೀ ಅಪ್ಪಾಅವರು 'ನಾನೇನು ಶಾಪಾನುಗ್ರಹಶಕ್ತನಲ್ಲ; ಶ್ರೀ ರಾಘವೇಂದ್ರ ಸ್ವಾಮಿಗಳು ಅಂತರಂಗದ ಭಕ್ತನಾದ ನಿನಗೆ ಅನುಗ್ರಹಿಸುವರು. ನೀನು ಮಾಡಿದ ಅವರ ಸೇವೆ ವ್ಯರ್ಥವಾಗುವುದಿಲ್ಲ. ನಮ್ಮ ಪೂಜಾಸಮಯದಲ್ಲಿ ನಾಳೆ ನೀನು ಉಪಸ್ಥಿತನಿರು' ಎಂದು ಹೇಳಿದರು. ಅಂದು ಶ್ರೀಪಂಚಮುಖಿ ಪ್ರಾಣದೇವರನ್ನು ವಿಶೇಷವಾಗಿ ಆರಾಧಿಸಿ ಭಕ್ತಿಪೂರ್ವಕ ಪ್ರಾರ್ಥಿಸುತ್ತ ತಮ್ಮ ಮಿತ್ರನಿಗೆ ಪುತ್ರ ಸಂತಾನವನ್ನು ಅನುಗ್ರಹಿಸುವಂತೆ ಪ್ರಾರ್ಥಿಸುತ್ತ ದೇವರ ಪೆಟ್ಟಿಗೆಗೆ ಕೈಹಾಕಿದರು. ಅಲ್ಲಿ ಒಂದು ಮುತ್ತು ಅವರ ಕೈಗೆ ಸಿಲುಕಿತು. ಅದನ್ನೇ ವೆಂಕಟಗಿರಿಯಾಚಾರ್ಯರಿಗೆ ಕೊಡುತ್ತ 'ಆಚಾರ್ಯ ಚಿಂತಿಸಬೇಡಿರಿ ಹರಿವಾಯುಗಳು ನಿಮಗೆ ಮುತ್ತಿನಂತಹ ಮಗನನ್ನು ಕರುಣಿಸುವರು' ಎಂದರು. ಭಗವದ್ಭಕ್ತರ ಮಾತೆಲ್ಲವೂ ವಾಚಮರ್ಥೋಽನುಧಾವತಿ ಅಲ್ಲವೇ? ಅಂತೂ ದಂಪತಿಗಳ ಆಸೆ ಫಲಿಸಿತು. ಶ್ರೀವೆಂಕಟಗಿರಿಯಾಚಾರ್ಯರಿಗೆ ಮಹಾಭಗವದ್ಭಕ್ತ ಕೋಶಿಗಿಯ ಕಣ್ಮಣಿಯಾಗಲಿರುವ ಮುತ್ತಿನಂತಹ ಪುತ್ರಸಂತಾನವಾಯಿತು. ಕ್ರಿ.ಶ.-೧೮೩.೭ ದುರ್ಮುಖಿನಾಮ ಸಂವತ್ಸರ ಮಾರ್ಗಶಿರ ಶುದ್ಧ ಪಂಚಮಿಯಂದು ಸೌ॥ ಸೀತಮ್ಮನವರು ಮಗುವಿಗೆ ಜನ್ಮ ನೀಡಿದರು. ಇದು ತಮ್ಮ ಕುಟುಂಬದ ಮೇಲೆ ತಮ್ಮ ಕುಲದೇವರ ಅನುಗ್ರಹವೆಂದು ತಿಳಿದ ಆಚಾರ್ಯರು ಮಗುವಿಗೆ 'ಸ್ವಾಮಿರಾಯ' ಎಂದು ಹೆಸರಿಟ್ಟರು. ಮುದ್ದಾದ ಮಗುವಿನ ಆಟ-ಪಾಟಗಳನ್ನು ಕಂಡು ಹಿರಿ-ಹಿರಿ-ಹಿಗ್ಗಿದರು.

ಸ್ವಾಮಿರಾಯನ ಅವತಾರವನ್ನು ಕುರಿತಾಗಿ ಹಲವು ಐತಿಹ್ಯಗಳು ಇವೆ. ಇವರ ನಂತರ ಬಂದ ಇವರ ಶಿಷ್ಯರ ಹಾಗೂ ಇನ್ನಿತರ ಜ್ಞಾನಿಗಳ ವಚನಗಳೇ ಇದಕ್ಕೆ ಆಧಾರ. ಇದು ಭಾವುಕರ ನಂಬಿಕೆ.

ಯತಿಕುಲೋತ್ತುಂಗರೂ, ವಾಯ್ವಾಂಶ ಸಂಭೂತರೂ ಹಾಗೂ ಶ್ರೀನರಸಿಂಹದೇವರ ಅವತಾರಕ್ಕೆ ಕಾರಣೀಭೂತರೂ ಆದ ಶ್ರೀಪ್ರಹ್ಲಾದರಾಜರ ತಮ್ಮಂದಿರಾದ ಅಹ್ಲಾದರ ಅವತಾರವೇ ಇವರು ಎಂಬುದು ಭಾವುಕರ ನಂಬಿಕೆ.

ಗುರುಜಗನ್ನಾಥದಾಸರ ಪ್ರಮುಖ ಶಿಷ್ಯರಾದ ಶ್ರೀವರದೇಶವಿಠಲರು ತಮ್ಮ ಗುರುಗಳ ಅವತಾರಗಳನ್ನು ಕುರಿತು ಹಾಡಿದ್ದು, ಅವರ ಕೀರ್ತನೆಯ ಮೂಲಕ ಈ ಅಂಶವು ತಿಳಿದು ಬರುತ್ತದೆ. ಇವರು ಪ್ರಥಮದಲ್ಲಿ ಕಲಿಯುಗದಲ್ಲಿ ಶ್ರೀಗುರುರಾಜರ ಅನುಗ್ರಹಕ್ಕೆ ಪಾತ್ರರಾದ ಅಪ್ಪಣ್ಣಾಚಾರ್ಯರಾಗಿಯೂ, ನಂತರ ಬೆನಕಪ್ಪನಾಗಿಯೂ, ಮುಂದೆ 'ದಾಸಪ್ಪ' ಎಂದು ಹೆಸರು ಹೊಂದಿ ಮುಂದೆ ಶ್ರೀದವಿಠಲರಾಗಿಯೂ ಆದ ದಾಸರಾಗಿ ಮುಂದೆ ಗುರುಜಗನ್ನಾಥದಾಸರಾಗಿ ಅವರೇ ಅವತರಿಸಿದರು ಎಂಬುದಾಗಿ ಹೇಳಿದ್ದಾರೆ.

ಶ್ರೀವರದವಿಠಲರಂತೂ ಬಹು ಮನೋಜ್ಞವಾಗಿ ತಮ್ಮ ಒಂದು ಕೀರ್ತನೆಯಲ್ಲಿ ಇದನ್ನು ವ್ಯಕ್ತಪಡಿಸಿದ್ದಾರೆ.

'ಎರಡನೆ ಜನ್ಮದಿ ಅಪ್ಪಣಾಭಿದನು ಎನಿಸಿ।
ರಾಯರ ಒಲಿಸಿ'. . .

. . . . . . . . . .

. . . . . . . . . . . . . .

'ಮೂರನೆ ಜನುಮದಿ ಬೆನಕನ ನಾಮದಿ ಬಂದ
ಲಚ್ಚಮರಿಯಲಿ ನಿಂದ'।

. . . . . . . . . . . . .

'ಭರದಲಿ ಧರೆಯೊಳು ಜನಿಸಿದ ಭೂಸುರರಲ್ಲಿ।
ಕರಜಗಿಯಲ್ಲಿ ।'

. . . . . . , . . . . . .

ಶ್ರೀದ ವಿಠಲನ ಅಂಕಿತವನು ತಾಪೊಂದಿ।
ಗುರುಗಳ ಹೊಂದಿ।'
ಭೂಮಿಯೊಳಗೆ ವರ ಮಂತ್ರಾಲಯಪ್ರಾಂತದಲಿ।

ಕೋಸಗಿಯಲ್ಲಿ।
ಆ ಮಹಾ ಭೂಸುರ ವೆಂಕಟಗಿರಿಯಾರ್ಯರಲಿ
ಜನಿಸಿದನಲ್ಲಿ
. . . . . . . . . . . . . . . .
. . . . . . . . . . . . . . .
ಧೀರ ಗುರುಜಗನ್ನಾಥ ವಿಠಲನ ಅಂಕಿತವ
ಪೊಂದಿದ ಮುದವ।' . .

ಶ್ರೀವರದವಿಠಲರೂ ಹಾಗೂ ಶ್ರೀಶ್ಯಾಮಸುಂದರವಿಠಲರೂ ಈ ವಿಷಯವನ್ನು ತಮ್ಮ ಕೀರ್ತನೆಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಬಾಲ್ಯದಲ್ಲಿ ಸ್ವಾಮಿರಾಯನು ಬಹು ಉಡಾಳನಾಗಿದ್ದನೆಂಬುದು ಅವರ ಚರಿತ್ರೆಯಿಂದ ತಿಳಿದು ಬರುತ್ತದೆ. ಇದಕ್ಕೆ ಕಾರಣವೂ ಉಂಟು. ಸ್ವಾಮಿರಾಯನು ಚಿಕ್ಕವನಿದ್ದಾಗಲೆ ಅವನ ತಾಯಿಯು ತೀರಿಕೊಂಡದ್ದರಿಂದ ಅವನ ಅಜ್ಜಿ ಹಾಗೂ ತಂದೆಯರು ಅವನನ್ನು ತುಂಬಾ ಮುದ್ದಾಗಿ ಬೆಳೆಸಿದರು. ಹಲವು ಮಕ್ಕಳನ್ನು ಕಳೆದುಕೊಂಡ ನಂತರ ಇವನೊಬ್ಬನೇ ಬದುಕಿ ಉಳಿದುದೂ ಇದಕ್ಕೆ ಕಾರಣವಿರಬಹುದು.

ತಂದೆ ವೆಂಕಟಗಿರಿಯಾಚಾರ್ಯರು ಸಕಾಲಕ್ಕೆ ಚೌಲ-ಉಪನಯನಾದಿಗಳನ್ನು ನೆರವೇರಿಸಿದರು. ಮೊದಲೇ ಸ್ಫುರದ್ರೂಪಿಯಾಗಿದ್ದ ಸ್ವಾಮಿರಾಯನು ಸಂಸ್ಕಾರದ ನಂತರ ತುಂಬಾ ಆಕರ್ಷಕನಾಗಿಯೂ, ಮೋಹನಾಂಗನಾಗಿಯೂ ಕಾಣಿಸುತ್ತಿದ್ದನು. ಸ್ವತಃ ಪಂಡಿತರಾದ ಅವನ ತಂದೆ ಅವನ ವಿದ್ಯಾಭ್ಯಾಸದ ಉಸ್ತುವಾರಿಯನ್ನು ವಹಿಸಿದರು. ಆದರೆ ಸ್ವಾಮಿರಾಯನ ಮನಸ್ಸು ಮಾತ್ರ ಅಭ್ಯಾಸದ ಕಡೆಗೆ ಎಳಸಲಿಲ್ಲ. ಯಾವಾಗಲೂ ತನ್ನ ವಯಸ್ಸಿನ ಹುಡುಗರೊಂದಿಗೆ ಆಟ-ನೋಟಗಳಲ್ಲಿ ಮಗ್ನನಾಗಿದ್ದ ಸ್ವಾಮಿರಾಯನು ತುಂಬಾ ಹಟಮಾರಿಯೂ ಆಗಿದ್ದನು. ಅವನ ತಂದೆಗೆ ವ್ಯಥೆಯಾದರೂ ಅದನ್ನು ಹೇಳಲಾರದಷ್ಟು ನಿಸ್ಸಹಾಯಕರಾಗಿದ್ದರು. ಮದುವೆಯಾದರೆ ಮಗನು ಹಾದಿಗೆ ಬರಬಹುದೆಂದು ವಿಚಾರಿಸಿದ ಅವರು ಅವನಿಗೆ ಮದುವೆಯನ್ನೂ ಮಾಡಿದರು. ಆ ಹುಡುಗಿಯು

ಮದುವೆಯಾದ ಎರಡೇ ವರುಷದಲ್ಲಿ ಇಲ್ಲವಾದಳು. ಅವರ ತಂದೆ ಸ್ವಾಮಿರಾಯನಿಗೆ ಎರಡನೇ ಮದುವೆಯನ್ನು ಮಾಡಿದರು. ಆದರೆ ಮೊದಲನೆಯ ಪತ್ನಿಯ ಸಾವಿನಿಂದಾಗಲಿ ಅಥವಾ ಎರಡನೆ ಪತ್ನಿಯ ಪ್ರವೇಶದಿಂದಾಗಲಿ ಸ್ವಾಮಿರಾಯನ ಜೀವನದಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ಉಂಡಾಡಿ ಭಟ್ಟನಂತೆ ಕೇವಲ ಊಟ–ಆಟಗಳಿಗೇ ಅವನ ಜೀವನ ಮೀಸಲಾಗಿತ್ತು. ಯಾವ ಕೆಲಸಕ್ಕೂ ಬಾರದ ಹುಡುಗನಿವನೆಂದು ಮನೆಯವರೂ, ಊರವರು ಅಂದುಕೊಳ್ಳುವಂತಾಯಿತು. ವೆಂಕಟಗಿರಿಯಾಚಾರ್ಯರು ತುಂಬಾ ಚಿಂತಾಕ್ರಾಂತರಾದರು. ಶ್ರೀಹರಿವಾಯು ಗುರುಗಳ ಅನುಗ್ರಹದಿಂದ ಜನಿಸಿದ ಪುತ್ರ ಈ ಸ್ಥಿತಿಗೆ ಹೇಗೆ ಬಂದನೆಂಬುದು ಅವರಿಗೆ ಬಿಡಿಸಲಾರದ ಒಗಟಾಗಿತ್ತು.

## ವಾಯುದೇವರ ಉಪಾಸನೆ

ಜೀವನದಲ್ಲಿ ಮಹತ್ವದ ತಿರುವು ಉಂಟಾಗಬೇಕಾದರೆ ಆ ಯೋಗಬರಬೇಕು. ಕಾಲನಾಮಕ ಪರಮಾತ್ಮನ ಕೃಪೆ ಉಂಟಾಗಬೇಕು. ಜೀವನ ಪ್ರಾರಬ್ಧಕರ್ಮಗಳು ತೀರಬೇಕು. ಶ್ರೀಪುರಂದರದಾಸರು, ಶ್ರೀಕನಕದಾಸರು ಶ್ರೀವಿಜಯದಾಸರು–ಶ್ರೀಗೋಪಾಲದಾಸರು–ಶ್ರೀ ಜಗನ್ನಾಥದಾಸರು ಇವರೆಲ್ಲರ ಜೀವನದಲ್ಲೂ ಈ ಮಹತ್ವದ ತಿರುವನ್ನು ನಾವು ಕಾಣುತ್ತೇವೆ. ಮುಂದೆ ಗುರುಜಗನ್ನಾಥ ದಾಸನಾಗಲಿರುವ ಸ್ವಾಮಿರಾಯನೂ ಇದಕ್ಕೆ ಹೊರತಲ್ಲ.

ಈಗಾಗಲೇ ೨೪–೨೫ ವರುಷ ತುಂಬಿದ ಸ್ವಾಮಿರಾಯನನ್ನು ಆ ಊರಿನ ಹಿರಿಯರೊಬ್ಬರು ಹೀಗೆ ಆಕ್ಷೇಪಿಸಿದರು. 'ನಿನ್ನ ತಂದೆಯಾದರೋ ದೊಡ್ಡವಿದ್ವಾಂಸರು, ಸದಾಚಾರ ಸಂಪನ್ನರು. ಅವರ ಹೆಸರಿಗೆ ಕಲಂಕತರುವಂತಹ ಮಗ ನೀನಾಗಿರುವೆ. ನಿನ್ನ ತಂದೆಗೆ ನೀನೊಂದು ಭಾರ' ಹೀಗೆ ಅರ್ಥಬರುವಂತೆ ಮಾತನಾಡಿದರು. ಆ ಹಿರಿಯರ ಮಾತು ಸ್ವಾಮಿರಾಯನ ಮರ್ಮಕ್ಕೆ ನಾಟಿದಂತಾಯಿತು. ಮೈತುಂಬ ರೋಮಾಂಚನವಾದಂತಾಯಿತು. ಅವನ ಚಿತ್ತವೆಲ್ಲವೂ ಜರ್ಝರಿತವಾಯಿತು. ಯಾವುದೋ ಅವ್ಯಕ್ತ ಶಕ್ತಿಯೊಂದು ಅವನ

ಮನಸ್ಸನ್ನು ಕುಟುಕಿಧಂತಾಯಿತು. ಇದೆಲ್ಲವೂ ಶ್ರೀ ಹರಿಯ ಕಾರ್ಯ. ಆ ಹಿರಿಯರಲ್ಲಿ ನಿಂತು ಮಾತನಾಡಿಸಿದವನು ಶ್ರೀಹರಿಯೇ. ಸ್ವಾಮಿರಾಯರಲ್ಲಿ ನಿಂತು ಆ ಅನುಭವವನ್ನು ಅವರಿಗೆ ತಂದು ಕೊಟ್ಟವನು ಶ್ರೀ ಹರಿಯೇ. ಶ್ರೀ ಜಗನ್ನಾಥದಾಸರ ಮಾತು ಇಲ್ಲಿ ನೆನಪಿಗೆ ಬರುತ್ತದೆ.

'ಒಬ್ಬನಲಿ ನಿಂದಾಡುವನು
ಮತ್ತೊಬ್ಬನಲಿ ನೋಡುವನು
ಬೇಡುವನೊಬ್ಬನಲಿ ಮಾತಾಡುವನು ಬೆರಗಾಗಿ'।

ಸ್ವಾಮಿರಾಯನ ಸ್ಮೃತಿಪಟಲದಲ್ಲಿ ಅವನು ಕಳೆದ ಬಾಲ್ಯಾವಸ್ಥೆಯ ನೆನಪುಗಳ ಸುರುಳಿ ಬಿಚ್ಚತೊಡಗಿತು. ತಾನು ಉಡಾಳ ಗೆಳೆಯರೊಡನೆ ವ್ಯರ್ಥ ಸಮಯ ಕಳೆದದ್ದು, ತನ್ನ ತಂದೆಯು ಕಲಿಸಿದ ಅಧ್ಯಯನಕ್ಕೆ ಕಿವಿಗೊಡದೇ ಇದ್ದುದು, ಹೀಗೆ ಹಲವಾರು ಸ್ಮೃತಿಗಳು.

ಸ್ವಾಮಿರಾಯನ ಮನಸ್ಸು ಒಂದು ಹಂತಕ್ಕೆ ಬಂದಿತು. ತಾನು ಇಷ್ಟುದಿನ ಮಾಡಿದ್ದು ಬಹು ತಪ್ಪು ಎನಿಸಿತು. ಬಹಳ ಪಶ್ಚಾತ್ತಾಪವಾಯಿತು. ಪಶ್ಚಾತ್ತಾಪಪಟ್ಟಷ್ಟೂ ಮಾನಸಿಕ ಭಾವನೆಗಳು ಶುದ್ಧಿ ಎನಿಸ ತೊಡಗಿದವು. ಕಣ್ಣು ಬಿಟ್ಟಷ್ಟೂ ಅವನ ದೃಷ್ಟಿಗೆ ಸತ್ಯವೊಂದು ಗೋಚರಿಸಿದಂತಾಯಿತು. ಮನಸ್ಸು ಒಂದು ನಿರ್ಧಾರಕ್ಕೆ ಬಂದಂತಾಯಿತು. ಆಧ್ಯಾತ್ಮಿಕಸಾಧನೆ-ಸಿದ್ಧಿಗಳ ಪಥ ಅವನ ಮುಂದೆ ಸುಳಿದಂತಾಯಿತು. ಯಾರಿಗೂ ಹೇಳದೇ ಕೋಶಿಗಿಯನ್ನು ಬಿಟ್ಟನು.

'ಬುಡಬಲದೊಡ್ಡಿ' ಎಂಬುದು ಕೋಶಿಗಿಯ ಹತ್ತಿರದ ಒಂದು ಗ್ರಾಮ. ಅಲ್ಲಿ ಒಂದು ಹನುಮಂತದೇವರ ದೇವಸ್ಥಾನ. ಪ್ರಶಾಂತಸ್ಥಳ. ಪ್ರಾಣದೇವರ ಸನ್ನಿಧಾನದಿಂದ ಪವಿತ್ರ ತಾಣ; ಆಧ್ಯಾತ್ಮಸಾಧನೆಗೆ ಹೇಳಿ ಮಾಡಿಸಿದಂತಹ ಕಣ. ಸ್ವಾಮಿರಾಯನು ತನ್ನ ಕಠಿಣ ಸೇವೆಯನ್ನು ಪ್ರಾರಂಭಿಸಿದನು.

'ಪ್ರಾಣನಾಥನೇ ಬಹು ಪ್ರಾಣ ತಪ್ಪಿದೆ ಎನ್ನ
ತ್ರಾಣವಗೊಟ್ಟು ಪೊರೆಯೋ

ಅಕ್ಷೋಣಿತಳದಿ ದುರ್ಗ್ಗಣಿ ಕಾಣದೀ ಪರಿ
ಕ್ಷೀಣನಾಗಿ ನಾ ಬಂದೆ ಮುಖ್ಯ ಪ್ರಾಣನಾಥನೆ'
ಎಂದು ಹಾಡುತ್ತ ವಾಯುದೇವರ ಉಪಾಸನೆಯನ್ನು ಪ್ರಾರಂಭಿಸಿದರು.
"ಭಾರತಿರಮಣ ನಾ ಸಾರುವೆ ಚರಣಾ
ತೋರೊ ಮನ್ಮನದೊಳು ಭೂರಿ ಸುಕರಣಾ"
. . . . . . . . . . . . . . . . . . . .
. . . . . . . . . . . . . . . . . . . . . .
ಕುಟಿಲ ದುರ್ವಿಷಯ ಲಂಪಟ ಬಿಡಿಸೀಗಾ

ದಿಟ ಗುರುಜಗನ್ನಾಥ ವಿಠಲನಣುಗಾ"– ಎಂದು ಮನದುಂಬಿ ಭಕ್ತಿಯಿಂದ ಆತ್ಮನಿವೇದನೆ ಮಾಡಿಕೊಂಡರು. ಆರ್ತರಾಗಿ ಪರಿಪರಿಯಿಂದ ಬೇಡಿಕೊಂಡರು. ಸ್ವಾಮಿರಾಯನ ಕೂಗು ವಾಯುದೇವರಿಗೂ ಕೇಳಿಸಿತು. ಪಶ್ಚಾತ್ತಾಪದಿಂದ ಅವರ ಮನಸ್ಸು ಶುದ್ಧವಾಗಿತ್ತು. ಸ್ವಾಮಿರಾಯನ ಸೇವೆಯನ್ನು ಪ್ರಾಣದೇವರು ಮನಃಪೂರ್ವಕವಾಗಿ ಸ್ವೀಕರಿಸಿದ್ದರು. ಅವರ ಮೇಲೆ ವಾಯುದೇವರು ತಮ್ಮ ಅನುಗ್ರಹ ಹಸ್ತವನ್ನಿಟ್ಟರು. ಸ್ವಾಮಿರಾಯನ ನಾಲಿಗೆಯ ಮೇಲೆ ಬೀಜಾಕ್ಷರಗಳನ್ನು ಬರೆದರು. ಅದರೊಂದಿಗೆ ಶ್ರೀಮಂತ್ರಾಲಯಪ್ರಭುಗಳೇ ಅವರಿಗೆ ಪಾಠ ಹೇಳುವರೆಂಬುವದನ್ನೂ ಸೂಚಿಸಿದರು. ಶ್ರೀ ಹರಿವಾಯುಗಳ ಅನುಗ್ರಹವಾದ ಮೇಲೆ ಗುರುಗಳ ಅನುಗ್ರಹ ಆಗುವದು ತಡವೇ?

ಸ್ವಾಮಿರಾಯನ ಜೀವನದಲ್ಲಿ ಇದೊಂದು ಅವಿಸ್ಮರಣೀಯದಿನ. ಪ್ರಾಜ್ಞ ನಾಮಕ ಪರಮಾತ್ಮನು ಅವರನ್ನು ಗಾಢನಿದ್ರಾವಸ್ಥೆಗೆ ಕರೆದುಕೊಂಡು ಹೋಗಿದ್ದಾನೆ. ಅವರು ಸ್ವಪ್ನದಲ್ಲಿ ಕಂಡದ್ದಾದರೂ ಏನು? ಸ್ವಾಮಿರಾಯನ ಮನೆತನದ ಗುರುಗಳೂ, ಜ್ಞಾನಿಗಳೂ ಆದ ಇಭರಾಮಪುರದ ಅಪ್ಪಾ ಅವರು ಮುಂದೆ ಮುಂದೆ ಬರುತ್ತಿದ್ದಾರೆ. "ಸ್ವಾಮಿರಾಯ, ಇತ್ತ ನೋಡು ಯಾರು ಬರುತ್ತಿದ್ದಾರೆ. ಕಾಮಧೇನು–ಕಲ್ಪವೃಕ್ಷ ಸ್ವರೂಪರಾದ ಸಾಕ್ಷಾತ್ ಮಂತ್ರಾಲಯ ಪ್ರಭುಗಳನ್ನು ಇಲ್ಲಿಗೆ ಕರೆದು ತಂದಿರುವೆ. ಇಂದಿನಿಂದ ನಿನ್ನ ಜೀವನದಲ್ಲಿ ಹೊಸ ಅಧ್ಯಾಯ ಪ್ರಾರಂಭವಾಯಿತು. ಈ ಮಧ್ವವಾರಿಧಿಚಂದ್ರಮರು ನಿನಗೆ ವೇದಾಂತ ಪಾಠಗಳನ್ನು

ಹೇಳಿಕೊಡುವರು" ಎಂಬ ಮಾತುಗಳು ಸ್ವಾಮಿರಾಯನ ಕಿವಿಯ ಮೇಲೆ ಬಿದ್ದಂತಾಯಿತು.

ಸ್ವಪ್ನಾವಸ್ಥೆಯಲ್ಲಿದ್ದ ಸ್ವಾಮಿರಾಯನು ಒಂದು ಮಹಾನ್ ಬೆಳಕಿನ ಬೆಟ್ಟವೇ ಅಪ್ಪಾ ಅವರ ಹಿಂದೆ ಬರುತ್ತಿರುವದನ್ನು ಕಂಡನು. ಆ ದಿವ್ಯಪ್ರಭೆಯ ಮಧ್ಯದಲ್ಲಿ ಮಂದಸ್ಮಿತ ಮುಖಾರವಿಂದದ ಮಂತ್ರಾಲಯದ ಮುನಿಪುಂಗವರನ್ನು ಕಂಡನು. ಒಂದು ಕ್ಷಣ ಅವನ ಮೈತುಂಬ ರೋಮಾಂಚನವಾಯಿತು. "ಓಂ ಅಥಾತೋಬ್ರಹ್ಮಜಿಜ್ಞಾಸಾ ಓಂ" ಪ್ರಾರಂಭವಾಯಿತು ಶ್ರೀ ಪರಿಮಳಾಚಾರ್ಯರ ಪಾಠ, "ತವ ಸಂಕೀರ್ತನಾತ್ ವೇದಶಾಸ್ತ್ರಾರ್ಥ ಜ್ಞಾನ ಸಿದ್ಧಯೇ"– ಎಂಬುದು ಶ್ರೀ ಗುರುರಾಜರ ಪ್ರಶಸ್ತಿ. ಅಂದಮೇಲೆ ಅವರ ಸಾಕ್ಷಾತ್ ದರ್ಶನ ಪಡೆದವನೇ ಧನ್ಯ; ಮಾನ್ಯ. ಶ್ರೀಕೃಷ್ಣನು ಅರ್ಜುನನಿಗೆ ಭಗವದ್ಗೀತೆಯನ್ನು ಬೋಧಿಸಿದಂತೆ, ಶ್ರೀವೇದವ್ಯಾಸರು ಆಚಾರ್ಯಮಧ್ವರಿಗೆ ತತ್ತ್ವಜ್ಞಾನ ನೀಡಿದಂತೆ– ಶ್ರೀಗುರುರಾಜರು ಸ್ವಾಮಿರಾಯನಿಗೆ ವೇದಾಂತ ಪಾಠ ಹೇಳಿದರು. ಅವರಿಗೆ ಅರಿವಿಲ್ಲದಂತೆ ಶ್ರೀಮದಾಚಾರ್ಯರ ತತ್ತ್ವಜ್ಞಾನ ಅವರ ತಲೆಯಲ್ಲಿ ತುಂಬಿತು; ಮನಸ್ಸಿನಲ್ಲಿ ಹೊಳೆಯಿತು. ಮುಖದಿಂದ ಹೊರಸೂಸತೊಡಗಿತು. ದಿನದಿಂದ ದಿನಕ್ಕೆ ಸ್ವಾಮಿರಾಯನ ಮುಖದ ಮೇಲೆ ದಿವ್ಯ ತೇಜಸ್ಸು ಕಾಣತೊಡಗಿತು.

ಸ್ವಾಮಿರಾಯನ ಚರ್ಯೆಯು ಹಾಗೂ ದಿನಚರಿಯೂ ಪೂರ್ಣ ಬದಲಾದವು. ನಿತ್ಯದಲ್ಲಿ ಧರ್ಮಾನುಷ್ಠಾನ, ಶುದ್ಧಕರ್ಮಾಚರಣೆ ಪ್ರಾರಂಭವಾದವು. ಮಿಕ್ಕ ಸಮಯವನ್ನೆಲ್ಲ ವೇದಾಂತ ಚಿಂತನೆಯಲ್ಲಿ ವ್ಯಯಿಸಹತ್ತಿದರು. ಇಂತಹ ಮಗನನ್ನು ಕಂಡರೆ ಯಾವ ತಂದೆಗೆ ತಾನೆ ಸಂತಸವಾಗಲಿಕ್ಕಿಲ್ಲ? ಶ್ರೀವೆಂಕಟಗಿರಿ ಆಚಾರ್ಯರ ಸಂತಸಕ್ಕೆ ಪಾರವೇ ಇಲ್ಲದಂತಾಯಿತು. ತಮಗೆ ಸಂತತಿಯಾಗುವುದಕ್ಕೂ ಪೂರ್ವದಲ್ಲಿ ಶ್ರೀಅಪ್ಪಾ ಅವರು ಹೇಳಿದ ಮಾತು ಫಲಿಸಿದುದನ್ನು ಕಣ್ಣಾರೆ ಕಂಡ ಅವರು ಹಿರಿ ಹಿರಿ ಹಿಗ್ಗಿದರು. ಜ್ಞಾನಿಗಳು ಹೇಳುವಂತೆ "ವಾಚಮಥೋರ್ನುಧಾವತಿ" ಎಂಬ ಮಾತು ಅವರನಿದರ್ಶನಕ್ಕೆ ಬಂದಂತಾಯಿತು. ಉಡಾಳ ಸ್ವಾಮಿರಾಯನನ್ನು ಕಂಡ ಆ ಊರಿನ ಜನರು

ಅವನು ವಿದ್ವಾಂಸನಾದದ್ದನ್ನು ನೋಡಿ ಅಚ್ಚರಿಪಟ್ಟರು. ಸ್ವಾಮಿರಾಯನು ವಿದ್ವಾನ್ ಸ್ವಾಮಿರಾಯರಾದರು. ಪಂಡಿತಮಂಡಳಿಯಲ್ಲಿ ಅವರಿಗೆ ಸ್ಥಾನ ದೊರೆಯಹತ್ತಿತು. "ರಾಯ" ಪದವಿ ಹೋಗಿ "ಆಚಾರ್ಯ" ಪದವಿ ತಾನೇ ತಾನಾಗಿ ಬಂದಿತು. ಎಲ್ಲರೂ ಇವರನ್ನು "ಕೋಶಿಗಿ ಸ್ವಾಮಿರಾಯಾಚಾರ್ಯ" ಎಂದು ಸಂಬೋಧಿಸತೊಡಗಿದರು. ಇದೇ ಗುರುವನುಗ್ರಹದ ಸಂಕೇತವಲ್ಲವೇ?

ಸದಾ ಆಧ್ಯಾತ್ಮದ ಚಿಂತನೆಯಲ್ಲಿ ಇರುವ ಸ್ವಾಮಿರಾಯಾಚಾರ್ಯರಿಗೆ ಶ್ರೀಮದ್ಭಾಗವತ ಪುರಾಣವನ್ನು ಹೇಳುವ ತವಕ ಉಂಟಾಯಿತು. ಹಿರಿಯರ ಸಮ್ಮತಿಯನ್ನು ಪಡೆದು ಹೇಳುವದು ಸೂಕ್ತವೆಂದು ಅರಿತ ಆಚಾರ್ಯರು ತಮ್ಮ ತಂದೆಯವರಿಗೆ ನಮಸ್ಕರಿಸಿ ತಮ್ಮ ಅಭಿಲಾಷೆಯನ್ನು ನಿವೇದಿಸಿಕೊಂಡರು. ತಂದೆಗಾದರೋ ಸ್ವರ್ಗ ಮೂರೇಗೇಣು ಉಳಿದಷ್ಟು ಸಂತಸ, ಹಿಗ್ಗು. 'ಅಸ್ತು' ಎಂದರು ಆಚಾರ್ಯರು 'ವಿದ್ಯಾವತಾಂಭಾಗವತೇ ಪರೀಕ್ಷಾ' ಎಂಬುದು ಪಂಡಿತ ಮಂಡಳಿಯಲ್ಲಿ ಜನ-ಜನಿತವಾದ ಮಾತು. ಪ್ರಾರಂಭವಾಯಿತು, ಆಚಾರ್ಯರ ಅಮೋಘ ಪುರಾಣ ಕಥನ. ಶ್ರೀಮದ್ಭಾಗವತದ ಪ್ರಾರಂಭದ ಪದ್ಯವೊಂದನ್ನೇ ತೆಗೆದು ಕೊಂಡು 'ಸಂಕ್ಷೇಪ ವಿಸ್ತರಾಭ್ಯಾಂಚ ಕಥಯಂತಿ ಮನೀಷಿಣಃ' ಎಂದು ಪ್ರಾರಂಭಿಸಿ ಸಮಗ್ರ ಭಾಗವತದ ಸಂದೇಶವೆಲ್ಲವೂ ಮೊದಲನೆಯ ಪದ್ಯದಲಿಯೇ ಹೇಗೆ ಅಡಗಿದೆ ಎಂಬುದನ್ನು ತೋರಿಸುತ್ತ ಆ ಶ್ಲೋಕದಲ್ಲಿ ಅಡಗಿದ ಶ್ರೀ ವೇದವ್ಯಾಸರ ಆಸೆ, ಆಕೂತಗಳನ್ನು ಎಳೆ-ಎಳೆಯಾಗಿ ಬಿಡಿಸಿ ವ್ಯಾಖ್ಯಾನಿಸಿದರು. ಆಲಿಸಿದ ಶ್ರೋತೃಗಳು ಆಚಾರ್ಯರ ಅದ್ಭುತ ಪಾಂಡಿತ್ಯವನ್ನು- ವಾಗ್ಝರಿಯನ್ನು ಕೇಳಿ ಆಶ್ಚರ್ಯಚಕಿತರಾದರು. ಮನದಣಿ ಸಂತೋಷಪಟ್ಟರು. 'ಕಿಮಲಭ್ಯಂ ಭಗವತೀ ಪ್ರಸನ್ನೇ ಶ್ರೀನಿಕೇತನೆ' ಅಲ್ಲವೆ? ಭಗಂತನ ಪ್ರಸಾದವಾದರೆ ಯಾವುದು ತಾನೆ ಅಸಾಧ್ಯ?

### ನಂಬಿ ಕೆಟ್ಟವರಿಲ್ಲವೋ

'ನಂಬಿ ಕೆಟ್ಟವರಿಲ್ಲವೋ, ಶ್ರೀಗುರುರಾಜರ ನಂಬದೆ
ಕೆಡಬೇಡಿರೋ'- ಎನ್ನುತ್ತದೆ ದಾಸವಾಣಿ

ಶ್ರೀಗುರುರಾಜರ ಕರುಣಾನುಗ್ರಹಗಳನ್ನು ಪಡೆದ ಶ್ರೀಸ್ವಾಮಿರಾಯರಿಗೆ ಶ್ರೀರಾಯರಲ್ಲಿ ಭಕ್ತಿ-ಶ್ರದ್ಧೆಗಳು ಇಮ್ಮಡಿಗೊಂಡವು. ತಮ್ಮ ಜೀವನದಲ್ಲಿ ಅದ್ಭುತ ಪವಾಡವನ್ನು ಮಾಡಿ ಮೂಕನನ್ನೂ ಮುಕುಂದಶಯನನನ್ನಾಗಿ ಮಾಡುವ ಕುಂಠನನ್ನೂ ಶ್ರೇಷ್ಠ ಪಂಡಿತನನ್ನಾಗಿಸುವ ಶ್ರೀರಾಯರ ಅದ್ಭುತ ಸಾಮರ್ಥ್ಯವನ್ನು ಸ್ವತಃ ಅನುಭವಿಸಿದ ಅವರು ಶ್ರೀರಾಯರ ವಿಶೇಷ ಸೇವೆಯನ್ನು ಮಾಡಲು ತಮ್ಮ ಶೇಷಾಯುಷ್ಯವನ್ನೇ ಅವರ ಸೇವೆಗೆ ಮುಡಿಪಾಗಿಡಲು ನಿರ್ಧರಿಸಿದರು. ಮಂಚಾಲಿಯ ಹತ್ತಿರದ ಊರಿನವರಾದ ಅವರು ಹಲವು ಸಲ ಅಲ್ಲಿಗೆ ಹೋಗಿ ಬಂದಿದ್ದರೂ ಈ ಸಲ ಅಲ್ಲಿಗೆ ಹೊರಡುವ ಅವರ ಸಂಕಲ್ಪವೇ ಬೇರೆಯಾಗಿತ್ತು. ಬೃಂದಾವನದಲ್ಲಿ ಶ್ರೀಗುರುರಾಜರನ್ನು ಕಾಣುವ ಅವರ ದೃಷ್ಟಿಯೇ ಭಿನ್ನವಾಗಿತ್ತು. ಆಚಾರ್ಯರು ಮಂತ್ರಾಲಯದ ಮಂದಿರವನ್ನು ಪ್ರವೇಶಿಸಿದರು. ಗುರುರಾಜರ ಬೃಂದಾವನದ ಮುಂದೆ ನಿಂತರು.

'ನೋಡಿದ್ಯಾ ಗುರುರಾಯರ ನೋಡಿದ್ಯಾ'-ಎಂದು ತಮ್ಮ ಮನಸ್ಸನ್ನು ಕೇಳಿಕೊಂಡರು. ಅವರ ಮನದ ಮೂಲೆಯಲ್ಲಿ ಉತ್ತರ ಸಿದ್ಧವಾಗಿತ್ತು.

'ನೋಡಿದೆ ಗುರುರಾಯರನ್ನ ಈ
ರೂಢಿಯೊಳಗೆ ಮೆರೆವೊ ಸಾರ್ವಭೌಮನ್ನ'

ಅಂದು ಅವರು ಕಂಡ ದೃಶ್ಯವಾದರು ಎಂತಹುದು? ಅವರು ಮುಂದೆ ದಾಸರಾದ ಮೇಲೆ ಅಂದಿನ ಅವರ ಅಪೂರ್ವ ಅನುಭವವನ್ನು ತಮ್ಮ ಕೀರ್ತನೆಯಲ್ಲಿ ಶಬ್ದ ಮಾಧ್ಯಮದಲ್ಲಿ ಬಿಡಿಸಿದ್ದಾರೆ.

'ಮುದ್ದು ಬೃಂದಾವನ ಮಧ್ಯದೊಳಗಿದ್ದು
ತಿದ್ದಿ ಹಚ್ಚಿದ ನಾಮ-ಮುದ್ರೆಗಳೊಪ್ಪುತೀಗ
ಗಳದೊಳು ಶ್ರೀ ತುಳಸಿ ನಳಿನಾಕ್ಷಮಾಲೆಯು
ಚಲುವಾ ಮುಖದೊಳು-ಪೊಳೆವೊ ದಂತಗಳಿಂದ
ಹೃದಯ ಸದನದಲ್ಲಿ ಪದುಮನಾಭನ ಭಜಿಸಿ
ಮುದಮನದಿಂದ ನಿತ್ಯ ಸದಮಲ ರೂಪ ತಾಳಿ'

ದಂತಹ ಶ್ರೀ ಗುರುರಾಜರ ಭವ್ಯ ಆಕೃತಿಯನ್ನು ಕಂಡ ಅವರೇ ಧನ್ಯರು. ಎಷ್ಟು ಜನರಿಗೆ ಇಂಥ ಪುಣ್ಯ ಲಭಿಸೀತು!

ಅದೇ ಉಸುರಿನಲ್ಲಿ ತಮ್ಮ ಮನ ಮಂದಿರಕ್ಕೂ ಆಗಮಿಸುವಂತೆ ಗುರುಗಳನ್ನು ಭಕ್ತ್ಯುದ್ರೇಕದಿಂದ ಪ್ರಾರ್ಥಿಸಿದರು.

'ದಯಮಾಡೋ ದಯಮಾಡೋ

. . . . . . . . . . . . . . . .

. . . . . . . . . . . . . . . .

ನಿಲ್ಲಿಸೊ ಎನಮನ ಎಲ್ಲಿ ಚಲಿಸದಂತೆ',

ಶ್ರೀಗುರುರಾಜರಿಗೆ ಅವರ ಪ್ರಾರ್ಥನೆ ಕೇಳಿಸಿತೇನೋ! ಗುರುರಾಜರು ಅವರ ಮನವನ್ನು ಪ್ರವೇಶಿಸಿದರು–ತಕ್ಷಣ ಆಚಾರ್ಯರು

'ಬಂದ ಶ್ರೀ ರಾಘವೇಂದ್ರ ಮೂರುತಿ ಮನ–
ಮಂದಿರದೊಳಗೆ ಸರಸದಿ
ಬಂದನು ಭಕುತನ ಬಂಧನ ಬಿಡಿಸ್ಯಾ–
ನಂದ ನೀಡುತ ಮುದದಿಂದಲಿ ಭರದಿಂದ'–

ಎಂದು ಹಾಡಿ ಕುಣಿದಾಡಿದರು. ಮಂತ್ರಾಲಯದಿಂದ ಹಿಂದಿರುಗಿ ತಮ್ಮ ಊರಿಗೆ ಮರಳಿದರೂ ತಮ್ಮ ಮನೆಯನ್ನೇ ಮಂತ್ರಾಲಯವನ್ನಾಗಿಸಿ, ಸದಾ ಮನಸ್ಸಿನಲ್ಲೆ ಬೃಂದಾವನವನ್ನು ಸ್ಥಾಪಿಸಿ, ಶ್ರೀಗುರುರಾಜರ ಸ್ಮರಣೆಯನ್ನೇ ಮಾಡುತ್ತಿದ್ದ ಈ ಏಕಾಂತ ಭಕ್ತನ ಪ್ರಾರ್ಥನೆಗೆ ಮೆಚ್ಚಿದ ಶ್ರೀ ಗುರುರಾಜರು ಆಚಾರ್ಯರ ಮನೆಗೂ ಬಂದರು.

"ಕರೆದಲ್ಲಿಗೆ ಬರುವ ಮಂತ್ರಾಲಯಧೊರೆಯ" ಎಂಬ ಭಕ್ತರ ಮಾತನ್ನು ಸತ್ಯವನ್ನಾಗಿಸಿದರು. ಆಚಾರ್ಯರ ಭಕ್ತಿಗೆ ಮೆಚ್ಚಿದ ಶ್ರೀರಾಘವೇಂದ್ರ ಸ್ವಾಮಿಗಳು ಅವರ ದೇವರ ಮನೆಯಲ್ಲಿಯ ಒಂದು ಮಣೆಯ ಮೇಲೆ ಮೂಡಿನಿಂತರು.

ಸದಾ ಅವರ ಮನಸ್ಸಿನಲ್ಲಿ ಹೊಳೆಯುತ್ತಿದ್ದ ಗುರುಗಳ ಆಕೃತಿಯು ಆ ಮಣೆಯ ಮೇಲೆ ಸ್ಪಷ್ಟವಾಗಿ ಗೋಚರಿಸತೊಡಗಿತು. ತಮ್ಮ ಭಾಗ್ಯದ ನಿಧಿ, ಒಲುಮೆಯಸಿರಿ, ಬದುಕಿನ ಭಾಗ್ಯ, ಚಿಂತನೆಯ ಸಾಕಾರ ಮೂರ್ತಿಯನ್ನು ಕಂಡ ಆಚಾರ್ಯರ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ಅದೆ ಉತ್ಸಾಹದಲ್ಲಿ ಆ ಮಣೆಯನ್ನು ತಮ್ಮ ಮಸ್ತಕದಲ್ಲಿಟ್ಟುಕೊಂಡು ಆನಂದಾತಿರೇಕದಲ್ಲಿ ನೃತ್ಯ ಮಾಡಿದರು. ಗಂಧಾಕ್ಷತೆ–ಹೂ–ತುಳಸಿಗಳಿಂದ ಶ್ರೀಗುರುರಾಜರನ್ನು ಪೂಜಿಸಿದರು. ಮಂಗಳಾರತಿ ಎತ್ತಿ ಸಾಷ್ಟಾಂಗ ನಮಸ್ಕಾರ ಹಾಕಿದರು. ಅಂದಿನಿಂದ ಆ ಮಣೆಯು ಆಚಾರ್ಯರ ಸಂಗಾತಿಯಾಯಿತು.

ಆಚಾರ್ಯರು ಆ ಮಣೆಯನ್ನು ಇಡುವದಕ್ಕಾಗಿಯೇ ಪಂಚಲೋಹದ ಒಂದು ಬೃಂದಾವನವನ್ನು ಮಾಡಿಸಿ, ಅದರಲ್ಲಿ ಆ ಮಣೆಯನ್ನು ವಿಧ್ಯುಕ್ತವಾಗಿ ಪ್ರತಿಷ್ಠಾಪಿಸಿದರು. ಅದು ಅವರ ನಿತ್ಯ ಪೂಜೆಯ ಬೃಂದಾವನವಾಯಿತು. ಆಚಾರ್ಯರು ತಾವು ಹೋದಲ್ಲೆಲ್ಲಾ ಆ ಬೃಂದಾವನವನ್ನು ಹೆಗಲಮೇಲೆ ಇಟ್ಟುಕೊಂಡು ಹೋಗುತ್ತಿದ್ದರು. ಹೀಗೆ ಗುರುಗಳು ಅವರಿಗೆ ಸದಾ ಬೆಂಗಾವಲಾಗಿ, ರಕ್ಷಕರಾಗಿದ್ದಾಗ ಯಾವುದು ತಾನೆ ಅಸಾಧ್ಯವಾದೀತು? ಅಂದು ಅವರು ಪ್ರತಿಷ್ಠಾಪಿಸಿದ ಪಂಚಲೋಹದ ಬೃಂದಾವನವನ್ನು ನಾವು ಇಂದಿಗೂ ಕೌತಾಳದಲ್ಲಿ ಕಾಣಬಹುದಾಗಿದೆ.

## ಸ್ವಾಮಿರಾಚಾರ್ಯರು 'ಗುರುಜಗನ್ನಾಥವಿಠ್ಠಲ'ರಾದರು

ಅಂದಿನ ದಿನಗಳಲ್ಲಿ ಆಚಾರ್ಯರು ವೈಷ್ಣವಾಗ್ರೇಸರರಾಗಿ, ಗುರುರಾಜರ ಆದರ್ಶಭಕ್ತರಾಗಿ ಮೆರೆಯುತ್ತಿದ್ದರು. ಸಂಸ್ಕೃತ ಭಾಷಾ ವಿಶಾರದರಾದ ಅವರು ಹಲವಾರ ಗ್ರಂಥಗಳನ್ನು ಬರೆದಿದ್ದಾರೆ. ಅವೆಲ್ಲವೂ ಪಾಂಡಿತ್ಯ ಪೂರ್ಣಕೃತಿ–ಗಳಾಗಿದ್ದು ಪಠನೀಯವಾಗಿವೆ. ಉದಾ – (ಬ್ರಹ್ಮಸೂತ್ರ ಭಾಷ್ಯಾರ್ಥಸಂಗ್ರಹ : ಹರಿಕಥಾಮೃತಸಾರಚಂದ್ರಿಕಾ) ಆದರೆ ಸ್ವಾಮಿರಾಚಾರ್ಯರಿಗೆ ಇದರಿಂದ ತೃಪ್ತಿಯಾಗಲಿಲ್ಲ. ತಾವೂ ಹರಿದಾಸರಂತೆ ವೇಷತೊಟ್ಟು, ತಂಬೂರಿ ಹಿಡಿದು ಹಾಡಿ, ಕುಣಿದು, ನರ್ತನ ಮಾಡುತ್ತ ಶ್ರೀಹರಿವಾಯುಗುರುಗಳಿಗೆ ಸಂಗೀತ–

ಕೀರ್ತನ–ನರ್ತನ ಸೇವೆ ಅರ್ಪಿಸಲು ಅವರ ಮನಸ್ಸು ತವಕಪಡುತ್ತಿತ್ತು. ನೂರಾರು ಕೀರ್ತನೆಗಳು ಅವರ ಮನದಾಳದಲಿ ಹುದುಗಿದ್ದು ಅವರ ಬಾಯಿಂದ ಹೊರಬರಲು ತವಕಿಸುತ್ತಿದ್ದವು. ತಮ್ಮ ಭಕ್ತನ ಅಂತರಂಗದ ಹಸಿವು ಗುರುರಾಜರಿಗೆ ತಿಳಿದೇ ಇತ್ತು. ಆಚಾರ್ಯರ ಮನಸ್ಸು ಒಂದು ಹದಕ್ಕೆ ಬರುವದನ್ನೇ ಅವರು ಕಾಯುತ್ತಿದ್ದರು. ಆ ಸುದಿನವೂ ಬಂತು. ಅಂಕಿತವನ್ನು ಸ್ವೀಕರಿಸಿ, ಹರಿದಾಸರಾಗುವಂತೆ ಮಂತ್ರಾಲಯ ಪ್ರಭುಗಳು ಅವರಿಗೆ ಪ್ರೇರಣೆಯನ್ನು ನೀಡಿದರು.

"ಗುರು ಜಗನ್ನಾಥೆಂಬ ಮುದ್ರಿಕಾ ನೆಂಟತಂದೆ
ಗುರು ಗೋಪಾಲದಾಸಾರ್ಯರಿಂದಾ।
ಭರದಿ ಕೈಗೊಂಡು ಪ್ರಾಕೃತ ಭಾಷ್ಯಾದಿಂದಲಿ
ವರತತ್ವರಹಸ್ಯ ವರದ ಕರುಣಾರ್ಣವ।"

ಎಂಬುದಾಗಿ ದಾಸರ ಶಿಷ್ಯರಾದ ವರದವಿಠಲದಾಸರು ಹೇಳಿದ್ದಾರೆ. ಸ್ವಾಮಿರಾಚಾರ್ಯರು ನೆಂಟತಂದೆ ಗುರುಗೋಪಾಲವಿಠಲಾಂಕಿತರೂ, ಗೋಪಾಲದಾಸರ ವಂಶೀಕರೂ ಆದ ಶ್ರೀಕೃಷ್ಣದಾಸರಿಂದ 'ಗುರುಜಗನ್ನಾಥವಿಠಲ' ಎಂಬುದಾಗಿ ಅಂಕಿತವನ್ನು ಪಡೆದರು. ಆಚಾರ್ಯ ಮಧ್ವರಿಂದ ಪರಂಪರಾ ಪ್ರಾಪ್ತವಾಗಿ ಬಂದ ಹರಿದಾಸ ಶ್ರೇಣಿಯಲ್ಲಿ ಖ್ಯಾತ ನಾಮಾಂಕಿತರಾದರು. ತಮ್ಮ ಕೊನೆಯುಸಿರಿರುವ ವರೆಗೂ ಹರಿದಾಸ್ಯಸಿದ್ಧಿಯನ್ನು ಸಾಧಿಸುತ್ತ, ಕನ್ನಡ ದಾಸಸಾಹಿತ್ಯಕ್ಕೆ ಅಮೋಘ ಸೇವೆಯನ್ನು ಸಲ್ಲಿಸಿದರು.

ಸ್ವಾಮಿರಾಚಾರ್ಯರಾಗಿ ಈ ಜೀವ ಸಾಧಿಸಿದ್ದು ಒಂದು ಘಟ್ಟವಾದರೆ, ಇದೇ ಜೀವ ಗುರುಜಗನ್ನಾಥವಿಠಲರಾಗಿ ಸಾಧಿಸಿದ್ದು ಇನ್ನೊಂದು ಘಟ್ಟ. ತಮ್ಮ ಜೀವನಕ್ಕೇ ಹೊಸ ತಿರುವನ್ನು ಕೊಟ್ಟು, ತಮ್ಮನ್ನು ಈ ಸ್ಥಿತಿಗೆ ತಂದ ಮಂತ್ರಾಲಯದ ಮುನಿಪುಂಗವರನ್ನು ನೆನೆದಷ್ಟೂ ಅವರ ಹೃದಯ ಭಕ್ತಿಭಾವನೆಯಿಂದ ಉಕ್ಕಿ ಬರುತ್ತಿತ್ತು; ಕೃತಜ್ಞತೆಯಿಂದ ಅವರ ಕಣ್ಣುಗಳು ತೇವಗೊಂಡಿದ್ದವು. ಶ್ರೀಗುರುರಾಜರ ದರ್ಶನಾಕಾಂಕ್ಷಿಗಳಾಗಿ ದಾಸರು ಮಂತ್ರಾಲಯಕ್ಕೆ ಬಂದರು. ರಾಯರ ಬೃಂದಾವನದ ಎದುರು ನಿಂತಾಕ್ಷಣ ಶ್ರೀರಾಯರ ಅಗಮ್ಯ ಮಹಿಮೆಯನ್ನು

ಕುರಿತಾದ ಪದಗಳು ಅವರ ಬಾಯಿಂದ ಪುಂಖಾನುಪುಂಖವಾಗಿ ಹೊರಬರುತ್ತಿದ್ದವು. ಬೃಂದಾವನದಲ್ಲಿ ಕುಳಿತ ಗುರುರಾಜರು ತಮ್ಮ ದರ್ಶನವನ್ನು ದಾಸರಿಗೆ ಅನುಗ್ರಹಿಸಿದರು.

"ರಾಯರ ನೋಡಿರೈ ಶುಭತಮ-ಕಾಯರ-ಪಾಡಿರೈ
ತೋಯಜ-ಪತಿ-ನಾರಾಯಣ ಪದಯುಗ
ಭೃಂಗಾ-ಭಕ್ತ-ಕೃಪಾಂಗಾ
ಸುಂದರ ಮುಖ ಅರವಿಂದ ಲೋಚನ, ಘ್ರಾಣ
ಕುಂದ ಕುಟ್ಮಲ ಸಮರದನ, ರಾಜಿತ ವದನ
ಮಂದಸ್ಮಿತಯುತ-ದ್ವಂದ್ವಓಷ್ಠ ಶ್ರುತಿ
ಛಂದವಾಗಿಹ ಚುಬುಕಾ, ಫಾಲದಿ ತಿಲಕಾ
. . . . . . . . . . . . . . . . . . . .
. . . . . . . . . . . . . . . . . . . .
ಹಸ್ತದಿ ರಾಜಿಪ ಪುಸ್ತಕ ಮಣಿಮಾಲಾ
ಸ್ವಸ್ತಿಕಾಸನ-ಸ್ಥಿತ-ಮೋದ, ಕೃಪವಿನೋದ
ಮಸ್ತಕದಿಂದಲಿ ವಿಸ್ತೃತ ಕಾಷಾಯ
ವಸ್ತ್ರದಿ ಶೋಭಿಪ ಗಾತ್ರ ಶುಭಚರಿತ್ರ"

ತಾವು ಕಂಡ ರಾಯರನ್ನು ದಾಸರು ಹೀಗೆ ವರ್ಣಿಸಿದ್ದಾರೆ. ಮಂತ್ರಾಲಯ-ದಲ್ಲಿಯ ರಾಯರ ಭಕ್ತರನ್ನೂ ಶ್ರೀಗುರುರಾಜರಿಗೆ ಸಲ್ಲಿಸುವ ವಿವಿಧ ಬಗೆಯ ಸೇವೆಗಳನ್ನೂ ಕಣ್ತುಂಬನೋಡಿ ಆನಂದಿಸಿದರು. ಸಂಜೆಯಾಗುತ್ತಿದ್ದಂತೆ ಶ್ರೀಗುರುರಾಜರ ರಥೋತ್ಸವದ ಸಿದ್ಧತೆ ನಡೆಯಹತ್ತಿತು.

ಶ್ರೀಗುರುರಾಜರ ಉತ್ಸವ ಮೂರ್ತಿಯನ್ನು ರಥದಲ್ಲಿ ತಂದಿರಿಸಿದರು. ರಥಾರೂಢರಾದ ಅಗಮ್ಯ ಮಹಿಮರನ್ನು ಕಂಡ ದಾಸರು ರೋಮಾಂಚನಗೊಂಡರು

"ರಥವಾನೇರಿದ ಯತಿವರನ್ಯಾರೇ ಪೇಳಮ್ಮಯ್ಯಾ
ವಿತತ ಮಹಿಮಾ–ಗತಿ ಜನರನತಿ
ಹಿತದಿ ಪಾಲಿಸುವ–ಅತುಲ ಮಹಿಮಕಾಣಮ್ಮ"
ಎಂದು ರಥದ ಓಟಕ್ಕೆ ತಕ್ಕಂತೆ ಹಾಡಿ, ಕುಣಿದು ನರ್ತಿಸಿದರು.

ಶ್ರೀರಾಯರ ಪರಮಾನುಗ್ರಹ ಪಡೆದು, ಧನ್ಯರಾಗಿ ಊರಿಗೆ ಹಿಂದಿರುಗಿದರು.

**ಕಾಟಾಪುರದಲ್ಲಿ ದಾಸರು**

ತಮ್ಮ ಸ್ವಂತ ಊರಾದ ಕೋಶಿಗಿಗೆ ಮರಳಿದ ದಾಸರು ಆಧ್ಯಾತ್ಮ–ಸಾಧನೆಯನ್ನೇ ತಮ್ಮ ಮುಖ್ಯ ವೃತ್ತಿಯನ್ನಾಗಿಸಿಕೊಂಡರು. ಪ್ರತಿನಿತ್ಯ ಪೂಜೆ, ಪಾಠಪ್ರವಚನ, ತಾರತಮ್ಯಭಜನೆಗಳನ್ನು ತಮ್ಮದೈನಂದಿನ ಕಾರ್ಯಕ್ರಮವನ್ನಾಗಿಸಿಕೊಂಡರು. ತನ್ಮೂಲಕ ಹಲವಾರು ಜನರನ್ನು ಸಾಧನೆಯ ಮಾರ್ಗಕ್ಕೆ ತಂದರು. ದಾಸರನ್ನು, ಅವರ ಸಾಧನೆಯನ್ನು ಕಂಡ ಜನರು ಇದು ತಮ್ಮ ಊರಿನ ಪುಣ್ಯ ಎಂದುಕೊಂಡರು.

ಇದೇ ಸಮಯದಲ್ಲಿ ದಾಸರ ತಂದೆ ದೇಹಾಲಸ್ಯದಿಂದ ಬಳಲುತ್ತಿದ್ದರು. "ಪಿತೃದೇವೋ ಭವ" ಎಂಬ ಮಾತಿನ ಮರ್ಮವನ್ನು ಅರಿತ ದಾಸರು ಅವರ ತಂದೆಯ ಅಂತ್ಯಕಾಲದಲ್ಲಿ ಪರಿಪರಿಯಾಗಿ ಅವರ ಸೇವೆಯನ್ನು ಮಾಡಿ ತಮ್ಮ ಕರ್ತವ್ಯವನ್ನು ನಿರ್ವಹಿಸಿದರು. ತಮ್ಮ ಕಲ್ಪನೆಗೆ ತಕ್ಕಂತೆ ತಯಾರಾದ ವೈಷ್ಣವಾಗ್ರೇಸರಾಗಿ–ದಾಸದುರಂಧರನಾಗಿ, ಜನರ ಕಣ್ಮಣಿಯಾಗಿ ನಿಂತ ತಮ್ಮ ಸುಪುತ್ರನನ್ನು ಕಂಡ ವೆಂಕಟಗಿರಿಆಚಾರ್ಯರು ತಮ್ಮ ಅಂತ್ಯಕಾಲದಲ್ಲಿ ಬಹು ಸಮಾಧಾನದಿಂದ ಜೀವಿಸಿರಬೇಕು. ದಾಸರ ತಂದೆ ಕೊನೆಯುಸಿರೆಳೆದರು. ಪಿತೃವಿಯೋಗದಿಂದ ದುಃಖಿತರಾದರೂ 'ಹರಿಚಿತ್ತ' ಎಂದು ಆ ದುಃಖವನ್ನು ಸಹಿಸಿಕೊಂಡರು. ದಾಸರು ಕ್ರಮವಾಗಿ ಪಿತೃಕರ್ಮಗಳನ್ನು ನೆರವೇರಿಸಿದರು.

ತಮ್ಮ ತಂದೆಯೂ ಗತಿಸಿದ ನಂತರ ದಾಸರಿಗೆ ಬಂಧುಗಳ ಕೊಂಡಿ ಕಳಚಿದಂತಾಯಿತು. ಕೋಶಿಗಿಯಲ್ಲಿ ಇನ್ನು ತಮ್ಮ ಅವಶ್ಯಕತೆಯಿಲ್ಲ ಎನಿಸಿರಬೇಕು. ಭಾಗವತಧರ್ಮವನ್ನು ಪ್ರಚಾರ ಮಾಡುತ್ತ ಸಂಚರಿಸಬೇಕೆಂಬ ಭಾವನೆ ಅವರಿಗೆ ಉತ್ಕಟವಾಗಿರಬೇಕು. ಜ್ಞಾನಿಗಳ ಪರಿಯೇ ಇದು. ಎಲ್ಲದಾಸರ ಜೀವನದಲ್ಲಿ ನಾವು ಇದನ್ನು ಕಾಣುತ್ತೇವೆ. ದಾಸರು ಸಂಚರಿಸುತ್ತ ಕಾಟಾಪುರಕ್ಕೆ ಬಂದರು. ದಾಸರ ಅಪೂರ್ವವ್ಯಕ್ತಿತ್ವಕ್ಕೆ ಮಾರುಹೋದ ಕಾಟಾಪುರದ ದೇಸಾಯರು ಅವರ ಶಿಷ್ಯತ್ವವನ್ನು ಸ್ವೀಕರಿಸಿದರು. ಅನಾಯಾಸವಾಗಿ ಬಂದ ಭಾಗ್ಯವನ್ನು ದೇಸಾಯರು ಸ್ವಾಗತಿಸಿದರು. ದಾಸರಿಂದ ಅವರು ಮಧ್ವಸಿದ್ಧಾಂತದ ತತ್ವ–ರಹಸ್ಯಗಳನ್ನು ತಿಳಿದು ಧನ್ಯರಾದರು. ಕಾಟಾಪುರದಿಂದ ಪ್ರಯಾಣ ಹೊರಟ ದಾಸರನ್ನು ದೆಸಾಯರು ಪರಿಪರಿಯಾಗಿ ಪ್ರಾರ್ಥಿಸಿಕೊಂಡು ತಮ್ಮೂರಿನಲ್ಲಿ ಉಳಿಸಿಕೊಂಡರು. ಅವರಿಗೆ ಸಕಲ ವ್ಯವಸ್ಥೆಗಳನ್ನೂ ಮಾಡಿಕೊಟ್ಟರು. ಅವರ ಬಾಳ ಸಂಗಾತಿ ವೆಂಕಮ್ಮನೂ ಅವರ ಬಳಿಯಲ್ಲಿಯೇ ಇದ್ದು ತನ್ನ ಪತಿಯ ಮನೆಗೆ ಆಗಮಿಸಿದ ಭಕ್ತರ ಹಾಗೂ ಆಚಾರ್ಯರು ಪಾಠ ಹೇಳಲು ಇಟ್ಟುಕೊಂಡ ವಿದ್ಯಾರ್ಥಿಗಳ ಸೇವೆಯನ್ನು ಪರಿಪರಿಯಾಗಿ ಮಾಡುತ್ತಿದ್ದರು. ದಾಸರ ಧಾರ್ಮಿಕ ಮನೋಭಾವನೆಗೆ ವೆಂಕಮ್ಮ ಸರಿಯಾಗಿ ಸ್ಪಂದಿಸುತ್ತಿದ್ದಳು. ದಾಸರ ಬಳಿ ಆಗ ಐವತ್ತಕ್ಕೂ ಮಿಕ್ಕಿ ವಿದ್ಯಾರ್ಥಿಗಳು ಜ್ಞಾನಾರ್ಜನೆಗಾಗಿ ಆಶ್ರಯ ಪಡೆದಿದ್ದರು ಎಂದು ತಿಳಿದು ಬರುತ್ತದೆ. ಅವರ ಮೊದಲ ಮಗ ಅವರಿಗೆ ದಕ್ಕಲಿಲ್ಲ. ಇದರಿಂದ ಖಿನ್ನ ಮನಸ್ಕರಾದ ದಾಸರು, 'ಹರಿಚಿತ್ತ' ಎಂದು ಆ ನೋವನ್ನು ತಡೆದುಕೊಂಡು, ಶ್ರೀಹರಿಯ ಇಚ್ಛೆಗೆ ಬಂದಂತೆ ಬದುಕುವಂತೆ ಉಪದೇಶಿಸಿ ಯಥಾ ಪ್ರಕಾರ ಶ್ರೀಹರಿವಾಯು ಗುರುಗಳ ಸೇವೆಯನ್ನು ಮುಂದುವರೆಸಿದರು. ದಾಸರಿಗೆ ಹಲವು ದಿನಗಳ ನಂತರ ಪುನಃ ಪುತ್ರೋತ್ಸವವಾಯಿತು. ಶ್ರೀಗುರುರಾಜರ ಅನುಗ್ರಹದಿಂದಲೇ ಜನಿಸಿದ ಮಗುವಿಗೆ ಶ್ರೀ ರಾಘವೇಂದ್ರ ಎಂದು ಹೆಸರಿಟ್ಟಿದ್ದರು. ಮುದ್ದಾದ ಮಗುವನ್ನು ಕಂಡು ದಂಪತಿಗಳು ಮುದಗೊಂಡರು.

ಕಾಟಾಪುರದಲ್ಲಿ ಸುಮಾರು ಹನ್ನೆರಡು ವರ್ಷಕಾಲದ ಅವರ ಬದುಕು ಬಹು ವೈವಿಧ್ಯಮಯವಾಗಿತ್ತು. ಅದು ಅವರ ಸಾಧನೆಯ ಕಾಲವೂ ಆಗಿತ್ತು. ಆಟದಲ್ಲಿ

ಮಗ್ನನಾದ ಅವರ ಮಗ ರಾಘವೇಂದ್ರನು ಕೈಮುರಿದು ಕೊಂಡಾಗ ವೈದ್ಯರು ಕಬ್ಬಿಣದ ಕಡಗವನ್ನು ಹಾಕಲು ಹೇಳಿದರಂತೆ. ಆಗ ದೇಸಾಯರು ತಮ್ಮ ಗುರುಗಳಾದ ದಾಸರ ಮೇಲಿನ ಪ್ರೇಮದಿಂದ ಆ ಮಗುವಿಗೆ ಚಿನ್ನದ ಕಡಗವನ್ನೇ ಹಾಕಿಸಿದರಂತೆ. ಕಾಟಾಪುರದ ಹಾಗೂ ಸುತ್ತಮುತ್ತಲಿನ ಜನರಿಗೆ ಅನುಕೂಲವಾಗಲು ಅಲ್ಲಿ ಶ್ರೀರಾಯರ ಬೃಂದಾವನವನ್ನು ಸ್ಥಾಪಿಸಿ ಪೂಜಾದಿಗಳಿಗೆ ವ್ಯವಸ್ಥೆ ಮಾಡಿದರು. ಶ್ರೀ ರಾಯರ ಬೃಂದಾವನದ ಜೊತೆಗೆ ಶ್ರೀಟೀಕಾರಾಯರ ಬೃಂದಾವನವನ್ನೂ ಸಹ ಸ್ಥಾಪಿಸಿದರು.

ಈ ಅವಧಿಯಲ್ಲಿ ಅವರ ಪತ್ನಿ ವೆಂಕಮ್ಮನವರು ಹರಿಪಾದವನ್ನು ಸೇರಿದರು. ಜ್ಞಾನಿಗಳಾದ ದಾಸರು ಈ ದುರ್ಧರ ಪ್ರಸಂಗವನ್ನು ಹೇಗೋ ಸಹಿಸಿಕೊಂಡು ಬಾಳಿನಲ್ಲಿ ಬಂದ ಕಹಿ ಪ್ರಸಂಗಗಳನ್ನೆಲ್ಲ ಶ್ರೀಹರಿಯ ಕೃಪೆಯಿಂದ ಹೇಗೋ ನುಂಗಿದರು. ಶ್ರೀಗುರುರಾಜರನ್ನು ಸ್ಮರಿಸುತ್ತ ತಮ್ಮ ಭಾಗವತಧರ್ಮದ ಅನುಷ್ಠಾನಕ್ಕೆ ಕಿಂಚಿತ್ತು ವ್ಯತ್ಯಯ ಬರದಂತೆ ಬದುಕಿದುದೆ ಅವರ ಹಿರಿಮೆ. ಅಲ್ಲಿಂದ ಮುಂದೆ ಗುರುರಾಜರು ಸೋಂದಾಕ್ಷೇತ್ರಕ್ಕೇ ಪ್ರಯಾಣ ಮಾಡಿದರು. ಸೋಂದೆಯ ಗುರುರಾಜರಲ್ಲಿ ದಾಸರಿಗೆ ಎಲ್ಲಿಲ್ಲದ ಶ್ರದ್ಧಾಭಕ್ತಿಗಳು. ಶ್ರೀವಾದಿರಾಜರನ್ನು ಕುರಿತು ಅವರು ರಚಿಸಿದ ಕೀರ್ತನೆಗಳು ಇದಕ್ಕೆ ಸಾಕ್ಷಿ.

"ವಾದಿರಾಜ ಸುರರಾಜ ತಾನಾದರೆ
ಮೇದಿನಿಯೊಳಗಿಹನ್ಯಾಕೆ?"
ಎಂದು ತಾವೇ ಪ್ರಶ್ನಿಸಿ–
"ಮೇದಿನಿ ಸುರರಿಗೆ ಮೋದಕೊಡೋದಕೆ
ಸ್ವಾದಿಯೊಳಗೆ ನಿಂತಿಹನದಕೆ" ಎಂದು ಸಮಾಧಾನ ಹೇಳಿದ್ದಾರೆ.
"ಸೋದಾಪುರದಲಿ ನಿಂತಸುಯತಿವರರೂ",
"ಭೂಧರ ಹಯಮುಖ ಪಾದವ ಭಜಿಸುವ
ವಾದಿಗಜಕೆ ಮೃಗರಾಜರಾಜರಾಜರನ್ನು ಕಂಡು"
"ಮೋದತಿರ್ಥ ಸುಮತೋದಧಿ ಚಂದಿರ
ಪಾದವ ನಂಬಿದೆ ನೀ ದಯದಲಿ

ಆರ್ತಜನರ ಮನದಾರ್ತಿಯಕಳೆದಿಹ
ವಾರ್ತದಿ ಬಂದವನಾರ್ತಿಯ ಬಿಡಿಸೋ
ಎಲ್ಲರಂತೆ ನೀನಲ್ಲವೊ ಜಗದೊಳು
ಬಲ್ಲಿದನೆಂಬೊದು ಬಲ್ಲೆಬಲ್ಲೆನು
ಮೋಕ್ಷದಿ ಕರುಣಕಟಾಕ್ಷದಿ ಎನ್ನಾ
ವೀಕ್ಷಿಸಿ ಮನದಾಪೇಕ್ಷವ ಸಲಿಸೋ
ಯಾತಕೆ ಎನ್ನನು ಈತೆರ ಮಾಡಿದೆ
ನೀತಗುರು ಜಗನ್ನಾಥವಿಠಲ ದೂತ"–

ಎಂದು ಶ್ರೀವಾದಿರಾಜರ ಎದುರುನಿಂತು ಆರ್ತರಾಗಿ ಬೇಡಿಕೊಂಡಿದ್ದಾರೆ. ಈ ಮೇಲಿನ ಸಾಲುಗಳು ದಾಸರ ಅಂದಿನ ಮಾನಸಿಕ ನೋವನ್ನೂ–ಅಂದಿನ ಅವರ ಮನಸ್ಥಿತಿಯನ್ನೂ ಚನ್ನಾಗಿ ಬಿಂಬಿಸುತ್ತವೆ. ಸೋಂದಾ ಕ್ಷೇತ್ರದಲ್ಲಿ ಶ್ರೀವಾದಿರಾಜರ ಸೇವೆ ಹಾಗೂ ದರ್ಶನಗಳಿಂದ ಅವರಿಗುಂಟಾದ ಮಾನಸಿಕ ಸಮಾಧಾನವನ್ನೂ ಈ ಸಾಲುಗಳು ವ್ಯಕ್ತಪಡಿಸುತ್ತವೆ.

ಶ್ರೀಗುರುಜಗನ್ನಾಥದಾಸರು ಸೋಂದಾ ಕ್ಷೇತ್ರದಲ್ಲಿ ಮಧ್ವಮತದ ಪ್ರಚಾರ, ಶಿಷ್ಯರಿಗೆ ಪಾಠ–ಪ್ರವಚನ ಹಾಗೂ ತಮ್ಮ ಆಧ್ಯಾತ್ಮಿಕ ಸಾಧನೆ ಮಾಡುತ್ತ ಹಲವು ದಿನ ಕಳೆದಂತೆ ಕಂಡುಬರುತ್ತದೆ.

### ತೀರ್ಥ–ಕ್ಷೇತ್ರಯಾತ್ರೆ

ತೀರ್ಥಾಟನೆಯು ಒಂದು ಭಾಗವತ ಧರ್ಮ. ಸಂಸಾರಜೀವನದಲ್ಲಿ ಬೆಂದು ಒದ್ದಾಡುವದಕ್ಕಿಂತ ಆಧ್ಯಾತ್ಮ ಸಾಧನೆಯೇ ಈ ನಶ್ವರ ಜೀವನದ ಬಹು ದೊಡ್ಡ ಭಾಗ್ಯ ಎಂದರಿತವರು ಹರಿದಾಸರು. ಮಧುಕರವೃತ್ತಿಯನ್ನು ಮಾಡುತ್ತ, ಭಗವನ್ನಾಮ–ಸಂಕೀರ್ತನೆಗೈಯುತ್ತ, ಲೋಕಸಂಗ್ರಹಕಾರ್ಯಮಾಡುತ್ತ ಶ್ರೀ ಹರಿವಾಯುಗುರುಗಳು ನೆಲೆನಿಂತ ಕ್ಷೇತ್ರಗಳನ್ನು ಸಂದರ್ಶಿಸುವ ಪದ್ಧತಿಯನ್ನು ಎಲ್ಲ ದಾಸರು ಅನುಸರಿಸಿದ್ದಾರೆ. ಶ್ರೀಗುರುಜಗನ್ನಾಥದಾಸರೂ ಇದಕ್ಕೆ

ಹೊರತಾದವರಲ್ಲ. ಅವರ ಕೀರ್ತನೆಗಳನ್ನು ಅವಲೋಕಿಸಿದಾಗ ಹಲವಾರು ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸಿದುದು ಸ್ಪಷ್ಟವಾಗುತ್ತದೆ.

"ನೋಡಿದೆ ವೆಂಕಟ ನಿನ್ನ
ಕೊಂಡಾಡಿ ಬೇಡಿದೆ ವರವನ್ನ ಆಹಾ
ರೂಢಿಯೊಳಗೆ ನಿನಗೆ ಈಡುಗಾಣೆನೋದೇವ
ನಾಡುದೈವಗಳೆಲ್ಲ ಓಡಿ ಪೋದವೊಸ್ವಾಮಿ" ಎಂದು ಹಾಡುತ್ತ–ತಿರುಪತಿಗೆ ಹೋಗಿ,

"ನಿನಗೇನು ಮಹದಾದಿ ಸುರವಂದ್ಯತಿಮ್ಮ" ಎಂದು ಆ ಮಹಾಮಹಿಮನನ್ನು ಕೆಣಕಿದ್ದಾರೆ.

ಬಾಲಗೋಪಾಲಕೃಷ್ಣನ ಮಂದಿರವಾದ 'ಉಡುಪಿ' ಯಂತೂ ಎಲ್ಲ ಹರಿದಾಸರಿಗೆ ಸ್ಫೂರ್ತಿಯ ಕೇಂದ್ರಬಿಂದು. ದಾಸರು ಉಡುಪಿಗೂ ಬಂದಿದ್ದಾರೆ: ಕೃಷ್ಣನ ಚೆಲುವ ಮೂರ್ತಿಯನ್ನೂ ಕಂಡಿದ್ದಾರೆ, ಶಬ್ದಗಳಲ್ಲಿ ಬಣ್ಣಿಸಿದ್ದಾರೆ.

"ಇಂದುನೋಡಿದೆ ನಂದತೀರ್ಥಮು–
ನೀಂದ್ರ ವಂದಿತ ಚರಣನಾ" ಎಂದು ಪ್ರಾರಂಭಿಸಿ–
"ದೇವಕೀ ವಸುದೇವ ತನಯನ
ದೇವಗಣ ಸಂಸೇವ್ಯನಾ
ಈ ವಸುಂಧರೆಯೊಳಗೆ ಮಧ್ವಸ–
ರೋವರದಲಾವಾತನಾ "

ಈ ಕೀರ್ತನೆಯು ದಾಸರು ಉಡುಪಿಯಲ್ಲಿ ಕಂಡ ಕೃಷ್ಣನ ವೈಭವವನ್ನು ಬಹುಸುಂದರವಾಗಿ ಚಿತ್ರಿಸುತ್ತದೆ. ಮಳಖೇಡಕ್ಕೂ ಯಾತ್ರೆ ಮಾಡಿದ ದಾಸರು

"ಜಯರಾಯ ಜಯರಾಯಾ
– – – – – – – – – – – – – –
– – – – – – – – – – – – – –

ಸುಧಾದಿ ಗ್ರಂಥವ ಮುದದಲಿ ರಚಿಸಿ
ಬುಧಜನ ಸ್ತೋಮಕೆ ಒದಗಿಸಿ" ಕೊಟ್ಟ
ಅಲವಬೋಧರ ಮತ ಬಲವತ್ತರ ಮಾಡಿ
ಜಲಜನಾಭನ ಮನ ಒಲಿಸಿದ"

ಟೀಕಾಚಾರ್ಯರ ಘನವ್ಯಕ್ತಿತ್ವವನ್ನು ಬಹು ಸುಂದರವಾಗಿ ಬಣ್ಣಿಸಿದ್ದಾರೆ.

ನವಬೃಂದಾವನಕ್ಕೂ ದಾಸರ ಸವಾರಿ ಚಿತ್ತೈಸಿದೆ. ಶ್ರೀವ್ಯಾಸರಾಯರ ಬೃಂದಾವನದ ಮುಂದೆ ನಿಂತ ದಾಸರು ಬಹು ಮನಮೋಹಕವಾಗಿ ಹಾಡಿದ್ದಾರೆ. ಹದಿನೇಳು ನುಡಿಯ ಕೀರ್ತನೆಯಲ್ಲಿ ಶ್ರೀ ವ್ಯಾಸರಾಜರ ಸಮಗ್ರ ಚರಿತ್ರೆಯನ್ನೇ ಬಣ್ಣಿಸಿದ್ದಾರೆ. ಶ್ರೀವ್ಯಾಸರಾಜರ ಬೃಂದಾವನದಲ್ಲಿ ಯಾವ ಯಾವ ಭಗವನ್ಮೂರ್ತಿಗಳು ಯಾವ ಯಾವ ಸ್ಥಾನದಲ್ಲಿ ಇವೆ ಎಂಬುದನ್ನು ನೋಡಿ ಅನುಭವಿಸಿ–ಹಾಡಿದ ಕೀರ್ತನೆ ಮನಮೋಹಕವಾಗಿದೆ.

ಇಂದಿನ ಹಾವೇರಿ ಜಿಲ್ಲೆಯ ಹೊಸರಿತ್ತಿಗೂ ದಾಸರು ಬಂದಿದ್ದಾರೆ. "ವರದಾತೀರದಿ ಶೋಭಿಪ ಯತಿವರನ್ಯಾರೇ ನೋಡಮ್ಮಯ್ಯ" ಎಂದು ಹಾಡಿ ಶ್ರೀಧೀರೇಂದ್ರಸ್ವಾಮಿಗಳನ್ನೂ ಪ್ರಾರ್ಥಿಸಿದ್ದಾರೆ. ಶ್ರೀಸತ್ಯಬೋಧರು ನೆಲೆನಿಂತ ಸವಣೂರಿಗೂ ದಾಸರು ಪಾದಾರ್ಪಣೆ ಮಾಡಿದ್ದಾರೆ. ಶ್ರೀವರದೇಂದ್ರರು ವಾಸವಾಗಿರುವ ಲಿಂಗಸುಗೂರು ಹಾಗೂ ರಂಗವಲಿದದಾಸರಾದ ಶ್ರೀ ಜಗನ್ನಾಥದಾಸರು ನೆಲೆನಿಂತ ಮಾನವಿಗಳಂತೂ ಅವರಿಗೆ ಹತ್ತಿರದ ಕ್ಷೇತ್ರಗಳು. ಈ ಈರ್ವರ ಮಹಿಮೆಗಳನ್ನು ಬಹು ಚೆನ್ನಾಗಿ ಬಣ್ಣಿಸಿದ್ದಾರೆ. ಮಂತ್ರಾಲಯವಂತೂ ಸರಿಯೆ! ತಮ್ಮನ್ನು ತಿದ್ದಿ, ಉದ್ಧಾರಮಾರ್ಗಕ್ಕೆ ಹಚ್ಚಿದ ಮಹಾಮಹಿಮರಾದ ಶ್ರೀ ರಾಘವೇಂದ್ರರ ಕ್ಷೇತ್ರಕ್ಕಂತೂ ಹಲವಾರು ಬಾರಿ ಅವರು ಯಾತ್ರೆ ಮಾಡಿದ್ದಾರೆ. ಶ್ರೀಗುರುರಾಜರನ್ನು ಕುರಿತು ಬಹಳಷ್ಟು ಕೀರ್ತನೆಗಳನ್ನು ಬರೆದಿದ್ದಾರೆ. ಇಲ್ಲಿ ಉಲ್ಲೇಖಿಸಿದ ಕ್ಷೇತ್ರಗಳಷ್ಟೇ ಅಲ್ಲ; ಇನ್ನೂ ಹಲವಾರು ತೀರ್ಥ–ಕ್ಷೇತ್ರಗಳನ್ನು ದಾಸರು ಸಂದರ್ಶಿಸಿದ್ದಾರೆ.

## ಬಯಸಿ ಬಂದ ಬೃಂದಾವನ

ಶ್ರೀಮಂತ್ರಾಲಯ ಪ್ರಭುಗಳು ಭಕ್ತರ ಕಾಮಧೇನು: ಕಲ್ಪವೃಕ್ಷ: ಕರೆದಲ್ಲಿ ಬರುವ ಭಕ್ತಾನುರಾಗಿಗಳು ಎಂಬ ಅನುಭವ ಬರಬೇಕಾದರೆ ಗುರು ಜಗನ್ನಾಥದಾಸರ ಚರಿತ್ರೆಯನ್ನೇ ಓದಬೇಕು. ಅವರಿಗೆ ರಾಯರಲ್ಲಿ ಅನುಪಮ ಭಕುತಿ.

ಹಲವಾರು ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದ ದಾಸರು ಧಾರವಾಡಕ್ಕೂ ಆಗಮಿಸಿದರು. ಈ ಊರಿಗೆ ಅವರು ಆಗಮಿಸಲು ಕಾರಣವಿಲ್ಲದಿಲ್ಲ. ಧಾರವಾಡವು ಎಂದಿನಿಂದಲು ಧರ್ಮ-ಸಂಸ್ಕೃತಿಯ ನೆಲೆವೀಡು. ಸುಸಂಸ್ಕೃತರ ನಾಡು ಎಂದೇ ಪ್ರಸಿದ್ಧವಾಗಿದೆ. ಈ ಪ್ರಾಂತದ ಸುತ್ತ ಮುತ್ತ ದಾಸರ ಬಗ್ಗೆ ಪೂಜ್ಯ ಭಾವನೆ ಇದ್ದೆ ಇತ್ತು. ದಾಸರು ಹೋದಲ್ಲೆಲ್ಲಾ ಎಲ್ಲರೊಡನೆ ಕೂಡಿ ಭಜನೆ ಮಾಡಿದರು. ಜನರನ್ನು ಭಕ್ತಿ ಮಾರ್ಗದಲ್ಲಿ ಪ್ರಚೋದಿಸುತ್ತ ಆ ಭಾಗದಲ್ಲೆಲ್ಲಾ ಕ್ರಾಂತಿಯನ್ನೇ ಮಾಡಿದರು. ಈ ಪ್ರಾಂತದಲ್ಲಿ ಇದ್ದಾಗಲೇ ಶ್ರೀಗುರುಜಗನ್ನಾಥ-ದಾಸರ ವ್ಯಕ್ತಿತ್ವವನ್ನು ಬಿಂಬಿಸುವ, ಅವರ ಮೇಲಿರುವ ಶ್ರೀಗುರುರಾಜರ ಕರುಣೆಯನ್ನು ಸಾಕ್ಷೀಕರಿಸುವ ಒಂದು ಅಪರೂಪದ ಘಟನೆ ಜರುಗಿತು.

ಶಿಗ್ಗಾವಿ ಇಂದು ಧಾರವಾಡ ಜಿಲ್ಲೆಗೆ ಸೇರಿದ ಒಂದು ಊರು. ಇದು ಈಗ ತಾಲೂಕು ಕೇಂದ್ರ. ದಾಸರು ಸಂಚಾರತ್ವೇನ ಈ ಊರಿಗೆ ಆಗಮಿಸಿದರು. ಆ ಊರಿನ ಒಬ್ಬ ಸದ್ಗಹಸ್ಥರ ಮನೆಯಲ್ಲಿ ದಾಸರ ವಾಸ್ತವ್ಯವಾಯಿತು. ಅಂದು ರಾತ್ರಿ ಸ್ವಪ್ನದಲ್ಲಿ ಶ್ರೀಗುರುರಾಜರು ದಾಸರ ಕನಸಿನಲ್ಲಿ ಬಂದು, ತಾವು ಆ ಊರಿಗೆ ಸಮೀಪದಲ್ಲಿರುವ ಬಮ್ಮನಹಳ್ಳಿ ಎಂಬ ಗ್ರಾಮದಲ್ಲಿ ಅಗ್ನಿಹೋತ್ರಿ ಎಂಬುವರ ಮನೆಯಲ್ಲಿಯ ಗೋಡೆಯಲ್ಲಿಯ ಶಿಲಾ ಬೃಂದಾವನದಲ್ಲಿ ಇರುವುದಾಗಿಯೂ, ಅಲ್ಲಿಂದ ಅದನ್ನು ತೆಗೆದುಕೊಂಡು ಹೋಗುವಂತೆಯೂ ಹೇಳಿದಂತಾಯಿತು. ದಾಸರ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ತಮ್ಮ ಮೇಲೆ ಶ್ರೀಗುರುರಾಜರಿಗಿರುವ ಅಂತಃಕರಣವನ್ನು ಕಂಡು ಅವರ ಕಣ್ಣುಗಳು ತೇವವಾದವು. ಅದೇ ದಿನ ಬಮ್ಮನಹಳ್ಳಿಯಲ್ಲಿರುವ ಅಗ್ನಿಹೋತ್ರಿ ಅವರ ಮನೆಯಲ್ಲಿ ಇರುವ ಮಹಿಳೆಗೂ ಇದೇ ಸ್ವಪ್ನವಾಗಿದ್ದು, ಅವರಲ್ಲಿಗೆ ಬರುವವರು ತಮ್ಮ ಏಕಾಂತ

ಭಕ್ತರಾಗಿರುವರೆಂದು, ಹಾಗೂ ಅವರ ಮನೆಯ ಗೋಡೆಯಲ್ಲಿರುವ ಶಿಲಾ ಬೃಂದಾವನವನ್ನು ಆ ದಾಸರಿಗೆ ಒಪ್ಪಿಸಿ ಬಿಡುವಂತೆ ಶ್ರೀಗುರುರಾಜರು ಸೂಚಿಸಿದ್ದರು. ಸ್ವಪ್ನದಿಂದ ಎಚ್ಚತ್ತ ಮಹಿಳೆಯಂತೂ ಕಂಗಾಲಾಗಿ, ಗಡಗಡ ನಡುಗಿಹೋಗಿದ್ದಳು. ಏಕೆಂದರೆ ಆ ಗೋಡೆಯ ಮೇಲೆ ಅವಳು ಎಣ್ಣೆ ತುಂಬಿದ ಪ್ರಣತಿಯನ್ನಿಟ್ಟು ದೀಪ ಹಚ್ಚುತ್ತಿದ್ದಳು, ತಾನು ತಿಳಿಯದೇ ಮಾಡಿದ ಅಪರಾಧವಾಗಿದ್ದರೂ ಬೆಚ್ಚಿಬೆವರಿಹೋಗಿದ್ದಳು. ತಟ್ಟನೇ ಎದ್ದಳು: ಆಗೋಡೆಯ ಮೇಲಿನ ದೀಪವನ್ನು ತೆಗೆದಳು. ಆಗೋಡೆಗೆ ಉದ್ದಂಡ ನಮಸ್ಕಾರ ಹಾಕಿದಳು. ಕ್ಷಮಿಸಲು ಕೇಳಿಕೊಂಡಳು.

ಮರುದಿನ ಶ್ರೀಗುರುಜಗನ್ನಾಥದಾಸರು ಆಊರಿಗೆ ತಮ್ಮ ಆತ್ಮೀಯರೊಂದಿಗೆ ದಯಮಾಡಿಸಿದರು. ಅಗ್ನಿಹೋತ್ರಿಯವರ ಮನೆಗೆ ಬಂದರು ; ಸ್ವಪ್ನವನ್ನು ಕುರಿತು ಹೇಳಿದರು. ಆ ಮನೆಯಲ್ಲಿದ್ದ ಮಹಿಳೆಯೂ ಗೋಡೆಯನ್ನು ಒಡೆದು ಬೃಂದಾವನವನ್ನು ತೆಗೆದು ಕೊಂಡು ಹೋಗಲು ಹೇಳಿದಳು. ಗೋಡೆಯನ್ನು ಒಡೆದ ತಕ್ಷಣ ಶಿಲಾ ಬೃಂದಾವನ ಕಾಣಹತ್ತಿತು. ದಾಸರ ಅಚ್ಚರಿಗೆ ಕೊನೆಯಿಲ್ಲ-ದಂತಾಯಿತು, ಸ್ವಪ್ನದಲ್ಲಿ ಕಂಡ ಸಾಲಿಗ್ರಾಮ ಶಿಲಾ ಬೃಂದಾವನವೇ ಅವರಿಗೆ ಗೋಚರಿಸಹತ್ತಿತು. ದಾಸರು ಬಹು ಭಕ್ತ್ಯಾದರಗಳಿಂದ ಆ ಬೃಂದಾವನವನ್ನು ಎತ್ತಿಕೊಂಡರು. ತಾವು ಕನಸಿನಲ್ಲಿ ಕಂಡ ಶಿಲಾಬೃಂದಾವನವನ್ನೇ ಅಲ್ಲಿಯೂ ಕಂಡಾಗ ಅವರು ಸಂತೋಷದಿಂದ ಪುಳಕಗೊಂಡರು. ಅಂದು ಬಹು ವೈಭವದಿಂದ ಶ್ರೀಗುರುರಾಜರ ಬೃಂದಾವನಕ್ಕೆ ಪೂಜಾದಿಗಳನ್ನು ಮಾಡಿದರು. ಅಲ್ಲಿಂದ ಆ ಶಿಲಾ ಬೃಂದಾವನವನ್ನು ತೆಗೆದುಕೊಂಡೇ ಶಿಗ್ಗಾವಿಗೆ ಮರಳಿದರು. ತಾವು ಹೋದಲ್ಲೆಲ್ಲಾ ಆ ಬೃಂದಾವನವನ್ನು ತೆಗೆದುಕೊಂಡೆ ಹೋಗುತ್ತಿದ್ದರು. ಮುಂದೆ ದಾಸರು ತಮ್ಮ ಕೊನೆಯದಿನಗಳನ್ನು ಕೌತಾಳದಲ್ಲಿ ಕಳೆದರು. ಆಗ ಇದೇ ಬೃಂದಾವನವನ್ನು ಅಲ್ಲಿ ಸ್ಥಾಪಿಸಿ, ಆ ಊರನ್ನು ಒಂದು ಪುಣ್ಯ-ಕ್ಷೇತ್ರವನ್ನಾಗಿಸಿದರು.

ಶಿಗ್ಗಾವಿಯಲ್ಲಿ ಇರುವಷ್ಟು ಕಾಲ ಶ್ರೀಹರಿವಾಯುಗುರುಗಳ ಸೇವೆ, ನಿತ್ಯತಾರತಮ್ಯ ಭಜನೆ, ಸಚ್ಛಾಸ್ತ್ರ ಗ್ರಂಥಗಳ ಪಠಣ-ಪಾರಾಯಣ-ಅಧ್ಯಯನ-

ಅಧ್ಯಾಪನಗಳಲ್ಲಿ ಕಾಲ ಕಳೆಯುತ್ತಿದ್ದರು. ಈ ಪ್ರಾಂತದಲ್ಲಿ ಅವರ ವ್ಯಕ್ತಿತ್ವಕ್ಕೆ ಮಾರುಹೋದ ಅನೇಕರು ಅವರ ಶಿಷ್ಯರಾದರು. ಶಿಗ್ಗಾವಿಯಲ್ಲಿಯೇ ಅವರ ಮಗನಾದ ರಾಘವೇಂದ್ರನ ಮದುವೆಯಾದಂತೆ ತಿಳಿದು ಬರುತ್ತದೆ. ಇಲ್ಲಿಂದ ಪ್ರಯಾಣ ಬೆಳಸಿದ ದಾಸರು ಮಾರ್ಗದಲ್ಲಿ ಸಿಕ್ಕ ಅನೇಕ ತೀರ್ಥ-ಕ್ಷೇತ್ರಗಳನ್ನು ಸಂಚರಿಸುತ್ತ ಮರಳಿ ಕೌತಾಳಕ್ಕೆ ಆಗಮಿಸಿದರು.

## ಶಿಷ್ಯ ಸಂಗ್ರಹ

ದಾಸರಿಗೆ ಎಂಟು ಜನ ಶಿಷ್ಯರು ಇದ್ದಂತೆ ತಿಳಿದು ಬರುತ್ತದೆ-ಅವರುಗಳೆಂದರೆ-

(೧) ವರದ ವಿಠಲರು (ಕರಣಂ ಹನುಮಂತರಾವ ಕೌತಾಳ)
(೨) ವರದೇಶ ವಿಠಲರು (ಕೇಲೂರು ಸ್ವಾಮಿರಾಯರು ಲಿಂಗಸುಗೂರು)
(೩) ವರದೇಂದ್ರ ವಿಠಲರು (ವೆಂಕಟೇಶ ಹಳ್ಳೇರಾವ ಲಿಂಗಸುಗೂರು)
(೪) ಆನಂದ ವಿಠಲರು (ಕುಲಕರ್ಣಿ ರಾಮರಾಯರು ಲಿಂಗಸುಗೂರು)
(೫) ಸುಂದರ ವಿಠಲರು (ಗೋರಾಬಾಳಹನುಮಂತರಾವ ಲಿಂಸುಗೂರು)
(೬) ಜಗದೀಶ ವಿಠಲರು
(೭) ಶ್ರೀನಿವಾಸ ವಿಠಲರು
(೮) ಮುದ್ದು ಗುರುಜಗನ್ನಾಥವಿಠಲರು.

ಈ ಕೊನೆಯ ಮೂವರು ಯಾರೆಂಬುದು ಸರಿಯಾಗಿ ತಿಳಿದು ಬಂದಿಲ್ಲ. ಈ ಮೇಲಿನ ವಿಷಯವನ್ನು ಶ್ರೀ ಕೆ. ಅಪ್ಪಣ್ಣಾಚಾರ್ಯರು ತಮ್ಮ 'ಗುರು ಜಗನ್ನಾಥದಾಸರ ಕೃತಿಗಳು' ಎಂಬ ಪುಸ್ತಕದಲ್ಲಿ ಹೇಳಿದ್ದಾರೆ

## ವರದ ವಿಠಲರು

ದಾಸರು ಸಂಚಾರತ್ವೇನ ತಮ್ಮ ಊರಾದ ಕೌತಾಳಕ್ಕೆ ಬರುವಾಗ ಮಾರ್ಗದಲ್ಲಿ ವಿರಪಾಪುರ ಎಂಬ ಊರಿಗೆ ಬಂದಿಳಿದರು. ಈ ವಿರಪಾಪುರವು ಆಂಧ್ರಪ್ರದೇಶದ ಕರ್ನೂಲ ಜಿಲ್ಲೆಯಲ್ಲಿದೆ. ಇಲ್ಲಿ ಪ್ರಸಿದ್ಧ ವೆಂಕಟರಮಣನ ದೇವಸ್ಥಾನವಿದೆ.

"ವಿರಪಾಪುರ ವೇಂಕಟರಮಣ ನಿತ್ಯ ಸ್ಮರಿಸುವೆ ನಿನ್ನ ಚರಣ" ಎಂಬುದಾಗಿ ದಾಸರು ಸ್ವಾಮಿಯನ್ನು ಬಹುವಾಗಿ ಕೊಂಡಾಡಿದ್ದಾರೆ.

ಅವರು ವಿರಪಾಪುರದಲ್ಲಿದ್ದಾಗ ಒಂದು ಅಪರೂಪದ ಘಟನೆ ಜರುಗಿತು. ಆ ದಿನಗಳಲ್ಲಿ ಕೌತಾಳದಲ್ಲಿ ಹನುಮಂತರಾಯರೆಂಬ ಶ್ಯಾನಭೋಗರು ವಾಸವಾಗಿದ್ದರು. ಸಜ್ಜನರೂ, ಸದಾಶೀಲ ಸಂಪನ್ನರೂ ಆದ ಅವರು ತಮ್ಮ ಯಾವುದೋ ಜನ್ಮದ ಪಾಪದಿಂದ ಈ ಜನ್ಮದಲ್ಲಿ ವ್ಯಾಧಿಗ್ರಸ್ತರಾಗಿದ್ದರು. ಹಲವಾರು ದಿನಗಳಿಂದ ಅನ್ನಪಾನಾದಿಗಳು ನಿಂತುಹೋಗಿ ಮರಣೋನ್ಮುಖರಾಗಿದ್ದರು. ಯಾವಗಳಿಗೆಯಲ್ಲಾದರೂ ಪ್ರಾಣ ಹೋಗುವ ಸಾಧ್ಯತೆ ಇತ್ತು. ಅವರ ಪತ್ನಿ ಯೇನೂ ತೋಚದೆ ಚಿಂತಾಕ್ರಾಂತರಾಗಿದ್ದರು. ದೈವಭಕ್ತಿ-ಶಕ್ತಿಯಲ್ಲಿ ಬಹುಶ್ರದ್ಧೆಯಿದ್ದ ಅವಳು ವಿರಪಾಪುರದಲ್ಲಿ ಇರುವ ದಾಸರ ಬಗ್ಗೆ ಕೇಳಿದ್ದಳು. ಅವರಲ್ಲಿಯಾದರೂ ಹೋಗಿ ತನ್ನ ಸಂಕಟವನ್ನು ಹೇಳಿಕೊಳ್ಳಬೇಕೆಂದು ನಿರ್ಧರಿಸಿದಳು. ವಿರಪಾಪುರಕ್ಕೆ ಬಂದು ತನ್ನ ಸಂಕಟವನ್ನು ದಾಸರಲ್ಲಿ ನಿವೇದಿಸಿಕೊಂಡಳು. ಹೇಗಾದರೂ ತಾನು ಹಚ್ಚಿಕೊಂಡ ಕುಂಕುಮಕ್ಕೆ ಹಾನಿ ಬರದಿರಲಿ, ತಾನು ಮುಡಿದ ಹೂ ಬಾಡದಿರಲಿ ಎಂದು ಪ್ರಾರ್ಥಿಸಿಕೊಂಡಳು. ಅವಳನ್ನು ಕಂಡ ದಾಸರ ಮನಸ್ಸು ಕರಗಿತು.

"ಅಪೇಕ್ಷಿತಪ್ರದಾತಾನ್ಯೊ
ರಾಘವೇಂದ್ರಾನ್ನವಿದ್ಯತೇ"

ಶ್ರೀಗುರುರಾಜರು ನಂಬಿದವರನ್ನು ಎಂದೂ ಕೈಬಿಡುವುದಿಲ್ಲ. "ಶ್ರೀಗುರುರಾಜರನ್ನು ಕರೆದು ಕೊಂಡು ನಾವೇ ಕೌತಾಳಕ್ಕೆ ಬರುತ್ತೇವೆ. ಅವರಿಗೆ ಗುರುಗಳ ದರ್ಶನ ಮಾಡಿಸುತ್ತೇವೆ" ಎಂದು ಹೇಳಿ, ತಮ್ಮಲಿದ್ದ ಬೃಂದಾವನದೊಂದಿಗೆ ಕೌತಾಳಕ್ಕೆ ಬಂದಿಳಿದರು. ನೇರವಾಗಿ ಹನುಮಂತರಾಯರ ಮನೆಗೆ ಬಂದರು. ಅವರಿಗಾದರೋ ಏಳುವ ಶಕ್ತಿಯಿಲ್ಲ. ಮಲಗಿದ್ದ ಸ್ಥಿತಿಯಲ್ಲಿ ಕಣ್ಣೀರು ಸುರಿಸುತ್ತ ದಾಸರಿಗೆ ನಮಸ್ಕರಿಸಿದರು. 'ಯತ್ಪಾದಕಂಜರಜಸಾ ಪರಿಭೂಷಿತಾಂಗಾ' ಎಂದು ಗುರುಸ್ತೋತ್ರದಲ್ಲಿ ಹೇಳಿದ ಅಪ್ಪಣ್ಣಾಚಾರ್ಯರು

ರಾಯರ ಭಕ್ತರ ಮಹಿಮೆಯೇ ಅಪಾರವಾದುದು ಎಂದಿದ್ದಾರೆ. ದಾಸರನ್ನು ಕಂಡ ಈ ಹನುಮಂತರಾಯರಿಗೆ ತಮ್ಮ ಉದ್ಧಾರಕ್ಕಾಗಿ ಗುರುರಾಜರೇ ತಮ್ಮ ಮನೆಗೆ ಬಂದಿರುವರೆಂದು ಅರಿತರು. ಆ ದಿನ ತಮ್ಮ ನಿತ್ಯ ಕರ್ಮಗಳನ್ನು ಪೂರೈಸಿದ ದಾಸರು ಹನುಮಂತರಾಯರನ್ನು ಬೃಂದಾವನದ ಮುಂದೆ ಕೂಡಿಸಿಕೊಂಡು

"ನಿನ್ನ ದಾಸನಿವನೇ ಅನನ್ಯರಕ್ಷಕನೇ
ಅನ್ಯರಿಗಾಲ್ಪರಿಯದಂತೆ ಮನ್ನಿಸಿ ಪೊರಿ ಧ್ವರಿಯೇ"
- - - - - - - - - - - - - -
- - - - - - - - - - - - -
ಬಂದವಿಪತ್ತನ್ನು ಈಗ ಛಿಂದಿಸಿಬಿಡು ಬೇಗ
ಬಂದಾ ದುರಿತಗಳೆಲ್ಲ ನೀ ನಿಂದ್ರಾದಂತೆ ಮಾಳ್ಪದೋ"-
ಎಂದು ಪ್ರಾರ್ಥಿಸಿಕೊಂಡರು.

ಹನುಮಂತರಾಯರು ದಿನೇದಿನೇ ವ್ಯಾಧಿಯಿಂದ ಮುಕ್ತರಾದರು. ಪುನಃಚೇತರಿಸಿಕೊಂಡರು. ಗುಣಮುಖರಾದ ಅವರನ್ನು ಕೂಡಿಸಿಕೊಂಡು "ವರದ ವಿಠ್ಠಲ" ಎಂದು ಅಂಕಿತ ನೀಡಿ ಮುಂದೆ ಶ್ರೀಹರಿಯದಾಸರಾಗಿ ಸೇವೆ ಸಲ್ಲಿಸುವಂತೆ ಉಪದೇಶ ನೀಡಿದರು. ಹನುಮಂತರಾಯರು ವರದ ವಿಠ್ಠಲರಾಗಿ, ಗುರುಜಗನ್ನಾಥದಾಸರ ಶಿಷ್ಯರಾಗಿ ಅನೇಕ ಕೀರ್ತನೆಗಳನ್ನು ರಚಿಸಿ ದಾಸಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

## ವರದೇಶ ವಿಠ್ಠಲರು

"ವರದ ವಿಠಲ" ರಿಗಾಗಿ ಕೌತಾಳಕ್ಕೆ ಬಂದ ದಾಸರು ಅಲ್ಲಿಯೇ ವಾಸ್ತವ್ಯ ಮಾಡಿದರು. ಆದರ್ಶ ವೈಷ್ಣವ ಜೀವನವನ್ನು ಪ್ರಾರಂಭಿಸಿದರು. ಪ್ರತಿನಿತ್ಯ ಶ್ರೀಹರಿವಾಯುಗುರುಗಳ ಪೂಜೆ, ಪಾಠ-ಪ್ರವಚನ-ಭಜನೆಗಳಲ್ಲಿ ತಮ್ಮ ಸಮಯವನ್ನು ಸಾರ್ಥಕವಾಗಿ ಕಳೆಯುತ್ತ, ಸಂಸ್ಕೃತ ಗ್ರಂಥಗಳ ರಚನೆಯನ್ನು

ಮಾಡಿದರು. ಕೀರ್ತನೆಗಳನ್ನು ರಚಿಸಿದರು. ಶ್ರೀಹರಿಗೆ ಬಹು ಪ್ರೀತಿಕರವಾದ ವಾಙ್ಮಯ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇದೆಲ್ಲವನ್ನೂ ಕಾಲನಾಮಕ ಪರಮಾತ್ಮನಿಗೆ ಅರ್ಪಿಸುತ್ತ ಸಂತೃಪ್ತಿಯಿಂದ ಬದುಕುತ್ತಿದ್ದ ದಿನಗಳವು.

ಶ್ರೀಗುರುಜಗನ್ನಾಥದಾಸರಿಗೆ ಒಮ್ಮೆ ಸ್ವಪ್ನದಲ್ಲಿ ಶ್ರೀವರದೇಂದ್ರರು ಕಾಣಿಸಿ ಕೊಂಡು ತಾವು ಬೃಂದಾವನದಲ್ಲಿ ನೆಲೆನಿಂತ ಲಿಂಗಸುಗೂರಿಗೆ ಬರುವಂತೆಯೂ, ಅಲ್ಲಿ ತಮ್ಮ ಸೇವೆಯಲ್ಲಿ ನಿರತನಾಗಿದ್ದ ಒಬ್ಬ ಸುಜೀವಿಯನ್ನು ಉದ್ಧರಿಸುವಂತೆಯೂ ಸೂಚಿಸಿದರು. ದಾಸರು ಬಹು ಸಂತಸದಿಂದ ಲಿಂಗಸುಗೂರಿಗೆ ಪ್ರಯಾಣ ಬೆಳೆಸಿದರು. ಶ್ರೀವರದೇಂದ್ರರ ದರ್ಶನಕ್ಕಾಗಿ ಅಷ್ಟೇ ಉತ್ಸುಕತೆಯಿಂದ ಬಂದರು.

ಲಿಂಗಸುಗೂರಿನಲ್ಲಿ ಸಂತೆಕೆಲೂರಿನ ಸ್ವಾಮಿರಾಯ ಎಂಬ ವಕೀಲರು ಶ್ರೀವರದೇಂದ್ರರ ಸೇವೆಯಲ್ಲಿ ನಿರತರಾಗಿದ್ದರು, ಯಾವ ಐಹಿಕ ಭೋಗಗಳನ್ನೂ ಅಪೇಕ್ಷಿಸದ ಅವರು ತಮಗೊಬ್ಬ ಗುರುಗಳನ್ನು ತೋರಿಸಿ, ಆಧ್ಯಾತ್ಮ ಸಾಧನೆಯಲ್ಲಿ ತಮ್ಮನ್ನು ಕೈಹಿಡಿದು ನಡೆಸುವ ಗುರುಗಳನ್ನು ಪಡೆಯಲು ಶ್ರೀವರದೇಂದ್ರರ ಸೇವೆಯಲ್ಲಿ ನಿರತರಾಗಿದ್ದರು. "ಸಪ್ತಮೋ ಮತ್ಸಮೋಯೋಗಿ ವರದೇಂದ್ರೋ ಭವಿಷ್ಯತಿ"–ಎಂದಿದ್ದಾರೆ ಮಂತ್ರಾಲಯ ಪ್ರಭುಗಳು – ಅಲ್ಲವೇ ?

ಶ್ರೀವರದೇಂದ್ರರು ಸ್ವಾಮಿರಾಯರ ಸ್ವಪ್ನದಲ್ಲಿ ಕಾಣಿಸಿಕೊಂಡು ಮರುದಿನ ಅ ಊರಿಗೆ ಆಗಮಿಸಲಿರುವ ಶ್ರೀಗುರುಜಗನ್ನಾಥದಾಸರೆ ಅವರ ಸ್ವರೂಪೋದ್ಧಾರಕ ಗುರುಗಳು ಎಂಬುದಾಗಿಯೂ ಹಾಗೂ ಅವರಿಂದ ದಾಸದೀಕ್ಷೆಯನ್ನು ಪಡೆಯುವಂತೆಯೂ ಆಜ್ಞಾಪಿಸಿದರು. ಸ್ವಾಮಿರಾಯರು ತಮ್ಮ ಸೇವೆ ಸಾರ್ಥಕವಾದದ್ದನ್ನು ಕಂಡು ಬಹು ಹಿಗ್ಗಿದರು. ಪ್ರತಿಕ್ಷಣವೂ ಗುರುವಿನ ಆಗಮನಕ್ಕಾಗಿ ಕಾಯುತ್ತ ಕುಳಿತರು. ಶ್ರೀಗುರುಜಗನ್ನಾಥದಾಸರು ಆಗಮಿಸಿದ್ದನ್ನು ಕಂಡ ಅವರು ಬಹುಸಂತೋಷದಿಂದ ಸಾಷ್ಟಾಂಗಪ್ರಣಾಮವನ್ನು ಮಾಡಿ ತಾವು ಕಂಡ ಸ್ವಪ್ನವನ್ನು ಅವರಿಗೆ ತಿಳಿಸಿದರು. ದಾಸರು ತಾವು ಅಲ್ಲಿಗೆ ಬಂದ ಕಾರಣವನ್ನೂ ಅವರಿಗೆ ತಿಳಿಸಿದರು.

ಆ ದಿನ ಶ್ರೀವರದೇಂದ್ರರ ದಿವ್ಯ ಸನ್ನಿಧಿಯಲ್ಲಿ ಬಹು ವೈಭವದಿಂದ ಶ್ರೀಹರಿವಾಯುಗುರುಗಳ ಪೂಜಾದಿಗಳನ್ನು ನೆರವೇರಿಸಿ ಸ್ವಾಮಿರಾಯರನ್ನು ಕರೆದು ತಮ್ಮ ಬಳಿ ಕೂಡ್ರಿಸಿಕೊಂಡು, ಅವರ ತಲೆಯ ಮೇಲೆ ತಮ್ಮ ವರದ ಹಸ್ತವನ್ನಿಟ್ಟು "ವರದೇಶ ವಿಠಲ" ಎಂದು ಅಂಕಿತಪ್ರದಾನ ಮಾಡಿದರು. ಸಚ್ಛಾಸ್ತ್ರ ಉಪದೇಶ ಮಾಡಿದರು. ದಾಸವಾಙ್ಮಯ ಸೇವೆಯಲ್ಲಿ ತೊಡಗಿ ಜೀವನವನ್ನು ಸಾರ್ಥಕ ಪಡಿಸಿಕೊಳ್ಳುವಂತೆ ಉಪದೇಶಿಸಿದರು. ಸ್ವಾಮಿರಾಯರು ಈ ಘಟನೆಯನ್ನು ತಮ್ಮ ಒಂದು ಕೀರ್ತನೆಯಲ್ಲಿ ಬಹು ಮನೋಜ್ಞವಾಗಿ ಬಣ್ಣಿಸಿ, ತಮ್ಮ ಗುರುಗಳಿಗೆ ಕೃತಜ್ಞತೆ ಹೇಳಿದ್ದಾರೆ.

"ಗುರುವೆ ನೀನೊಲಿದು ಪಾಮರತರನಾದೆನ್ನ
ಹರುಷದಿ ಕರಪಿಡಿದಿ ।
ಪರಮ ಹರುಷದಿಂದ ಹರಿದಾಸ್ಯತನವಿತ್ತು-
ದ್ಧರಿಸಿದ ಉಪಕಾರ ಮರೆಯಲಾರೆನೊಯೆಂದು
ವರದೇಂದ್ರಾರ್ಯರು ನಮ್ಮ ಶರಣನು ಇವನಿಗೆ
ಕರುಣಿಸೆಂದಾಜ್ಞಾಪಿಸೆ

ತರಳನಾ ಶಿರದಲ್ಲಿ ಕರವಿಟ್ಟು ಕೃಪೆಯಿಂದ
ಗುರುತು ತೋರಿದುದಕ್ಕೇ ನಾ ಪರಮಧನ್ಯನೆಂಬೆ॥
- - - - - -------- - - - - -
- - - - - - - - - - - - - - - - - -
- - - - - - - - - - - - - - - - -
ವರದೇಶ ವಿಠಲನ್ನ ಸ್ಥಿರದಾಸ್ಯತನವೆಂಬೊ
ಗುರುತು ತೋರುವುದಯ್ಯ ಗುರುಜಗನ್ನಾಥಾರ್ಯಾ"

ಎಂದು ಗುರುಪಾದಕ್ಕೆ ಹಣೆ ಮಣಿದಿದ್ದಾರೆ.

ಲಿಂಗಸುಗೂರಿನಲ್ಲಿ ದಾಸರು ನಾಲ್ಕು ಜನ ಶಿಷ್ಯರಿಗೆ ಅಂಕಿತಪ್ರದಾನ ಮಾಡಿ ಹರಿದಾಸರನ್ನಾಗಿ ಮಾಡಿದ್ದರೆಂಬುದು ಶ್ರೀವರದವಿಠ್ಠಲರ ಒಂದು ಕೀರ್ತನೆಯಿಂದ ತಿಳಿದುಬರುತ್ತದೆ.

"ಗುರುಗಳ ಆಜ್ಞೆಧಿ ಲಿಂಗಸುಗೂರಿಗೆ ಬಂದ ತಳೆದ। ಆನಂದ,। ಹರುಷದಿ ನಾಲ್ವರಿಗಂಕಿತವನು ತಾ ಕೊಟ್ಟ । ಅಘಗಳ ಸುಟ್ಟ। ಗುರುವರದೇಂದ್ರರ ಸ್ತೋತ್ರವಗೈದನು ಈತ। ನರಹರಿ ಪ್ರೀತಾ।" ಎಂದಿದ್ದಾರೆ. ಆ ನಾಲ್ವರು ದಾಸರೆಂದರೆ–

೧. ವರದೇಶ ವಿಠಲರು (ಸ್ವಾಮಿರಾವ ಸಂತೆಕೆಲೂರ)
೨. ಆನಂದ ವಿಠಲರು (ರಾಮರಾವ ಕುಲಕರ್ಣಿ)
೩. ವರದೇಂದ್ರ ವಿಠಲರು (ವೆಂಕಟೇಶ ಹಳ್ಳೇರಾವ)
೪. ಸುಂದರ ವಿಠಲರು (ಹನುಮಂತರಾವ ಗೋರಾಬಾಳ)

ಈ ನಾಲ್ವರೂ ಶಿಷ್ಯರಿಗೆ ಹರಿದಾಸ ಅಂಕಿತವನ್ನು ನೀಡಿರುವ ಈ ಒಂದು ಸಂದರ್ಭ ಶ್ರೀವರದೇಂದ್ರರ ಸನ್ನಿಧಿಯಲ್ಲಿ ನಡೆದಿರಬಹುದು. ಆ ಐದು ನುಡಿಗಳ ಅಂಕಿತ ಪ್ರದಾನ ಕೀರ್ತನೆ ಈ ಕೆಳಗಿನಂತಿದೆ.

"ಭಾರತಿ ರಮಣ ನಾ ಸಾರುವೆ ಚರಣ
ತೋರೊ ಮನ್ಮನದಲಿ ಭೂರಿಸುಕರಣ ಪ

ನಾರಾಯಣಾಂಕದಿ ಕುಳಿತಿಹ ಶೂರ
ಸೂರಿಸ್ತೋಮ ತೇಜರಂಜಿಪುದುದಾರ
ಮಾರಮಣನಾಜ್ಞದಿಂ ಬ್ರಹ್ಮಾಂಡಾಧಾರ
ಧಾರಕಾನಂದ ವಿಠಲನ್ನ ಚಾರ
ದುರುಳ ರಕ್ಕಸತತಿ ದ್ವಾರದ ವಿದಾರ
ಹರಿ ರಘು ವರನ ಪಾದ ಶರಧಿಜಚಕೋರ
ಹರಮುಖ್ಯ ಸುರ ಸರಸಿರುಹಕೆ ದಿನಕರ
ವರದೇಶ ವಿಠಲನ್ನ ಸ್ಮರಿಪ ಸಮೀರ ೨

ಕುರುಕುಲಸಂಜಾತ ದ್ರುಪದಜಾನಾಥ
ದುರಿಯೋಧನನ ಊರು ಕಡಿದ ನಿರ್ಭೀತ
ಪರಮ ಭಗವದ್ಭಕ್ತವೃಂದ ಸುಪ್ರೀತ
ವರದೇಂದ್ರ ವಿಠಲನ ಪ್ರಿಯಸುತರಾತ ೩

ಅದ್ವೈತ ಮತ ತಿಮಿರ ಧ್ವಂಸನ ಧೀರ
ಶುದ್ಧ ಮತ ವೈಷ್ಣವ ಸ್ಥಾಪನಾಚಾರ್ಯ
ಸದ್ವಾಕ್ಯದಿಂದಲಿ ಹರಿಪಾರಾವಾರ
ಮಧ್ವಸುಂದರ ವಿಠಲನ ಸುಕುಮಾರ ೪

ವರದೇಶ ವಿಠಲ ವರದೇಂದ್ರ ವಿಠಲ
ಸುಂದರ ವಿಠಲ ಆನಂದ ವಿಠಲನ್ನ
ಪರಿಪರಿ ವಿಧದಲಿ ಕರಣವ ಪಡೆದಿಹ
ಗುರುಜಗನ್ನಾಥ ವಿಠಲನ ನಿಜದೂತ ೫

ಈ ಒಂದು ಪದ್ಯವು ಗುರು–ಶಿಷ್ಯರ ಅನ್ಯೋನ್ಯ ಪ್ರೇಮ–ಭಕ್ತಿ–ವಿಶ್ವಾಸಗಳನ್ನು ಬಹು ಚನ್ನಾಗಿ ತೋರಿಸುತ್ತದೆ. ಕೌತಾಳ ಲಿಂಗಸುಗೂರು ಹಾಗೂ ಇನ್ನಿತರ ಸ್ಥಳಗಳನ್ನು ಗುರುಜಗನ್ನಾಥದಾಸರು ಸಂದರ್ಶಿಸಿದ್ದು, ಆಯಾ ಸ್ಥಳಗಳಲ್ಲಿ ಅವರಿಗೆ ಹಲವಾರು ಶಿಷ್ಯರಿದ್ದಂತೆ ತೋರುತ್ತದೆ. ಆದರೆ ಅವರುಗಳ ಉಲ್ಲೇಖವು ಎಲ್ಲಿಯೂ ಕಂಡು ಬರುವುದಿಲ್ಲ. ಅಥವಾ ಅವರು ಈ ಮೇಲೆ ಹೆಸರಿಸಿದ ಶಿಷ್ಯರಂತೆ ಕೃತಿಗಳನ್ನು ರಚಿಸಿರಲಿಕ್ಕಿಲ್ಲ; ಅಥವಾ ರಚಿಸಿದ್ದರೂ ಅವು ಲಭ್ಯವಿಲ್ಲ. ಹಲವಾರು ಸಜ್ಜನರನ್ನು ತಮ್ಮ ಶಿಷ್ಯರನ್ನಾಗಿ ಸ್ವೀಕರಿಸಿ ಅವರನ್ನು ಸನ್ಮಾರ್ಗದಲ್ಲಿ ಮುನ್ನಡೆಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ದಾಸರ ಶಿಷ್ಯರಾದರೋ ಸನ್ಮಾರ್ಗ–ಸಚ್ಛಾಸ್ತ್ರ–ಸತ್ಸಂಗಗಳನ್ನು ಅರಸುತ್ತ ಸಾಧನ ಮಾರ್ಗದಲ್ಲಿ ನಡೆದು ಸತ್ಪರಂಪರೆಯನ್ನು ಮುಂದುವರೆಸಿಕೊಂಡು ಬಂದದ್ದು, ಗುರು ಜಗನ್ನಥದಾಸರ ಅನುಗ್ರಹದಿಂದಲೇ!

**ಅವತಾರ ಸಮಾಪ್ತಿ**

ಮಂತ್ರಾಲಯಪ್ರಭುಗಳ ಅಂತರಂಗ ಭಕ್ತರಾದ ಗುರುಜಗನ್ನಾಥದಾಸರು ಆ ಮಹಾನುಭಾವರ ಸೇವೆಯನ್ನು ಪರಿಪರಿಯಾಗಿ ಮಾಡಿದರು.

ಶ್ರೀಜಗನ್ನಾಥದಾಸರು ಸಂದೇಶಿಸಿದಂತೆ–

ಸರ್ವದೇಶವು ಪುಣ್ಯದೇಶವು
ಸರ್ವಕಾಲವು ಪುಣ್ಯಕಾಲವು
ಸರ್ವಜೀವರು ದಾನಪಾತ್ರರು ಮೂರುಲೋಕದೊಳು।

ಸರ್ವಮಾತುಗಳೆಲ್ಲ ಮಂತ್ರವು
ಸರ್ವಕಾರ್ಯಗಳೆಲ್ಲ ಪೂಜೆಯು
ಶರ್ವವಂದ್ಯನ ವಿಮಲಮೂರ್ತಿಧ್ಯಾನವುಳ್ಳವಗೆ॥

ಎಂಬಂತೆ ಹಾಗೂ ಆಚಾರ್ಯ ಮಧ್ವರು ಗೀತಾಭಾಷ್ಯದಲ್ಲಿ ಅಪ್ಪಣೆ ಕೊಡಿಸಿದಂತೆ "ನಾನಾ ಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇ:"– ದಾಸರು ಸಮಾಜದ ಕೆಳವರ್ಗದವರನ್ನೂ ಸಹ ತಮ್ಮ ಶಿಷ್ಯರನ್ನಾಗಿಸಿಕೊಂಡರು. ಅವರನ್ನೂ ಸಹ ಅನೇಕ ದುಷ್ಟ ಹವ್ಯಾಸಗಳಿಂದ ಮುಕ್ತಗೊಳಿಸಿ, ಸನ್ಮಾರ್ಗದಲ್ಲಿ ನಡೆಸಿದ್ದಾರೆ. ಗಜೇಂದ್ರಗಡ, ಕೌತಾಳ ಮುಂತಾದ ಊರುಗಳಲ್ಲಿ ಇಂದಿಗೂ ದಾಸರ ಹೆಸರನ್ನು ಹೇಳುವ ಶಿಷ್ಯ ಪರಂಪರೆಯನ್ನು ನಾವು ಕಾಣಬಹುದು.

ತಮ್ಮ ಜೀವಿತ ಅವಧಿಯಲ್ಲಿ ಅವರು ಶ್ರೀಗುರುರಾಜರ ಆರಾಧನೆಯನ್ನು ಬಹು ವೈಭವದಿಂದ ಮಾಡುತ್ತಿದ್ದರು. ಶ್ರೀಗುರುರಾಜರ ಬೃಂದಾವನವನ್ನು ಸ್ಥಾಪಿಸಿದ ಕೌತಾಳದಲ್ಲಿ ಈ ಆರಾಧನೆಯನ್ನು ಬಹು ಶ್ರದ್ಧಾ–ಭಕ್ತಿಗಳಿಂದ ನೆರವೇರಿಸುತ್ತಿದ್ದರೆಂಬುದು ಕಿಂವದಂತಿಗಳಿಂದ ತಿಳಿದು ಬರುತ್ತದೆ. ಅದು ಕಾಳಯುಕ್ತಿನಾಮ ಸಂವತ್ಸರ. ದಾಸರ ಶಿಷ್ಯರೆಲ್ಲರೂ ಆರಾಧನಾ ನಿಮಿತ್ತ ಕೌತಾಳಕ್ಕೆ ಆಗಮಿಸಿದ್ದಾರೆ.

"ಸಾಲಮಾಡಲಿ ಬೇಡ
ಸಾಲದೆಂದೆನ ಬೇಡ
ನಾಳಿಗೆ ಹೇಗೆಂಬ ಚಿಂತೆಬೇಡ"

ಎಂಬ ಶ್ರೀ ವಿಜಯದಾಸರ ವಚನದ ಮೇಲೆ ದಾಸರಿಗೆ ತುಂಬ ಶ್ರದ್ಧೆ.

ಅದು ಕ್ರಿ.ಶ.೧೯೧೮ನೇ ಇಸ್ವಿಯಲ್ಲಿಯ ಶ್ರೀಗುರುರಾಜರ ಆರಾಧನೆ! ಶ್ರೀಗುರುರಾಜರು ತಮ್ಮ ಆರಾಧನೆಯನ್ನು ತಾವೇ ತಮ್ಮ ಭಕ್ತರನ್ನು ಪ್ರೇರೇಪಿಸಿ ಮಾಡಿಸಿಕೊಳ್ಳುವರೆಂಬ ಶ್ರದ್ಧೆ ದಾಸರಿಗೆ. ಅಂತೂ ಪ್ರತಿವರುಷ ಆರಾಧನೆ ವೈಭವದಿಂದ ನಡೆದು ಹೋಗುತ್ತಿತ್ತು. ಆರಾಧನೆ ಮುಗಿದ ನಂತರ ದಾಸರ ಶಿಷ್ಯರಾದ ವರದೇಶವಿಠಲರು ತಮ್ಮ ಗುರುಗಳಾದ ಗುರುಜಗನ್ನಾಥದಾಸರನ್ನು ಕುರಿತು ಒಂದು ಕೀರ್ತನೆಯನ್ನು ರಚಿಸಿ ಹಾಡಿದರು.

"ಸ್ಮರಿಸಿ ಬದುಕಿರೋ ಗುರುರಾಯರ ಪದವ ಕೊಡುವನು ಸಂಪದವ" ಎಂಬುದೇ ಆ ಕೀರ್ತನೆ. ತಮ್ಮಗುರುಗಳ ಸ್ವರೂಪವನ್ನು ತಿಳಿದಿದ್ದ ವರದೇಶವಿಠಲರು ಆ ಕೀರ್ತನೆಯಲ್ಲಿ ತಮ್ಮ ಗುರುಗಳ ಮೊದಲಿನ ಅವತಾರಗಳನ್ನು ಕುರಿತು ಸೂಕ್ಷ್ಮವಾಗಿ ಹಾಡಿದ್ದರು. ಅಲ್ಲಿ ಸೇರಿದ ಜನರು ಈ ಕೀರ್ತನೆಯನ್ನು ಕೇಳಿ ಅಚ್ಚರಿಗೊಂಡರು. ಜೊತೆಗೆ ದಾಸರ ಮಹಿಮಾತಿಶಯಗಳನ್ನು ತಿಳಿದು ಪುನಃ ಪುನಃ ಅವರಿಗೆ ನಮಸ್ಕರಿಸಿದರು. ಅಲ್ಲಿ ನೆರೆದ ಜನರೆಲ್ಲರೂ ಅಂದು ಇದೇ ವಿಷಯವನ್ನು ಕುರಿತು ಚರ್ಚಿಸಿದ್ದೇ ಚರ್ಚಿಸಿದ್ದು.

ಈ ಘಟನೆಯ ನಂತರ ದಾಸರು ಬಹಳಷ್ಟು ಅಂತರ್ಮುಖಿಗಳಾದರು. ಹೆಚ್ಚು ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಯಾವಾಗಲೂ ಧ್ಯಾನಾಸಕ್ತರಾಗಿರುತ್ತಿದ್ದರು. ಒಮ್ಮೆ ದಾಸರು ಶಿಷ್ಯರಾದ ವರದೇಶ ವಿಠಲರನ್ನು ಕರೆದು, "ನೀವು ಇನ್ನು ಊರಿಗೆ ಪ್ರಯಾಣ ಮಾಡಿರಿ. ನಿಮ್ಮ ಹಿಂದೆ ನಾವೂ ಬರುತ್ತೇವೆ", ಎಂದು ಆಜ್ಞಾಪಿಸಿದರು. ಜ್ಞಾನಿಗಳ ಮಾತು ಒಮ್ಮೊಮ್ಮೆ ಪಂಡಿತರಿಗೆ ಅರ್ಥವಾಗುವುದಿಲ್ಲ.

"ನಾನು ಹೋದರೆ ಹೋದೇನು"-ಎಂದು ಪಂಡಿತರ ಸಭೆಯಲ್ಲಿ ಕನಕದಾಸರು ಹೇಳಿದಂತೆ, ಅಲ್ಲವೆ?

ವರದೇಶರು ಲಿಂಗಸುಗೂರಿಗೆ ಹೋಗಲು ದಾಸರು ಆಜ್ಞಾಪಿಸಿದರೆಂದೇ ಎಲ್ಲರೂ ತಿಳಿದುಕೊಂಡರು. ಗುರುಗಳ ಮಾತು ಶಿಷ್ಯ ವರದೇಶರಿಗೆ ಮಾತ್ರ

ಅರ್ಥವಾಗಿತ್ತು. ವರದೇಶ ವಿಠಲರು ಇಹ ಲೋಕಯಾತ್ರೆಯನ್ನು ಮುಗಿಸಿ ಪರಲೋಕ ಯಾತ್ರೆಯನ್ನು ಮಾಡಿದ್ದರು.

ವರದೇಶ ವಿಠಲರು ವೈಕುಂಠ ವಾಸಿಗಳಾದ ಹದಿಮೂರನೇ ದಿನದಂದು ಶ್ರೀಗುರುಜಗನ್ನಾಥದಾಸರು ತಾವು ಈ ಜಗತ್ತಿನಲ್ಲಿ ತಮ್ಮ ಅವತಾರ ಕಾರ್ಯವನ್ನು ಪೊರೈಸಿ, ಶ್ರೀಹರಿಯ ಇಚ್ಛೆಯಂತೆ ಪರಲೋಕದ ಯಾತ್ರೆಯನ್ನು ಮಾಡಿದರು. ಅಂದು ೩೦-೧೦-೧೯೧೮ ರವಿವಾರ ಆಶ್ವಯುಜ ಕೃಷ್ಣಪಕ್ಷ ಪ್ರತಿಪದೆಯಾಗಿತ್ತು. ದೇಹ ಬಿಡುವ ಪೂರ್ವದಲ್ಲಿ ತಮ್ಮ ಬಾಳಿನಲ್ಲಿ ಬೆಳಕನ್ನು ತೋರಿದ, ಪತಿತರಾಗಿ ಬಿದ್ದ ತಮ್ಮನ್ನು ಎತ್ತಿ ಉದ್ಧಾರ ಮಾಡಿದ ಮಂತ್ರಾಲಯ ಪ್ರಭುಗಳನ್ನು ತದೇಕ ಚಿತ್ತದಿಂದ ಸ್ಮರಿಸಿದರು. ಅಂತರಂಗದಲ್ಲಿ ತಮ್ಮ ಬಿಂಬ ಮೂರುತಿಯ ದರುಶನವನ್ನು ಪಡೆದರು. ಕೋಶಿಗಿ ಕ್ಷೇತ್ರದ ಕೋಹಿನೂರ ರತ್ನವು ಕಣ್ಮರೆಯಾಯಿತು. ಕಟ್ಟಾ. ಗುರುಭಕ್ತರಾಗಿ, ಅಪ್ಪಟ ಭಾಗವತರಾಗಿ, ಆದರ್ಶದಾಸರಾಗಿ ಬಹು ಮೌಲಿಕ ಬಾಳನ್ನು ಬಾಳಿದ ಶ್ರೀಗುರುಜಗನ್ನಾಥದಾಸರನ್ನು ಕುರಿತು ಅವರ ಶಿಷ್ಯ ವರದೇಂದ್ರವಿಠಲರು ಒಂದು ಸುಂದರವಾದ ಕೀರ್ತನೆಯನ್ನು ಮಾಡಿದ್ದಾರೆ.

"ಅತಿ ಹರುಷಮಂ ತಾಳಿ ತೆರಳಿದಾರು
ವಿತತ ಮಹಿಮನ ಪುರಕೆ ಗುರುಜಗನ್ನಾಥಾರ್ಯ"

ಎಂದು ಗುರುಸ್ಮರಣೆ ಗೈದ ಅವರು, ದಾಸರ ಅವತಾರಗಳನ್ನು, ಮಹಿಮೆಗಳನ್ನು ಮನಂಬುಗುವಂತೆ ವರ್ಣಿಸಿದ್ದಾರೆ.

## ಕೃತಿಗಳ - ಸಮೀಕ್ಷೆ

ಶ್ರೀಗುರುಜಗನ್ನಾಥದಾಸರು ಹರಿದಾಸ ಅಂಕಿತ ಪಡೆಯುವದಕ್ಕೂ ಪೂರ್ವದಲ್ಲಿ ಹಲವಾರು ಕೃತಿಗಳನ್ನು ಸಂಸ್ಕೃತದಲ್ಲಿ ರಚಿಸಿದಂತೆ ಕಂಡುಬರುತ್ತದೆ. ಬಾಲ್ಯದಿಂದಲೂ ವ್ಯಸನಿ ಹಾಗು ದಡ್ಡ, ಮದಡ ಎಂಬ ಟೀಕೆಗೆ ಗುರಿಯಾಗಿದ್ದರೂ, ಮಂತ್ರಾಲಯ ಪ್ರಭುಗಳು ಅವರನ್ನು, ಅನುಗ್ರಹಿಸಿದ ಮೇಲೆ ಅವರ ಜೀವನದ

ರೀತಿ–ಸ್ವರಗಳು ಬೇರೆಯಾದವು, ಆ ಮಹಾನುಭಾವರ ಅನುಗ್ರಹದ ಮುಂದೆ ಯಾವದು ತಾನೆ ಕೆಲಸಮಾಡೀತು? ಆದ್ದರಿಂದಲೇ ದಾಸರು ಹೀಗೆ ಹೇಳಿದ್ದು.

"ವೇದಶಾಸ್ತ್ರ–ಪುರಾಣ ಕಥೆಗಳ–
ನೋದಿ ಕೇಳ್ದವನಲ್ಲ ತತ್ವದ
ಹಾದಿ ತಿಳಿದವನಲ್ಲ ಬುಧಜನಸಂಗ ಮೊದಲಿಲ್ಲ।
ಮೋದತೀರ್ಥ ಪದಾಬ್ಜ–ಮಧುಕರ
ರಾದ ಶ್ರೀಗುರುರಾಘವೇಂದ್ರರ
ಪಾದಪದ್ಮಪರಾಗಲೇಶದ ಸ್ಪರ್ಶಮಾತ್ರದಲಿ
ಕೃತಿಯ ಮಾಡುವ ಶಕುತಿ ಪುಟ್ಟಿತು
ಮತಿಯ ಮಾಂದ್ಯವು ತಾನೆ ಪೋಯಿತು
ಯತನವಿಲ್ಲದೆ ಸಕಲ ಶ್ರುತಿ ಸ್ಮೃತ್ಯರ್ಥ ತಿಳಿದಿಹದೋ"

ಎಂದಿದ್ದಾರೆ. ಅವರ ಸಂಸ್ಕೃತ ಗ್ರಂಥಗಳು ಬಹು ಪಾಂಡಿತ್ಯ ಪೂರ್ಣವಾಗಿದ್ದು ಶ್ರೀಮದ್ವಮತದ ತತ್ತ್ವಗಳನ್ನು ತಿಳಿಯಲು ಬಹು ಸಹಕಾರಿಯಾಗಿವೆ. ಅವರು ಹರಿದಾಸ ಅಂಕಿತವನ್ನು ಸ್ವೀಕರಿಸುವ ಪೂರ್ವದಲ್ಲಿ ಈ ಸಂಸ್ಕೃತ ಗ್ರಂಥಗಳನ್ನು ರಚಿಸಿದರು. ದಾಸರಾದ ನಂತರ ಕೇವಲ ಕನ್ನಡ ಕೃತಿಗಳನ್ನು ರಚಿಸಿರಬಹುದೆಂದು ತೋರುತ್ತದೆ. ಹತ್ತೊಂಭತ್ತನೆಯ ಶತಮಾನದಿಂದ ಈಚೆಗೆ ಆಗಿ ಹೋದ, ದಾಸರಲ್ಲಿ (ಬಹುಶಃ ೫೦ಕ್ಕೂ ಮೀರಿ) ಬಹಳಷ್ಟು ಕೃತಿಗಳನ್ನು ರಚಿಸಿದ ದಾಸರೆಂದರೆ ಶ್ರೀಗುರುಜಗನ್ನಾಥದಾಸರೇ ಎಂದರೆ ತಪ್ಪಾಗಲಿಕ್ಕಿಲ್ಲ. ದಾಸರ ಕೃತಿಗಳಲ್ಲಿ ಹಲವು ಬಗೆಯ ಮಜಲುಗಳನ್ನ ನಾವು ಕಾಣುತ್ತೇವೆ.

### ಆತ್ಮಶೋಧನೆ

ಬಹುಶಃ ಎಲ್ಲ ಹರಿದಾಸರಲ್ಲಿ ಆತ್ಮಶೋಧನೆಯ ಪರಿಯನ್ನು ನಾವು ಕಾಣುತ್ತೇವೆ. ತಾವು ಕಳೆದ ಜೀವನದ ಬಗ್ಗೆ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿ ಶ್ರೀಹರಿಯು ತಮ್ಮನ್ನು ಉದ್ಧರಿಸಿದನಲ್ಲಾ ಎಂಬ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಶ್ರೀಗುರುಜಗನ್ನಥದಾಸರೂ ಇದಕ್ಕೆ ಹೊರತಾಗಿಲ್ಲ.

"ಎನ್ನ ಮೊರೆಯ ಕೇಳಬಾರದೆ ಹೇ ಶ್ರೀನಿವಾಸ

ಎನ್ನ ಮೊರೆಯ ಕೇಳದಿರೆ ಎನ್ನನಿವರು ಬದುಕಿಸರು ಇನ್ನು ಮಾಡಲೇನು ಎಂದು ನಿನ್ನ ಪದಕೆ ಸಾರಿದೆನು" ಎಂದು ತಾವು ದುಷ್ಟರೊಡನೆ ಕಳೆದ ದಿನಗಳನ್ನು ನೆನಪಿಸಿಕೊಂಡಿದ್ದಾರೆ.

"ಭೇದ–ಆಧಿ–ವ್ಯಾಧಿ ಬಾಧಿ ನಿತ್ಯದಿ ಬಹು
ಆದರದಿ ಬರುತಿಪ್ಪವೋ
ವೇದಶಾಸ್ತ್ರದ ಮಹಾಹಾದಿ ತಪ್ಪಿ ಅಲವ
ಓದನಾಸಿಗೆ ಸದನಕಾದು ಕೊಂಡ ಪರರ
ಮೊದಕ ದಿಂದ ಭಜಿಸದೆ
ಓದನಾಸೆಗೆ ಸಾಧುಸಂಗವ ಬಿಟ್ಟಾಸಾಧು ಕರ್ಮಗಳಿಂದ
ಸಾಧಿಸಿದ ಪಾಪದಿಂದೇ ಬಂದೇ"

ಎಂದು ತಾವು ವ್ಯರ್ಥಜೀವನವನ್ನು ನಡೆಸಿದ್ದಕ್ಕಾಗಿ ತಹ–ತಹಪಟ್ಟಿದ್ದಾರೆ.

"ನಿನ್ನ ದಾಸರ ದಾಸನೆಂತಹನೋ

ಅನಂತ ಅಪರಾಧ ಅನುಗಾಲ ಮಾಡುತಿಹೆ"– ಎಂಬ ಇನ್ನೊಂದು ಕೀರ್ತನೆಯಲ್ಲಂತೂ, ಒಬ್ಬ ಆದರ್ಶ ವೈಷ್ಣವನು ಮಾಡಬೇಕಾದ ದಿನನಿತ್ಯದ ಕರ್ಮಗಳ ಪಟ್ಟಿಯನ್ನೇ ಹೇಳಿ, ಇಂತಹ ಶುಚಿರ್ಭೂತ ಕರ್ಮಗಳನ್ನು ತಾನು ಮಾಡಲಿಲ್ಲವಲ್ಲಾ ಎಂದು ವ್ಯಥೆಪಟ್ಟಿದ್ದಾರೆ.

"ಸ್ನಾನ ಸಂಧ್ಯಾ ಜಪ ಮೌನವೇ ಮೊದಲಾದ
ನಾನಾ–ವಿಧದ ವಿಹಿತ ಧರ್ಮ ತೊರೆದು
ನಾನು ನನ್ನದು ಎಂಬೊ ಹೀನಬುದ್ಧಿಗಳಿಂದ
ಹೀನ ಜನರೊಡಗೂಡಿ ಜ್ಞಾನಿಗಳ ನಿಂದಿಸುವೆ
ಏಕಾದಶಿಯ ಜರಿದು ಲೋಕ ವಾರ್ತೆಗಳಿಂದ
ಶ್ರೀಕಾಂತ ನಿನ್ನಸೇವೆಯನು ಮರೆದು

ಬೇಕಾದ ವೈಷಿಕವ ಸ್ವೀಕರಿಸಿ ಲೋಕದೊಳು
ಸಾಕಿದವರನು ನಾ ನಿರಾಕರಿಸಿ ಬಾಳುವೆನು"

ಎಂದು ತಾವು ಹೀನ ಜನರೊಡನೆ ವ್ಯರ್ಥ ಕಾಲಹರಣ ಮಾಡಿದ್ದುದನ್ನು ನೆನೆಪಿಸಿಕೊಂಡು ವ್ಯಥೆಪಟಿದ್ದಾರೆ. ಪಶ್ಚಾತ್ತಾಪದಿಂದ ನೊಂದು, ಬೆಂದು-

"ಸಕಲ ದುರ್ಗುಣಕೆ ಆಗಾರನಾನವನಿಯೊಳು"
ಎಂದು ತಮ್ಮನ್ನು ತಾವೇ ನಿಂದಿಸಿಕೊಂಡು
"ಭಕುತ ವತ್ಸಲ ಗುರುಜಗನ್ನಾಥ ವಿಠಲನೆ"

"ನನ್ನನ್ನು ಉದ್ಧರಿಸು"-ಎಂದು ಶ್ರೀ ಹರಿಯ
ಮುಂದೆ ಹಣೆ ಮಣಿದು ನಿಂತಿದ್ದಾರೆ.

**ತತ್ತ್ವ ನಿರೂಪಣೆ**

ಹರಿದಾಸ ಸಾಹಿತ್ಯವೆಂದರೆ ಶ್ರೀಮಧ್ವಾಚಾರ್ಯರ ತತ್ತ್ವಜ್ಞಾನ ಎಂದು ಸಮೀಕರಣ ಮಾಡಿದಂತೆ. ಹರಿದಾಸ ಪರಿಕಲ್ಪನೆಯ ಮೂಲಪುರುಷರೆಂದರೆ ಮಧ್ವಮುನಿಗಳು. ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿ ಹರಿದಾಸ ಸಾಹಿತ್ಯದ ಮೂಲಪುರುಷರಾದ ಶ್ರೀನರಹರಿತೀರ್ಥರಿಂದ ಪ್ರಾರಂಭಿಸಿ ಎಲ್ಲ ದಾಸರು ತಮ್ಮ ಕೀರ್ತನೆಗಳಲ್ಲಿ ಮಧ್ವಮತದ ತತ್ತ್ವಗಳನ್ನು ಪ್ರಚುರಪಡಿಸಿದ್ದಾರೆ.

ಅದೇ ಪರಂಪರೆಯಲ್ಲಿ ಬಂದ ಶ್ರೀಗುರುಜಗನ್ನಾಥದಾಸರೂ ಸಹ ತಮ್ಮ ಕೀರ್ತನೆಗಳಲ್ಲಿ ಮಧ್ವಮತದ ತತ್ತ್ವಗಳನ್ನು ಸಾಂದ್ರ ಸುಂದರವಾಗಿ ನಿರೂಪಿಸಿದ್ದಾರೆ.

'ಹರಿನೀನೆ ಸರ್ವಜ್ಞ' ಎಂಬ ಅವರ ಒಂದು ಉಗಾಭೋಗದಲ್ಲಿ ಆಗಲಿ ಹಾಗೂ 'ಹರಿನೀನೆ ಸರ್ವೋತ್ತಮ' ಎಂಬ ಸುಳಾದಿಯಲ್ಲಿ ಆಗಲಿ ಮಧ್ವಮತದ ಮೂಲ ತತ್ತ್ವ ವಾದ ಹರಿಸರ್ವೋತ್ತಮತ್ವವನ್ನು ಸೋದಾಹರಣವಾಗಿ ನಿರೂಪಿಸಿದ್ದಾರೆ. ಶ್ರೀಹರಿಯೇ ಸರ್ವಜ್ಞ, ಸರ್ವಾಧಾರಕ, ಸರ್ವಪ್ರೇರಕ, ಸರ್ವವ್ಯಾಪ್ತ ನಿಯಮ್ಯ-ನಿಯಾಮಕ, ಬಾಧ್ಯ-ಬಾಧಕ, ವ್ಯಾಪ್ಯಾ-ವ್ಯಾಪಕ ಎಂಬ ತತ್ತ್ವವನ್ನು

ಮನಂಬುಗುವಂತೆ ಹೇಳಿ, 'ಸರ್ವಜ್ಞ ರಾಯರು ಗೀತಾ ತಾತ್ಪರ್ಯದಿ, ವರದು ಈ ಪರಿಯಿಂದ ಜಗಕೆ ಪೇಳಿಹರೋ'– ಎಂದು ಹೇಳಿದ್ದಾರೆ.

"ಸಾಧನವಿದ್ದದಕೆ ಮಧು
ಸೂದನ ಗುಣಗಳ ಶೋಧನೆ ಮಾಡೋದೇ"
ಎಂಬ ಇನ್ನೊಂದು ದೀರ್ಘ ಕೃತಿಯಲ್ಲಿ
'ಹರಿಸರ್ವೋತ್ತಮ ಗುರುಜೀವೋತ್ತಮ
ಪುರಹರ ಸುರವರ ಪರಿವಾರಾ
ಮರೆಯದೆ ದಿನ ದಿನ ಸ್ಮರಿಸುತ ತರತಮ
ವರಿತು ವಿಧಿಯ ನೀ ಪರಿಪರಿ ಭಜಿಪೋದೆ'

ಹೀಗೆ ಶ್ರೀ ಮನ್ಮಧ್ವಮತದ ಮೂಲ ತತ್ವಗಳಾದ ತಾರತಮ್ಯ, ಪಂಚಭೇದ, ವಾಯುಜೀವೋತ್ತಮ, ತಿತಿಕ್ಷಾ, ನಾಮಸ್ಮರಣೆ, ಉಪಾಸನೆ ಮುಂತಾದವುಗಳನ್ನು ನಿರೂಪಿಸಿದ್ದಾರೆ. ಮಾನವ ಜೀವನ ಬಹು ದೊಡ್ಡದು, ಜೀವನವನ್ನು ಸಾರ್ಥಕಪಡಿಸಿಕೊಳ್ಳಲು ಇದೊಂದು ಅವಕಾಶ. ಈ ಸಾಧನ ಶರೀರವನ್ನು ದುರ್ಮಾರ್ಗಕ್ಕೆ ಎಳಸದೆ ಮೋಕ್ಷ ಸಾಧನೆಗೆ ಉಪಯೋಗಿಸಬೇಕೆಂದು ದಾಸರು ಪರಿಣಾಮಕಾರಿಯಾಗಿ ಬೋಧಿಸಿದ್ದಾರೆ.

'ನೀಚ ವೃತ್ತಿಯ ಬಿಟ್ಟು ಸೋಚಿತ ಕರ್ಮವನೇ
ಯೋಚನೆ ಮಾಡುತಾ
ನೀಚ ಜನರನು ಯಾಚಿಸದೆ ಸವ್ಯ
ಸಾಚಿಯ ಸಖನ ಭಜಿಸೋ ಪ್ರಾಣೀ_

ಎಂಬ ಐದು ನುಡಿಗಳ ಕೀರ್ತನೆಯಲ್ಲಿ ಉಪನಿಷತ್ತುಗಳ, ಭಗವದ್ಗೀತೆಯ, ತಾತ್ಪರ್ಯ ನಿರ್ಣಯದ, ದಶಪ್ರಕರಣಗಳ–ಹೀಗೆ ಮುಂತಾದ 'ಸಿದ್ಧಾಂತ ಗ್ರಂಥಗಳ' ತತ್ವಗಳು ಬಹು ಚನ್ನಾಗಿ ಮೂಡಿ ಬಂದಿವೆ.

"ಶಿರಿ ರಮಣನ ಪದಯುಗಳವ ಭಜಿಸಲು
ದೊರೆವುದೀಗ ಮೋಕ್ಷ

ನರಜನ ಗುಣಗಳ ವರಣನೆ ಮಾಡಲು
ನಿರಯದುಃಖ ಪ್ರತ್ಯಕ್ಷ "

ಎಂಬ ಮಾನವ ಜನ್ಮದ ರಹಸ್ಯವನ್ನು ಅರುಹಿದ್ದಾರೆ. ವಿರಾಟ್ ಪೂಜೆಯ ರಹಸ್ಯವನ್ನೂ, ಅದರ ಕ್ರಮವನ್ನೂ ಆ ಪೂಜೆಯ ಫಲವನ್ನೂ ಅರಿತ ದಾಸರು,

"ಜಗದಿ ಜೀವರು ಎಲ್ಲ ನಿಗಮವಂದಿತನ ಪ್ರತಿಮೆಗಳು ಇವು ಎಂದು ತಿಳಿಯೋ

ನಗುತ ಹರುಷವ ಕೊಡುವ ಸುಗುಣ ಪೂರಣ ಗುರು ಜಗನ್ನಾಥ ವಿಠಲರಾಯ ಮರೆಯಾ"-ಎಂಬ ತತ್ತ್ವವನ್ನು ನಿರೂಪಿಸಿ ಸಾಧಕರಿಗೆ ಮೋಕ್ಷೋಪಯೋಗಿ ಮಾರ್ಗವನ್ನು ಬೋಧಿಸಿದ್ದಾರೆ.

ದಾಸರ ಹಲವಾರು ಕೀರ್ತನೆಗಳಲ್ಲಿ ಭಾಗವತ ಧರ್ಮದ ತತ್ವಗಳು ಬಹು ಸುಂದರವಾಗಿ ಮೂಡಿಬಂದಿವೆ.

"ಅಹಿವರಕಲ್ಪನ ಮಹಿಮೆಯ ದಿನದಿನ
ವಿಹಿತಮನದಿ ಬಹುತುತಿಸುತಿರುವದೇ"

ಸಾಧನದ ಹೆದ್ದಾರಿ ಎಂದು ಹೇಳುವಲ್ಲಿ 'ಸ್ಮರಣ' ಎಂಬ ಭಾಗವತಧರ್ಮವು ಮೂಡಿಬಂದಿದ್ದರೆ,

"ಕ್ಷೇತ್ರ ತೀರ್ಥಗಳ ಯಾತ್ರೆಯ ಮಾಡುತ
ಪಾತ್ರಾಪಾತ್ರರ ತಿಳಿಯುತಲೀ
ಗೋತ್ರಧರನ ಈ ಗಾತ್ರದಿ ತಿಳಿದು
ನೇತ್ರದಿ ಶ್ರೀ ಹರಿಮೂರ್ತಿಯ ನೋಡೋದೆ"

ಮಾನವ ಜೀವನದ ಮಹಾಸೌಭಾಗ್ಯ ಎಂದು ಬಿತ್ತರಿಸುವಲ್ಲಿ 'ತೀರ್ಥಾಟನ' ಎಂಬ ಭಾಗವತ ಧರ್ಮವು ವ್ಯಕ್ತವಾಗಿದೆ. ಹೀಗೆ ಶ್ರೀಮದ್ಭಾಗವತದಲ್ಲಿ ಹೇಳಿದ

ಭಾಗವತಧರ್ಮದ ತ್ರಿಂಶಲ್ಲಕ್ಷಣಗಳೆಲ್ಲವೂ ದಾಸರ ಕೀರ್ತನ ಪ್ರಪಂಚದಲ್ಲಿ ಅಲ್ಲಲ್ಲಿ ಇಂಬುಗೊಂಡಿರುವುದನ್ನು ಅವರ ಕೀರ್ತನೆಗಳ ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ.

"ಅನುದಿನ ಬಿಡದಲೆ ತನುವೃಕ್ಷದಿ ಜೀ-
ವನು ಶ್ರೀಹರಿ ಎನಿಸುವ ಪಕ್ಷಿಗಳೂ
ತನುಕೃತಕರ್ಮವನುಣುವನುಜೀವನು
ಉಣದಲೆ ರಾಜಿಪನನಶನನೆಂಬೋದೆ"

ಎಂದು ಜೀವ-ಪರಮಾತ್ಮರ ಭೇದವನ್ನು ಅರಿತು ಬದುಕುವ ತತ್ತ್ವವನ್ನು ಬೋಧಿಸಿದ್ದಾರೆ. ಇಲ್ಲಿ-

'ದ್ವಾ-ಸುಪರ್ಣಾ ಸಹಜ ಸಖಾಯ'-ಎಂಬ ಔಪನಿಷಧಿಕ ಸಂದೇಶವು ಬಹು ಸರಳವಾಗಿ ಮೂಡಿ ಬಂದಿದೆ. ಹೀಗೆ ತಾತ್ವಿಕ ಶ್ರದ್ಧೆ, ಆಚಾರ ಮಾರ್ಗದರ್ಶಿ ಮತ್ತು ಜೀವನ ನೀತಿಸೂಚಿಗಳು ಬಹು ಪರಿಣಾಮಕಾರಿಯಾಗಿ, ಹೃದಯಂಗಮವಾಗಿ ವ್ಯಕ್ತವಾಗಿರುವದು ದಾಸರ ಕೀರ್ತನೆಗಳ ವೈಶಿಷ್ಟ್ಯ.

## ಉಪದೇಶಾಮೃತ

ಹರಿದಾಸಸಾಹಿತ್ಯವು ಹೊರಟಿದ್ದೇ ಸಾಮಾಜಿಕ ಪ್ರಜ್ಞೆಯನ್ನು ತನ್ನ ಮೂಲ ಭೂತ ತತ್ತ್ವವನ್ನಾಗಿಸಿಕೊಂಡು. ಸಮಾಜದಲ್ಲಿ ಎಲ್ಲರನ್ನೂ ಸನ್ಮಾರ್ಗಕ್ಕೆ ತರುವ ಪ್ರಯತ್ನವನ್ನು ಎಲ್ಲ ಹರಿದಾಸರು ಮನಃಪೂರ್ವಕ ಮಾಡಿದ್ದಾರೆ. ಇದೇನು ಸಾಮಾನ್ಯ ಕಾರ್ಯವಲ್ಲ. ಈ ಕಾರ್ಯಮಾಡಲು ಹೊರಟವರಿಗೆ ಅನೇಕ ವಿಘ್ನಗಳು ಬರುವದುಂಟು. ಅವೆಲ್ಲವುಗಳನ್ನು ತಾಳ್ಮೆಯಿಂದ ಸಹಿಸಿಕೊಂಡು ಮುನ್ನುಗ್ಗಬೇಕಾಗುತ್ತದೆ. ಪುರಂದರದಾಸರು, ಕನಕದಾಸರು ಈ ದೃಷ್ಟಿಯಲ್ಲಿ ಬಹು ಮೌಲಿಕ ಸಾಧಕರು. ಇದೇ ಮಾರ್ಗವನ್ನು ಅನುಸರಿಸಿದ ಶ್ರೀಗುರು ಜಗನ್ನಾಥದಾಸರೂ ಈ ದೃಷ್ಟಿಯಿಂದ ಬಹು ದೊಡ್ಡ ಸಾಧನೆಯನ್ನು ಮಾಡಿರುವದು ಕಂಡುಬರುತ್ತದೆ. ಸಮಾಜದಲ್ಲಿಯ ಕೆಳವರ್ಗದವರನ್ನೂ

ಶಿಷ್ಯರನ್ನಾಗಿ ಸ್ವೀಕರಿಸಿ, ಅವರಿಗೆ ತಮ್ಮ ದಿವ್ಯ ಉಪದೇಶ ವಾಣಿಯನ್ನು ನೀಡಿ, ಆ ಜನರನ್ನು ಸನ್ಮಾರ್ಗಕ್ಕೆ ತಂದಿರುವದು ಅವರ ಚರಿತ್ರೆಯಿಂದ ಸ್ಪಷ್ಟವಾಗಿದೆ. ಇಂದಿಗೂ ಕೌತಾಳ, ಗಜೇಂದ್ರಗಡ ಹಾಗೂ ಲಿಂಗಸುಗೂರಿನಲ್ಲಿ ಅವರ ಶಿಷ್ಯ ಪರಂಪರೆಯನ್ನು ಕಾಣಬಹುದು.

"ವಾಸುದೇವನ ಗುಣೋಪಾಸನೆ ತಾರಕ ಹೇಸಿಕೆ ಸಂಸಾರ

ಮಾರತವೋ" ಎಂದು ಪ್ರಾರಂಭವಾಗುವ ಅವರ ಉಪದೇಶವಾಣಿಯು ಶಿಷ್ಯರಿಗೆ ಜೀವನಕ್ಕೆ ಉಪಯುಕ್ತವಾದ ವಿವಿಧ ಉಪದೇಶಗಳನ್ನು ನೀಡುತ್ತದೆ.

"ಕ್ಲೇಶದ ಭವದೊಳಾಯಾಸ ಬಿಡದೆ" ಹರಿದಾಸನಾಗಿ "ಭವನೀಗೋ" ಎಂಬ ಶಾಸ್ತ್ರ ಸಮ್ಮತವಾದ ಉಪದೇಶಾಮೃತವನ್ನು ತನ್ನ ಶಿಷ್ಯರಿಗೆ ನೀಡಿದ್ದಾರೆ.

"ಝಳ ಝಳ ದೇಹವ ತೊಳೆದು ನಾಮವ ಹಚ್ಚಿ
ಥಳ ಥಳಿಸುವಿ ಹೊರಗೆ ಒಳಗೇನಿಲ್ಲೊ
ಖಳರಾದ ಯಮದೂತರೆಳೆವಾಗಗಲೀ ನಾಮ
ಅಳಿಸಿ ಹೋಹುದು ನಿನಗೆ ತಿಳಿಯದಲ್ಲೋ"

ಎಂದು ಹಾಸ್ಯಭರಿತವಾಗಿ ಹೇಳಿದರು. ಅದರ ಹಿಂದೆ ದಾಸರು ನಮಗೆ ನೀಡಿದ ಎಚ್ಚರ ಬಹು ಮೌಲಿಕವಾದುದು. ಡಾಂಭಿಕ ಧರ್ಮ ಕರ್ಮಾಚರಣೆಯ ಪರಿಯನ್ನು ಗೇಲಿಮಾಡುತ್ತ, ಅಂತಹ ಡಾಂಭಿಕರಿಗೆ ದೊರೆಯುವ ಫಲವನ್ನೂ ಬಹು ಮಾರ್ಮಿಕವಾಗಿ ಸೂಚಿಸಿದ್ದಾರೆ.

"ಮುಕ್ತನಾವನೋ ಜೀವನ್ಮುಕ್ತನಾವನೋ"

-ಎಂದು ಪ್ರಾರಂಭವಾಗುವ ದಾಸರ ಇನ್ನೊಂದು ಕೀರ್ತನೆಯು ಹದಿನೈದು ನುಡಿಗಳ ದೀರ್ಘ ಕೀರ್ತನವಾಗಿದ್ದು, ದಾಸರು ಸಾಧಕರಿಗೆ ನೀಡುವ ಉಪದೇಶವು ಬಹು ಚನ್ನಾಗಿ ಮೂಡಿ ಬಂದಿದೆ.

"ಮನಸುಮಾತು ಕಾಯದಿಂದ
ಮುನಿಯು ವನಿತೆ ಧ್ಯಾನ ಧನುವು
ತನಯ ಪ್ರಾಣ ಇವರ
ಪಾದವನಜಕರ್ಪಿಸಿರುವನಿನ್ನ"-

"ಮೋದತೀರ್ಥಶಾಸ್ತ್ರಸಾರ ಸ್ವಾದಮನದಿ ತಿಳಿದು ಅವರ ಹಾದಿ ಹಿಡಿದು ಬುಧರ ದಿವ್ಯ ಪಾದಯುಗಳ ಭಜಿಪಗಿನ್ನ ಮುಕ್ತನಾವನೋ" ಎಂದು ದಾರ್ಢ್ಯದಿಂದ ಪ್ರಶ್ನೆ ಮಾಡಿದ್ದಾರೆ. ದಾರೇಷಣ-ವಿತ್ತೇಷಣ ಹಾಗೂ ಪುತ್ರೇಷಣ- ಈ ಈಷಣ ತ್ರಯಗಳನ್ನು ಬಿಡುವದೇ ಮೋಕ್ಷಕ್ಕೆ ಹೆದ್ದಾರಿ; ಆನಂದತೀರ್ಥರ ಮತದಲ್ಲಿ ಸಾಧನೇ ಮಾಡಿದವರ ಪಾದಭಜನೆ ಈ ಹೆದ್ದಾರಿಗೆ ಬಹು ಸಾಧಕ ಎಂಬಶಾಸ್ತ್ರಾರ್ಥದ ಮತಿತಾರ್ಥವೆಲ್ಲವೂ ಅವರ ಉಪದೇಶ ವಾಣಿಯಲ್ಲಿ ಮೂಡಿ ಬಂದಿದೆ.

"ಪಾರ್ಥಸಖನ ಪ್ರಾರ್ಥನೆ ಮಾಡಿ" ಕೃತಾರ್ಥನಾಗಲು
ದಾಸರು ಸಂದೇಶ ನೀಡುತ್ತ-
"ಶಿರಿರಮಣನ ಪದಯುಗಳವ ಭಜಿಸಲು
ದೊರೆವುದೀಗ ಮೋಕ್ಷ
ನರಜನ ಗುಣಗಳ ವರಣನೆ ಮಾಡಲು

ನಿರಯ ದುಃಖ ಪ್ರತ್ಯಕ್ಷ" ಎಂದು ಮುಂತಾಗಿ ಉಪದೇಶ ನೀಡಿದ್ದಾರೆ. ಅವರ ಕೀರ್ತನೆಗಳಲ್ಲಿ ಶ್ರೀ ಮದ್ಭಾಗವತಾದಿ ಪುರಾಣಗಳ, ಶ್ರೀಮದ್ಭಗವದ್ಗೀತೆಯ, ಹಾಗೂ ಶ್ರೀಮಧ್ವಾಚಾರ್ಯರ ಸಚ್ಛಾಸ್ತ್ರ ಪ್ರಪಂಚದ ತಿರುಳು ಬಹು ಹೃದಯಂಗಮವಾಗಿ ಮೂಡಿ ಬಂದಿದೆ.

**ಗುರುಸ್ಮರಣೆ**

'ಗುರುಸ್ಮರಣೆ' ಗುರುಜಗನ್ನಾಥದಾಸರ ಕೀರ್ತನೆ ಪ್ರಪಂಚದ ಬಹು ವೈಶಿಷ್ಟ್ಯ ಪೂರ್ಣಭಾಗ ಎಂಬುದನ್ನು ಅವರ ಕೃತಿಗಳ ಅಧ್ಯಯನದಿಂದ

ಕಂಡುಕೊಳ್ಳಬಹುದು. ತಮ್ಮನ್ನು ದುರ್ಮಾರ್ಗದಿಂದ ಎತ್ತಿ ಸನ್ಮಾರ್ಗದಲ್ಲಿ ಕೈಹಿಡಿದು ನಡೆಸಿ, ಅವರ ಬದುಕನ್ನು ಸಾರ್ಥಕವಾಗುವಂತೆ ಮಾಡಿದವರೇ ಶ್ರೀಮಂತ್ರಾಲಯಪ್ರಭುಗಳು ಎಂಬುದನ್ನು ಅವರ ಜೀವನ ಚರಿತ್ರೆಯಿಂದ ನಾವು ಅರಿತಿದ್ದೇವೆ. ಬಹುಶಃ ಆ ಮಹಾ ಗುರುಗಳನ್ನು ನಿರಂತರ ನೆನೆಯುವ ದಾಸರು ತಮ್ಮ ಕೀರ್ತನೆಗಳ ಸಿಂಹಪಾಲನ್ನು ಅವರ ಗಾಥಾಸ್ತುತಿಗೆ ಮೀಸಲಿರಿಸಿರಬಹುದು. ಶ್ರೀಗುರುರಾಜರನ್ನು ಕುರಿತು ಸುಮಾರು ಅರವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿರುವ ದಾಸರು "ಪ್ರಹ್ಲಾದ ಚರಿತ್ರೆ"-ಎಂಬ ದೀರ್ಘ ಕೃತಿಯನ್ನು ರಚಿಸಿ ತಮ್ಮ ನಚ್ಚಿನ ಗುರುಗಳ ಪಾದಕ್ಕೆ ಸಮರ್ಪಿಸಿದ್ದಾರೆ.

"ಏಳಯ್ಯ ಗುರುವೆ ಬೆಳಗಾಯಿತು" ಎಂದು ಮಂತ್ರಾಲಯದ ಮಾಂತ್ರಿಕರನ್ನು ಉದಯರಾಗ ಹಾಡಿ ಎಬ್ಬಿಸುವದರೊಂದಿಗೆ ಪ್ರಾರಂಭವಾದ ಗುರುಸ್ತವನ, "ತೂಗಿರೆ ರಾಯರ- ತೂಗೀರೆ ಗುರುಗಳ ತೂಗಿರೆ ಯತಿಕುಲತಿಲಕರ"

ಎಂದು ಜೋಗುಳ ಹಾಡಿ ಮಲಗಿಸುವದರೊಂದಿಗೆ ಮುಕ್ತಾಯಗೊಳ್ಳುತ್ತದೆ. ಶ್ರೀರಾಘವೇಂದ್ರರನ್ನು ಎಷ್ಟು ಬಣ್ಣಿಸಿದರೂ, ಎಷ್ಟು ಸ್ತುತಿಸಿದರೂ ಅವರಿಗೆ ತೃಪ್ತಿ ಇಲ್ಲ. ಶ್ರೀ ಗುರುರಾಜರ ಬಹು ವೈವಿಧ್ಯಮಯವಾದ ಜೀವನವನ್ನು ಬಣ್ಣಿಸಿದ್ದಾರೆ. ಅವರ ಕರುಣೆಯನ್ನಂತೂ ಹೆಜ್ಜೆ-ಹೆಜ್ಜೆಗೆ ಸ್ಮರಿಸಿದ್ದಾರೆ. ಅವರು ರೋಗಹರರು, ಕೃಪಾಸಾಗರರು; ಬೇಡಿದ್ದನ್ನು ಕೊಡುವ ಕಾಮಧೇನು; ಬಯಸಿದ್ದನ್ನೆಲ್ಲ ನೀಡುವ ಕಲ್ಪವೃಕ್ಷ; ಸ್ವತಃ ಅಪರೋಕ್ಷಿಕೃತಶ್ರೀಶರು; ದೃಷ್ಟಿದಾತರು; ಸಂಪದ್ ವೃಷ್ಟಿ ಪ್ರದಾಯಕರು; ಭೂತಪ್ರೇತ ವಿನಾಶಕರು; ಆರ್ತಜನರ ಕಷ್ಟ ಕಳೆದು ಶಿಷ್ಟರನ್ನಾಗಿ ಮಾಡುವವರು; ಯತಿಕುಲಾಧಿಪರು; ಮಧ್ವಮತ ಶುಭವಾರ್ಧಿ ಚಂದ್ರಮರು; ಆಪದ್ಬಾಂಧವರು; ಅನಾಥ ರಕ್ಷಕರು; ಇವರೇ ಶ್ರೀಗುರುಜಗನ್ನಾಥವಿಠಲನ ಪಾದಾಬ್ಜ ಭೃಂಗರು ಎಂದು ಗುರುರಾಜನ್ನು ಕೊಂಡಾಡಿದ್ದಾರೆ.

"ಕಂಡೆ ಗುರುರಾಯನಾ-ಸುರಮನೋಪ್ರಿಯನಾ
ತೋಂಡವತ್ಸಲ ಧರದಂಡ ಕಮಂಡಲ

ಪಂಡಿತಾಗ್ರಣಿಗಳೊಳುದ್ದಂಡ ಮಹಿಮನ" ಎಂದು ಬೃಂದಾವನದಲ್ಲಿ ತಾವು ನೋಡಿದ ಗುರುರಾಜರನ್ನು ಬಣ್ಣಿಸುತ್ತ "ಲಲಿತ ಶ್ರೀತುಳಸೀ ಜಲಜಾಕ್ಷಿಯಾ- -ಮಾಲಾವಳಿಯ ವಕ್ಷದ ರೋಮಾದಳಿಯಾ"-ಎಂದು

ತಾವು ಕಂಡ ಗುರುರಾಯರನ್ನು ಕೊಂಡಾಡಿದ್ದಾರೆ. ಶ್ರೀ ರಾಯರ ಆ ದೃಶ್ಯ ದಾಸರನ್ನು 'ಹಾ-ಹಾ-ಹಾ' ಎನ್ನುವಂತೆ ಮಾಡಿದೆ. ಅಂತಹ ಅನುಭವವಾದಾಗ ಹೀಗೆ ಉದ್ಗಾರ ಬರುವದು ಸ್ವಾಭಾವಿಕ.

ಬೃಂದಾವನದಲ್ಲಿ ಗುರುಗಳನ್ನು ಕಂಡಾಗ

ದಾಸರು "ವೃಂದಾವನದಲಿ ನಿಂತ ಸುಯತಿ ವರನ್ಯಾರೇ ಪೇಳಮ್ಮಯ್ಯ" ಎಂದು ಕೇಳಿಕೊಂಡು-

"ವಂದಿಪ ಜನರಿಗೆ ನಂದ ಕೊಡುವೊ ರಾಘ-
ವೇಂದ್ರ ಮುನಿವರನೀತ ನೋಡಮ್ಮ" ಎಂದು

ಕುಣಿದು ಸಂತಸ ಪಟ್ಟಿದ್ದಾರೆ. ಶ್ರೀಗುರುರಾಜರು ಹಚ್ಚಿಕೊಂಡ ನಾಮ-ಮುದ್ರೆಗಳು ದಾಸರಿಗೆ ಸುಸ್ಪಷ್ಟವಾಗಿ ಕಂಡಿವೆ. ಇಂತಹ ಅನುಭವಜನ್ಯಜ್ಞಾನ ಪಡೆದವರೇ ಧನ್ಯರು.

"ಹೃದಯ ಸದನದಲ್ಲಿಪದುಮನಾಭನ ಭಜಿಸಿ
ಮುದಮನದಿಂದ ನಿತ್ಯ-ಸದಮಲ-ರೂಪತಾಳಿ"
"ಮುದ್ದು ಬೃಂದಾವನ ಮಧ್ಯದೊಳಗಿಂದ" ಎದ್ದು ಬಂದ
ಗುರುರಾಜರನ್ನು ಕಂಡಾಗ-
"ಧಣೀ ಧಣೀ-ಧಣೀ-ಧಣೀ
ಗುರುರಾಯ ನೀನೆ ಧಣೀ ಧಣೀ",- ಎಂದು ಹಾಡುತ್ತ ಕುಣಿದಾಡಿದ್ದಾರೆ.

ಶ್ರೀಗುರುರಾಜರನ್ನು "ನಂಬಿ ಕೆಟ್ಟವರಿಲ್ಲ ರಾಯರ ಪಾದಾನಂಬದೆ ಕೆಡುವರುಂಟೋ"-ಎಂದು ಸಜ್ಜನರನ್ನು ಎಚ್ಚರಿಸಿದ್ದಾರೆ.

'ರಾಘವೇಂದ್ರ ಗುರುರಾಯ ನೀ
ವೇಗದಿ ಪಿಡಿ ಎನ್ನ ಕೈಯ್ಯಾ

ಎಂದು ಗುರುಗಳಿಗೆ ದುಂಬಾಲು ಬಿದ್ದಿದ್ದಾರೆ. ಶ್ರೀಗುರುರಾಜರನ್ನು ಕುರಿತು ಅವರು ಬರೆದ ಕೀರ್ತನೆಗಳು ಭಕ್ತ್ಯುದ್ರೇಕದಿಂದ ತುಂಬಿದ್ದು ರಾಗ ಬದ್ಧವಾಗಿದ್ದು ಗಮನಾರ್ಹ ಕೃತಿಗಳಾಗಿ ಕಂಗೊಳಿಸುತ್ತಿವೆ.

## ಶೈಲಿ

ಶ್ರೀಗುರುಜಗನ್ನಾಥದಾಸರು ಸಂಸ್ಕೃತ ಹಾಗೂ ಕನ್ನಡ ಉಭಯ ಭಾಷಾ ವಿಶಾರದರು. ಎರಡೂ ಭಾಷೆಗಳಲ್ಲಿ ಅಮೂಲ್ಯ ಕೃತಿಗಳನ್ನು ರಚಿಸಿದವರು. ಭಾಷೆಯನ್ನು ತಮ್ಮ ಭಾವನೆಗೆ ತಕ್ಕಂತೆ ಹಿತ-ಮಿತವಾಗಿ ಹದವರಿತು ಬಳಸಿಕೊಳ್ಳುವ ಕಲೆ ಅವರಿಗೆ ಸಿದ್ಧಿಸಿದೆ.

ಲಾವಣಿಪದ ಹಾಗೂ ಕೋಲುಪದದ ಶೈಲಿಯಲ್ಲಿಯೂ ದಾಸರು ತಮ್ಮ ಕೀರ್ತನೆಗಳನ್ನು ರಚಿಸಿದ್ದಾರೆ. ಅವರು ರಚಿಸಿದ ಪ್ರಹ್ಲಾದ ಚರಿತ್ರೆ ೧೦೩ ನುಡಿಗಳಷ್ಟು ಇದ್ದು, ನಾಲ್ಕು ಸಾಲುಗಳ ಸುಂದರ ಕೋಲು ಪದವಾಗಿದೆ. ಓದುಗರಿಗೆ ಬಹು ಸರಳವಾಗುವಂತೆ, ಸುಂದರ ಶಬ್ದ ಚಿತ್ರವನ್ನು ಕಟೆದು ದಾಸರು ಓದುಗರ ಮುಂದೆ ನಿಲ್ಲಿಸುತ್ತಾರೆ. ಇದಕ್ಕೆ ಒಂದು ನಿದರ್ಶನ-

"ಪ್ರಹ್ಲಾದ ನಾಮದಿ ಜನಿಸೆಲೊ ನೀ ಮುಂದೆ
ಉಲ್ಲಾಸದಿಂದ ಬರುವೆನು ಕೋಲೆ।
ಉಲ್ಲಾಸದಿಂದ ಬರುವೆನು ನಿನ್ನ ವೈರಿ
ಬಲ್ಲಿದ ಪಿತನ ಕೊಲ್ಲುವೆ ಕೋಲೆ"-

ಉಗಾಭೋಗಗಳನ್ನೂ ಬರೆದ ದಾಸರು ಭಾಮಿನೀ ಷಟ್ಪದಿಯಲ್ಲಿ ಕಾವ್ಯ ರಚಿಸುವುದರಲ್ಲಿ ತುಂಬಾ ಸಿದ್ಧ ಹಸ್ತರು. ಸಂಸ್ಕೃತದಲ್ಲಿ ತುಂಬಾ ಪ್ರಸಿದ್ಧವಾದ "ಶ್ರೀ ಲಕ್ಷ್ಮೀಹೃದಯ"ವನ್ನು ೧೦೮ ಭಾಮಿನಿ ಷಟ್ಪದಿಗಳಲ್ಲಿ ಮೂಲಕ್ಕೆ ಎಲ್ಲಿಯೂ ವ್ಯತ್ಯಯ ಬರದಂತೆ ರಚಿಸಿದ್ದಾರೆ. ಅದೇ ರೀತಿ ಲಕ್ಷ್ಮೀಸ್ತವರಾಜವನ್ನು

ಇದೇ ಬಂಧದಲ್ಲಿ ರಚಿಸಿದ್ದು ಬಹು ಹೃದಯಂಗಮವಾಗಿದೆ. ಒಂದು ಚಿಕ್ಕ ಉದಾಹರಣೆ.

"ವಾದಮಾಡೊದಕರ್ಥಸಿದ್ಧಿಯು
ಮೋದತೀರ್ಥರ ಮತದಿ ದೀಕ್ಷವು
ಸಾದರದಿ ನೀನಿತ್ತು ಪಾಲಿಸು ವೇದದಭಿಮಾನೀ"

ಹಲವು ಸಲ ದಾಸರ ವರ್ಣನಾ ವೈಖರಿಯಂತೂ ಓದುಗರನ್ನು ಅಚ್ಚರಿಪಡಿಸುತ್ತದೆ. ಮಹಾಲಕ್ಷ್ಮಿಯನ್ನು ಒಂದು ಕೀರ್ತನೆಯಲ್ಲಿ ವರ್ಣಿಸುತ್ತ

"ವೇದಾಭಿಮಾನಿ ಅಂಬ್ರಾಣಿ ಸುಗಣ ಸನ್ಮಣಿ
ವೇದವತಿಯೆ ರುಕ್ಮಿಣಿ
ವೇದವಂದ್ಯಳೆ ಗುಣಪೂರ್ಣೇ ನಿತ್ಯಕಲ್ಯಾಣಿ"

ಎಂದು ಬಣ್ಣಿಸಿ, ಹಲವೇ ಶಬ್ದಗಳಲ್ಲಿ ಆ ಮಹಾತಾಯಿಯ ವೇದೋಕ್ತ ಮಹಿಮೆಯನ್ನು ಸೆರೆಹಿಡಿದಿದ್ದಾರೆ. ಜಾನಪದದ ಗತ್ತಿನಲ್ಲು ದಾಸರು ಬಹು ಮನೋಹರವಾಗಿ ಕೀರ್ತನೆಗಳನ್ನು ರಚಿಸಬಲ್ಲರು.

"ಧಡಾನೆ ನೀನಿಳಿ ಇಲ್ಲಿ ನೀ
ಗಡಾನೆ ಮನಿ ನಡೀ ನಡೀ
ತಡಾವಾದರೀ ಛಡೀಲಿ ನಿನ್ನನು
ಬಿಡಿಯವಿಲ್ಲದೆ ಹೊಡೆದು ಬಿಡುವೆನೊ"

"ಕೊಡು ಬ್ಯಾಗಭಿಷ್ಟವ ತ್ವರದಿ"–ಮುಂತಾದ ಕೀರ್ತನೆಗಳಲ್ಲಿ ಜಾನಪದದ ಸೊಗಡನ್ನು ನಾವು ಕಾಣಬಹುದು.

ಹಲವೇ ಶಬ್ದಗಳಲ್ಲಿ ಬಹ್ವರ್ಥಗರ್ಭಿತವಾದ ತತ್ತ್ವವನ್ನು ಹೇಳುವ ದಾಸರ ಶೈಲಿಗೆ ಒಂದು ಉದಾಹರಣೆ ಇಲ್ಲಿದೆ.

"ವಾರಿಚರ, ಗಿರಿಧಾರಿ, ಸೂಕರ

ಕ್ರೂರರೂಪವ ತಾಳ್ದನಾ।
ಪೋರ, ಜನನಿಶಿರಹಾರಿ, ವನಚರ
ನಾರಿಜನರಿಗೆ ಒಲಿದನಾ
ನಾರಿವ್ರತ ಪರಿಹಾರ ಮಾಡಿ
ಹಯವನೇರಿ ಮೆರೆದನಾ"

ಈ ಸಾಲುಗಳಲ್ಲಿ ಶ್ರೀ ಹರಿಯ ದಶಾವತಾರಗಳ ನಿರೂಪಣೆ ಬಲು ನಾಜೂಕಾಗಿ ಮೂಡಿದೆ.

ಪ್ರಾಸ ಬದ್ಧವಾದ ಶಬ್ದಗಳು ಸರಳವಾಗಿ, ಸಹಜವಾಗಿ-ಅಷ್ಟೇ ಪರಿಣಾಮಕಾರಿಯಾಗಿ ಮೂಡಿ ಬಂದಿರುವದು ಅವರ ಪ್ರತಿಭೆಗೆ ಹಿಡಿದ ಕನ್ನಡಿ ಎನ್ನಬಹುದು.

"ಊಟ ಕೂಟ ನೋಟಮಾಟ ಪಾಠ ಆಟ ಕಾಟ ಇವರ ಆಟ ಎಂದು ವಿಷಯ ಉದಧಿ ದಾಟುವಾವಗಿನ್ನ ಮತ್ತೆ ಮುಕ್ತನಾವನು?" ಎಂದು ಕೇಳುವಲ್ಲಿ ಶಬ್ದಗಳ ತೂಕ ಬಹು ಗಮನೀಯವಾಗಿದೆ.

ಅವರ ಕೀರ್ತನೆಗಳಲ್ಲಿ ಅಲ್ಲಲ್ಲಿ ಸಂಸ್ಕೃತ ಕನ್ನಡ, ಶಬ್ದಗಳ ಹಿತ, ಮಿತವಾದ ಬಳಕೆಯನ್ನು ನಾವು ಕಾಣಬಹುದಾಗಿದೆ. ಓದುಗರಿಗೆ ಬಹು ಹಿತವಾದ ಅನುಭವವನ್ನು ಇದು ಕೊಡುವದು. ಒಂದು ನಿದರ್ಶನ.

"ಸಿಟ್ಟು ಶೋಕ ಹರ್ಷ ಮೋಹ ಸುಟ್ಟು ಗುರುಜಗನ್ನಾಥ
ವಿಠಲನ್ನ ಭಜಿಸಿ ಜಗದಿ ಶಿಷ್ಟನಾಗಿರುವಗಿನ್ನ"

ಭಾಮಿನಿ ಷಟ್ಪದಿ ಹಾಗೂ ಪದಗಳಿಂದ ಕೂಡಿದ "ಶ್ರೀ ಕೃಷ್ಣಲೀಲಾ" ಎಂಬ ಖಂಡಕಾವ್ಯವು ಶ್ರೀಕೃಷ್ಣನ ಬಾಲ್ಯದ ಲೀಲಾ ವಿನೋದಗಳನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿದೆ. ದಾಸರ ಈ ಕೃತಿಯಲ್ಲಿ ಆರ್ಯ, ಗೋಪಾಲಬಾಲಕರು

ಹಾಗೂ ಶ್ರೀ ಕೃಷ್ಣರ ನಡುವಿನ ಸಂಭಾಷಣೆಗೆ ಒಳ್ಳೇ ಮೆರಗು ಬಂದಿದ್ದು, ಓದುಗರನ್ನು ದ್ವಾಪರಯುಗಕ್ಕೆ ಕರೆದೊಯ್ಯಬಹುದಾದ ಅನುಭವ ಇಲ್ಲಿದೆ.

ಶ್ರೀ ಕೃಷ್ಣನು ಆಟವಾಡುವಾಗ ಚೆಂಡು ಉರುಳುವ ಶಬ್ದ-ಗೋಪಾಲಬಾಲರು ಓಡುವ ಉರುಳುವ ಶಬ್ದ-ಗೋಪಾಲ ಬಾಲರು ಓಡುವ ಭರಾಟೆ ಎಷ್ಟು ಮನಮುಟ್ಟುವಂತೆ ಈ ಕೆಳಗಿನ ಸಾಲುಗಳು ನಿರೂಪಿಸುತ್ತವೆ, ನೋಡಿ!

"ಘಡ ಘಡನೆ ತಾವ್ ಗೋಪಾಲಬಾಲರು
ಧುಡು-ಧುಡುನೆ ತಾ ಉರುಳಿ ಪೋಗುವ
ಭರ ಭರನೆ ಕರದಿಂದ ಚೆಂಡನು ತಂದರಾಗಲ್ಲಿ
ಕೊಡುಕೊಡುತ ಶಿರಿಕೃಷ್ಣರಾಯಗೆ
ಭಿಡೆಯ ಇಲ್ಲದೆ ಮಾತು ಮಾತಿಗೆ
ಧಡ-ಧಡನೆ ಇಳಿಯೆಂದು ಗೋಚರ ಹುಡಗ ಕಾಡಿದರು."

ಹಲವು ಸಲ ಭಗವಂತನನ್ನು ಚುಚ್ಚಿ-ಚುಚ್ಚಿ ಮಾತನಾಡಿ- ತಮ್ಮ ಅಳಲನ್ನು ಅವನಲ್ಲಿ ತೋಡಿಕೊಂಡಿದ್ದಾರೆ.

"ನಿನಗೇನೊ ಭಕುತರ ಚಿಂತೀ।
ಘನಮಹಿಮ ಮಹದಾದಿ ಸುರವಂದ್ಯ ತಿಮ್ಮ
ಶಿರಿದೇವಿ ನಿನರಾಣಿ ಪರಮೇಷ್ಠಿ ನಿನಪುತ್ರ
ಕಿರಿಯ ಮಗನು ಜಗತ್ಪ್ರಾಣ ದೇವ।
ಹಿರಿಯ ಸೊಸೆಯು ವಾಣಿ ಕಿರಿಯು ಭಾರತಿ ದೇವಿ
ಪುರಹರನು ಮೊಮ್ಮಗನು ಸುರರು ಪರಿವಾರ"॥
ಎಂದು ದಾಸರು ಹೇಳುವಲ್ಲಿ
" ಬ್ರಹ್ಮಾಂಡಂ ವರ ಮಂದಿರಮ್
ಸುರಗಣಾ ಯಸ್ಯ ಪ್ರಭೋಸೇವಕಾ"

ಎಂಬ ಸಂಸ್ಕೃತದ ಕಲ್ಪನೆಯ ಪ್ರತಿಮೆ ಮನೋಜ್ಞವಾಗಿ ಮೂಡಿ ಬಂದಿದೆ. ಭಗವಂತನಿಗೆ ಚುಚ್ಚಿಹೇಳಿದ ದಾಸರ ನಚ್ಚಿನ-ಹೆಚ್ಚಿನ ಭಕ್ತಿ ಇಲ್ಲಿ ವ್ಯಕ್ತವಾಗಿದೆ.

"ನೀನೇನೋ ನಿನ್ನ ಲಕ್ಷ್ಮೀನೋ"-ನಮ್ಮ
ಚಿಂತೆಯೇ ನಿನಗಿಲ್ಲ ಎಂದು ಹಂಗಿಸುತ್ತಾರೆ ಕೂಡ।

ಭಗವಂತನ ಬಗೆಯನ್ನು ಚಿತ್ರಿಸಲು ಹೊರಟದಾಸರು ನಿಂದಾಸ್ತುತಿಯ ಮೂಲಕ ಶ್ರೀ ಹರಿಯನ್ನು ಹಲವು ಹನ್ನೊಂದು ಬಗೆಯಲ್ಲಿ ನಿಂದಿಸಿದ್ದರೂ ಅಲ್ಲಿ ಅವರ ಸ್ನೇಹ ಭಕ್ತಿಯು ತಾನೇ ತಾನಾಗಿ ವಿಜೃಂಭಿಸಿದೆ. ಅದರೊಂದಿಗೆ ಆ ಅಗಣಿತ ಮಹಿಮನ ಅನುಪಮ ಮಹಿಮೆಗಳೂ ಚಿತ್ರಿತವಾಗಿದೆ.

"ಯಾಕೆ ನಿನ್ನ ಮನಕೆ ಬಾರೆನೋ ಶ್ರೀ ವೆಂಕಟೇಶ"
ಎನ್ನುತ್ತ
"ನಿನ್ನನೊದ್ದದ್ವಿಜನ ನೀನು ಮನ್ನಿಸಿ ಜಗದೊಳಾವನ
ಘನ್ನನೆನಿಸಿ ಪೊರೆದಿ"-ಹಾಗೂ
"ಹೊಟ್ಟೆಗಶನವಿಲ್ಲದಿರುವೋ ನಷ್ಟದಾರಿದ್ರ್ಯ ದ್ವಿಜನ
ಮುಷ್ಟಿಯವಲಕ್ಕಿತಿಂದು ಅಷ್ಟೈಶ್ವರ್ಯ ಕೊಟ್ಟೆಯಲ್ಲೊ"
ಎಂದು ಹಂಗಿಸಿ-ಹಣೆ ಮಣಿದಿದ್ದಾರೆ.

ಉಪಮೆ-ರೂಪಕ-ಚಿತ್ರಪ್ರತಿಮೆಗಳನ್ನಂತೂ ಅವರ ಕೀರ್ತನ ಪ್ರಪಂಚದ ತುಂಬಾ ಕಾಣುಬಹುದಾಗಿದೆ. ಶ್ರೀಗುರುಜಗನ್ನಾಥದಾಸರ ಕೈಯಲ್ಲಿ ವಾಣಿ ವೀಣೆಯಾಗುತ್ತಾಳೆ. ನುಡಿಸಿದಂತೆ ನುಡಿಯುವ ಜಾಣೆಯಾಗುತ್ತಾಳೆ.

ನಾದ-ಮಾಧುರ್ಯ-ಭಾವ-ಗಾಂಭೀರ್ಯ ಶಬ್ದ-ಸೌಂದರ್ಯಹಾಗೂ ಸಿದ್ಧಾಂತ-ಪ್ರಾಚುರ್ಯಗಳ ಸುಂದರ ಸಂಗಮ ಶ್ರೀಗುರುಜಗನ್ನಾಥ ದಾಸರ ಕೀರ್ತನ ಪ್ರಪಂಚ ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

# ವರದೇಶ ವಿಠಲರು

(೧೮೮೫-೧೯೧೮)

"ದಾಸೋಽಹಂ ಕೋಸಲೇಂದ್ರಸ್ಯ", ಎಂಬುದಾಗಿ ಉದ್ಘೋಷಿಸಿದ ಶ್ರೀ ಹನುಮಂತದೇವರ ಅವತಾರ ಭೂತರಾದ ಶ್ರೀಮದಾಚಾರ್ಯರು ಸರ್ವಮೂಲ ಗ್ರಂಥಗಳನ್ನು ಬರೆದು, ತನ್ಮೂಲಕ ಶ್ರೀಹರಿಯ ಅಖಂಡ ಸ್ವಾತಂತ್ರ್ಯವನ್ನು ಹಾಗೂ ಜೀವರುಗಳ ಅಸ್ವಾತಂತ್ರ್ಯವನ್ನು ಪ್ರಮಾಣಪೂರ್ವಕ ಸ್ಥಾಪಿಸಿದರು. ಈ ಪ್ರಪಂಚದ ಶಾಶ್ವತ ತತ್ತ್ವವಾದ ಜೀವೇಶ ಭೇದವನ್ನು ಪ್ರಕಟಪಡಿಸುವದರ ಮೂಲಕ ಜೀವರುಗಳು ಎಂದೆಂದಿಗೂ ಶ್ರೀಹರಿಯ ದಾಸರೇ-ಈ ಋಜುಮಾರ್ಗದಲ್ಲಿ ಬದುಕಿ, ಸಾಧನ ಮಾಡಿದಾಗ ಪರಮಾತ್ಮನ ಪ್ರಸಾದ ಲಭ್ಯವಾಗಿ ಜೀವರುಗಳು ಮೋಕ್ಷವನ್ನು ಪಡೆಯುವರು. ಜೀವರುಗಳು ಎಂದಿಗೂ ಪರಮಾತ್ಮನೇ ಆಗಲು ಸಾಧ್ಯವಿಲ್ಲ.

"ಸ್ವತಂತ್ರಂ ಅಸ್ವತಂತ್ರಂ ಚ ದ್ವಿವಿಧಂ ತತ್ತ್ವಮಿಷ್ಯತೆ।
ಸ್ವತಂತ್ರೋ ಭಗವಾನ್ ವಿಷ್ಣು: ಭಾವಾಭಾವೋದ್ವಿದೇತರತ್॥"
ಎಂದು ಹೇಳಿ "ನಹರೇ: ಪರಮೋ ನ ಹರೇ ಸದೃಶ:" ಎಂದು ಸಾರಿದರು.

ಈ ಸಿದ್ಧಾಂತದ ಮೂಲಕವೇ ದಾಸಸಾಹಿತ್ಯಕ್ಕೆ ನಾಂದಿಹಾಡಿದ ಶ್ರೀಮಧ್ವಾಚಾರ್ಯರು ದಾಸಸಾಹಿತ್ಯದ ಪ್ರಥಮ ಹರಿಕಾರರು.

ಶ್ರೀಮದಾಚಾರ್ಯಪ್ರಣೀತವಾದ ಈ ಹೆದ್ದಾರಿಯಲ್ಲಿ ಶ್ರೀ ನರಹರಿತೀರ್ಥರು, ಶ್ರೀ ಶ್ರೀಪಾದರಾಜರು. (ಇವರೇ ಮೊದಲಿಗರೆಂಬ ಅಭಿಪ್ರಾಯವೂ ಇದೆ.) ಶ್ರೀವ್ಯಾಸರಾಜರು-ಶ್ರೀವಾದಿರಾಜರು-ಶ್ರೀರಾಘವೇಂದ್ರ ಸ್ವಾಮಿಗಳು ಶ್ರೀ ಪುರಂದರದಾಸರು, ಶ್ರೀ ಕನಕದಾಸರು, ಶ್ರೀ ವಿಜಯದಾಸರು ಶ್ರೀಗೋಪಾಲದಾಸರು-ಶ್ರೀಜಗನ್ನಾಥದಾಸರು-ಅವತರಿಸಿ ಅಸಂಖ್ಯ ಪದ, ಪದ್ಯ-ಕೀರ್ತನೆ-ಉಗಾಭೋಗ-ಸುಳಾದಿ ಹಾಗೂ ದೀರ್ಘ ಕೃತಿಗಳ ಮೂಲಕ ಹರಿದಾಸ

ಸಾಹಿತ್ಯವನ್ನು ಶ್ರೀಮಂತಗೊಳಿಸಿ, ಆ ಸಾಹಿತ್ಯವು ಆಚಂದ್ರಾರ್ಕವಾಗಿ ಬೆಳಗುವಂತೆ ಮಾಡಿ–ತನ್ಮೂಲಕ ಕನ್ನಡ–ನಾಡು–ನುಡಿ ಸಂಸ್ಕೃತಿಗೆ ಮೌಲಿಕ ಸೇವೆಯನ್ನು ಸಲ್ಲಿಸಿದ್ದಾರೆ.

ಅಂದಿನಿಂದ ಅವ್ಯಾಹತವಾಗಿ ತನ್ನ ಅಸ್ತಿತ್ವವನ್ನು ಇಪ್ಪತ್ತನೇ ಶತಮಾನದವರೆಗೆ ಉಳಿಸಿಕೊಂಡು ಬಂದಿರುವದೇ ಈ ಸಾಹಿತ್ಯದ ವೈಶಿಷ್ಟ್ಯವೆನ್ನಬಹುದು.

ಶ್ರೀ ಪುರಂದರದಾಸರ ಶಿಷ್ಯರೇ ಶ್ರೀವಿಜಯದಾಸರು. ಇವರ ಶಿಷ್ಯರೇ ಶ್ರೀಗೋಪಾಲದಾಸರು. ಇವರಿಂದ ಆಯುಷ್ಯವನ್ನು, ಆರೋಗ್ಯವನ್ನು ಪಡೆದ ಹರಿದಾಸ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದು ಹರಿಕಥಾಮೃತಸಾರವೆಂಬ ಬೃಹತ್ ಗ್ರಂಥವನ್ನು ರಚಿಸಿದವರೇ ಶ್ರೀ ಜಗನ್ನಾಥದಾಸರು. ಇವರ ವಿಶೇಷ ಅನುಗ್ರಹಕ್ಕೆ ಪಾತ್ರರಾದವರೇ ಲಿಂಗಸುಗೂರಿನ ಶ್ರೀಪ್ರಾಣೇಶ ದಾಸರು. ಇಂತಹ ಶ್ರೀ ಪ್ರಾಣೇಶದಾಸರಿಗೆ ಸಂಬಂಧಿಕರಾದವರೇ ಶ್ರೀ ವರದೇಶ ವಿಠಲರು.

ಶ್ರೀವರದೇಶ ದಾಸರ ಚರಿತ್ರೆಗೆ ಸಂಬಂಧಿಸಿದಂತೆ ಅವರೇ ಬರೆದಿಟ್ಟ ಆತ್ಮಚರಿತ್ರೆ ಅವರ ಸ್ನೇಹಿತರೂ, ಬಂಧುಗಳು ಉಲ್ಲೇಖಿಸಿದ ಹೇಳಿಕೆಗಳನ್ನು ಆಧಾರವಾಗಿಟ್ಟು–ಕೊಂಡು, ಅವರನ್ನು ಕುರಿತಾದ ಸಂಗತಿಗಳನ್ನು ಈ ಕೆಳಗಿನಂತೆ ಸಂಗ್ರಹಿಸ–ಬಹುದಾಗಿದೆ.

ಶ್ರೀ.ಶಾ.ಶ.೧೮೦೭ರಿಂದ ೧೮೪೦ ರವರೆಗೆ ಅವರು ಜೀವಿಸಿದ್ದರಬಹುದೆಂದು ನಂಬಲಾಗಿದೆ. ಅಂದರೆ ಕ್ರಿ.ಶ. ೧೮೮೫ ರಿಂದ ೧೯೧೮ ಅವರ ಜೀವಿತಾವಧಿ.

ಲಿಂಗಸುಗೂರು ಬಹು ಪವಿತ್ರ ಕ್ಷೇತ್ರ. ಮಂತ್ರಾಲಯ ಪೀಠದಲ್ಲಿ ಬಂದ ಶ್ರೀವರದೇಂದ್ರಸ್ವಾಮಿಗಳು ಈ ಕ್ಷೇತ್ರಕ್ಕೆ ಬರುವದಾಗಿ ಸ್ವಪ್ನದಲ್ಲಿ ತಿಳಿಸಿ ಇಲ್ಲಿಗೆ ಬಂದಿದ್ದಾರೆ. ತನ್ಮೂಲಕ ಈ ಕ್ಷೇತ್ರವನ್ನು ಪಾವನಗೊಳಿಸಿದ್ದಾರೆ. ಬಹುಶಃ ಮುಂದೆ ಈ ಕ್ಷೇತ್ರದಲ್ಲಿ ದಾಸ ಸಾಹಿತ್ಯವು ಅಭಿವೃದ್ಧಿ ಹೊಂದುವದನ್ನು ಮನಗಂಡು ಶ್ರೀವರದೇಂದ್ರರು ಇಲ್ಲಿಗೆ ಬಂದು ನೆಲೆನಿಂತಿರಬಹುದು. ಶ್ರೀಪ್ರಾಣೇಶದಾಸರ

ಮೊಮ್ಮಕ್ಕಳಾದ ಶ್ರೀವಿಜಯರಾಯರೆಂಬುವರು ಇಲ್ಲಿ ವಾಸವಾಗಿದ್ದರು. ಶ್ರೀವರದೇಶವಿಠಲರು ಅವರ ದೌಹಿತ್ರರು. ಲಿಂಗಸುಗೂರಿನ ದಕ್ಷಿಣಕ್ಕೆ ಸಂತೆಕೆಲೂರು ಎಂಬ ಗ್ರಾಮವಿದೆ. ಅಲ್ಲಿ ಶ್ರೀ ವ್ಯಾಸರಾಯರು ಪ್ರತಿಷ್ಠಾಪಿಸಿದ ಪ್ರಾಣದೇವರಿದ್ದು, ಆ ಭಾಗದಲ್ಲಿ ಬಹು ಖ್ಯಾತಿಯನ್ನು ಪಡೆದಿದೆ.

ಆ ಕಾಲದಲ್ಲಿ ಶ್ರೀಹನುಮಂತರಾಯರೆಂಬ ಸದಾಚಾರ ಸಂಪನ್ನರಾದ ಬ್ರಾಹ್ಮಣ ಇಲ್ಲಿ ವಾಸಿಸುತ್ತಿದ್ದು, ಅವರಿಗೆ ತುಂಗಮ್ಮ ಎಂಬ ಹೆಂಡತಿ ಇದ್ದಳು. ಮಹಾಸಾಧ್ವಿಯೂ, ಪತಿಪರಾಯಣೆಯೂ ಆಗಿದ್ದ ಅವಳು ದೈವಭಕ್ತಳೂ ಆಗಿದ್ದು ಬಹುವಿಶೇಷ. ಹನುಮಂತರಾಯರು ಕರಣಿಕ ವೃತ್ತಿಯನ್ನು ಮಾಡಿಕೊಂಡಿದ್ದರು. ತುಂಗಮ್ಮ ವಿಜಯರಾಯರ ಪುತ್ರಿ. ಈ ದಂಪತಿಗಳಲ್ಲಿ ಜನಿಸಿದ ಸುಪುತ್ರರೇ ಶ್ರೀವರದೇಶ ವಿಠಲರು.

ಶಾ.ಶ ೧೮೦೨ ಪಾರ್ಥಿವ ನಾಮ ಸಂವತ್ಸರದ ಅಧಿಕ ಜೇಷ್ಠ ಕೃಷ್ಣ ಪಕ್ಷ ತ್ರಯೋದಶಿ ಗುರುವಾರ ಲಿಂಗಸುಗೂರಿನಲ್ಲಿ ಇವರು ಜನಿಸಿದರು. ಅವರ ತಂದೆ-ತಾಯಿಗಳು ಅವರಿಗೆ 'ಸ್ವಾಮಿ' ಎಂದು ನಾಮಕರಣ ಮಾಡಿದ್ದು ವಿಶೇಷ. ಪ್ರಪಂಚಕ್ಕೆ ಒಡೆಯನಾದ ಆ ಮಹಾ ಸ್ವಾಮಿಯಾದ ಶ್ರೀಹರಿಯ ಧ್ಯಾನದಲ್ಲಿ ಸದಾ ಆಸಕ್ತರಾದವರು ಎಂಬ ಅರ್ಥವನ್ನು ಇದು ತೋರಿಸುತ್ತದೆ. ಸ್ವಾಮಿರಾಯನು ಮೂರು ವರುಷದ ಬಾಲಕನಾಗಿದ್ದಾಗ ಅವನ ತಾಯಿಯು ದೈವಾಧೀನರಾಗಿ, ಅವನು ಪರದೇಶಿಯಾದ. ಅವನ ಸೋದರ ಮಾವನಾದ ರಾಮಣ್ಣನೆಂಬುವನು ಸ್ವಾಮಿರಾಯನ ಯೋಗಕ್ಷೇಮವನ್ನು ನೋಡಿಕೊಳ್ಳಬೇಕಾಯಿತು.

ಸ್ವಾಮಿರಾಯನು ಚಿಕ್ಕವನಿದ್ದಾಗಲೇ ಸದ್ಗುಣಗಳನ್ನು ಮೈಗೂಡಿಸಿಕೊಂಡಿದ್ದನು. ಲಿಂಗಸುಗೂರಿನ ಅಗ್ರಹಾರದ ಪ್ರಭಾವವೇ ಇದಕ್ಕೆ ಕಾರಣವಾಗಿರಬಹುದು. ಶ್ರೀವರದೇಂದ್ರರ ದಿವ್ಯಸಾನ್ನಿಧ್ಯವು ಇವನ ಬಾಲ್ಯಜೀವನದ ಮೇಲೆ ತುಂಬಾ ಪ್ರಭಾವವನ್ನು ಬೀರಿರಬೇಕು. ಇದೇ ಊರಿನಲ್ಲಿ ಸ್ವಾಮಿರಾಯನು ಅಭ್ಯಾಸವನ್ನು ಮುಂದುವರೆಸಿದನು. ಸರಿಯಾದ ಸಮಯಕ್ಕೆ ಶ್ರೀವರದೇಂದ್ರರ ದಿವ್ಯ ಸನ್ನಿಧಿಯಲ್ಲಿ

ಅವರ ಉಪನಯನವೂ ಜರುಗಿತು. ಸ್ವಾಮಿರಾಯನ ಸುಕೃತವೋ ಏನೋ ಎಂಬಂತೆ ಅವನು ಸದ್ಗುಣಗಳ ಖಣಿಯಾಗಿ ಬೆಳೆದನು. ಅವನು ಬೆಳೆದ ಪರಿಸರ ಹಾಗೂ ಶ್ರೀ ವರದೇಂದ್ರರ ದಿವ್ಯ ಸನ್ನಿಧಾನವೂ ಇದಕ್ಕೆ ಕಾರಣವಾಗಿರಬಹುದು. ಲೌಕಿಕ ವಿದ್ಯಾಭ್ಯಾಸದಲ್ಲಿಯೂ ಇವರು ಹಿಂದೆ ಇರಲಿಲ್ಲ.

ಸ್ವಾಮಿರಾಯನು ಆ ದಿನಗಳಲ್ಲಿ ಚಾಲನೆಯಲ್ಲಿದ್ದ ವಕೀಲಿ ಪರೀಕ್ಷೆಯನ್ನು ಪಾಸುಮಾಡಿ ವಕೀಲಿ ವೃತ್ತಿಯನ್ನು ಕೈಗೊಂಡನು. ಮಾತುಗಾರಿಕೆಯಲ್ಲಿ ಬಹು ಚಾಣಾಕ್ಷನಾಗಿದ್ದ ಇವನು ತನ್ನ ವೃತ್ತಿಯಲ್ಲಿ ಬಹು ಖ್ಯಾತಿಯನ್ನು ಪಡೆದನು. ಅಂದಿನ ದಿನಗಳಲ್ಲಿ ಅವರಿಗೆ ಕಕ್ಷಿದಾರರು ಬಹಳವಾಗಿದ್ದರು. ಈ ವೃತ್ತಿಯ ಮೂಲಕ ಅವರಿಗೆ ವಿಪುಲ ಹಣವೂ ಸಂಗ್ರಹವಾಗಿತ್ತು. ಅವರ ಕೀರ್ತಿಯೂ ಕೂಡ ಸುತ್ತ ಮುತ್ತಲೂ ಹರಡಿತ್ತು. ಗೋರೆಬಾಳದ ಶ್ರೀಕುಪ್ಪಣ್ಣನವರ ಪುತ್ರಿಯಾದ ವೃಂದಾವನಬಾಯಿಯವರೊಂದಿಗೆ ಅವರ ಮದುವೆಯು ಜರುಗಿ, ದಾಂಪತ್ಯ ಜೀವನದಲ್ಲಿ ಶ್ರೀ ಸ್ವಾಮಿರಾಯರು ಪ್ರವೇಶ ಮಾಡಿದರು. ಅವರಿಗೆ ಒಂದು ಗಂಡು ಮಗು ಜನಿಸಿದ್ದರೂ ಅದು ಶೈಶವಾವಸ್ಥೆಯಲ್ಲಿ ಇಹಲೋಕವನ್ನು ತ್ಯಜಿಸಿತು.

ಸಂಸಾರದ ವಿಷಮಯದುಃಖವನ್ನು ಅನುಭವಿಸಿದ ಸ್ವಾಮಿರಾಯನು ಮನೋವೇದನೆಯನ್ನು ಕಳೆದುಕೊಳ್ಳಲು, ಹಾಗೂ ಮಾನಸಿಕ ಶಾಂತಿ ಸಮಾಧಾನವನ್ನು ತಂದು ಕೊಳ್ಳಲು ಕುಟುಂಬ ಸಮೇತ ತೀರ್ಥ ಯಾತ್ರೆಯನ್ನು ಕೈಕೊಂಡನು. ಶ್ರೀ ಹರಿಯ ಸ್ಮರಣೆಯನ್ನೇ ತನ್ನ ಜೀವನದ ಉಸಿರನ್ನಾಗಿ ಮಾಡಿಕೊಂಡನು. ಇದು ಅವನ ಜೀವನದಲ್ಲಿ ತುಂಬಾ ಪರಿವರ್ತನೆಯನ್ನು ಉಂಟುಮಾಡಿತು. ಅವನ ಹೃದಯದಲ್ಲಿ ಮಡುವುಗಟ್ಟಿದ್ದ ಭಕ್ತಿಯು ಪದ್ಯ ರೂಪದಲ್ಲಿ ಹೊರಬರುತ್ತಿದ್ದವು. ಮೊದಲು 'ಕುಪ್ಪಿಭೀಮ' ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸತೊಡಗಿದನು.

ಸ್ವಾಮಿರಾಯನು ಬಹು ಆಚರಣ ಶೀಲನಾಗಿದ್ದು ವ್ರತ-ನಿಯಮ ಉಪವಾಸಗಳಲ್ಲಿ ಬಹು ನಿಷ್ಠೆ ಉಳ್ಳವನಾಗಿದ್ದನು. ಮಾಧ್ವಪ್ರಮೇಯಗಳಲ್ಲಿ ಬಹು

ಚಿಂತನ ಶೀಲನಾಗಿದ್ದನು. ಮನೆಯಲ್ಲಿ ಪುರಾಣ, ಪುಣ್ಯಕಥೆಗಳು, ವಿಶೇಷ ಪೂಜಾದಿಗಳು ಕಾಲಕಾಲಕ್ಕೆ ಜರುಗುತ್ತಿದ್ದವು.

'ಬಾಂಧವಾ: ವಿಷ್ಣುಭಕ್ತಾಶ್ಚ' ಎಂಬ ಮಾತಿನಲ್ಲಿ ಶ್ರದ್ಧೆಯುಳ್ಳ ಸ್ವಾಮಿರಾಯನು ವಿಷ್ಣುಭಕ್ತ ಸೇವಾ ಪರಾಯಣನಾಗಿದ್ದನು. ಹೀಗಾಗಿ ಇವನ ಮನೆಗೆ ಬಂದು ಹೋಗುವ ಭಕ್ತಾದಿಗಳಿಗೆ ಕೊರತೆ ಇರಲಿಲ್ಲ. ಅನ್ನದಾನ ಜ್ಞಾನದಾನಗಳಿಗೆ ಲಿಂಗಸುಗೂರಿನಲ್ಲಿ ಇವನ ಮನೆ ಪ್ರಸಿದ್ಧವಾಗಿತ್ತು.

ಶ್ರೀಹರಿವಾಯುಗುರುಗಳ ಸೇವೆಯಲ್ಲಿ ನಿರತರಾಗಿದ್ದ ಇವರು ಶ್ರೀಹರಿಪ್ರೀತ್ಯರ್ಥವಾಗಿ ಅನೇಕ ಸೇವೆಗಳನ್ನು ಮಾಡಿದರು. ಲಿಂಗಸುಗೂರಿನಲ್ಲಿ ಶ್ರೀ ವರದೇಂದ್ರರ ಮಠವು ಬಹು ಚಿಕ್ಕದಾಗಿತ್ತು. ಅದನ್ನು ವಿಸ್ತರಿಸುವಕಾರ್ಯವನ್ನು ಬಹು ಯಶಸ್ವಿಯಾಗಿ ಮಾಡಿದರು. ಶ್ರೀ ವರದೇಂದ್ರರಿಗೆ ಒಂದು ಪಲ್ಲಕ್ಕಿಯನ್ನೂ ಮಾಡಿಸಿ ಕೊಟ್ಟು, ಪ್ರತಿ ಗುರುವಾರ ಪಲ್ಲಕ್ಕಿ ಉತ್ಸವ ಜರುಗುವಂತೆ ವ್ಯವಸ್ಥೆಗೊಳಿಸಿದರು. ಶ್ರೀ ವರದೇಂದ್ರರಿಗೆ ಒಂದು ರಥವನ್ನೂ ಸಹ ಮಾಡಿಸಿ ರಥದಲ್ಲಿ ಅವರ ಉತ್ಸವ ಮೂರ್ತಿಯನ್ನು ಕೂಡಿಸಿ, ರಥ ಎಳೆದು ನಲಿದಾಡಿದರು.

ಇವರೇ ಬರೆದಿಟ್ಟ ತಮ್ಮ ಆತ್ಮ ಚರಿತ್ರೆಯಿಂದ ತಿಳಿದು ಬರುವದೇನೆಂದರೆ ತಮ್ಮ ಆತ್ಮೀಯ ಮಿತ್ರರಾದ ಲಿಂಗಸುಗೂರಿನ ಶ್ರೀ ವೆಂಕಟೇಶ ಹಳ್ಳೇರಾವ ವಕೀಲರೊಂದಿಗೆ ಮಂತ್ರಾಲಯಕ್ಕೆ ಯಾತ್ರೆ ಕೈಕೊಂಡಿದ್ದು, ಅಲ್ಲಿಪರಿ-ಪರಿಯಾಗಿ ಸೇವೆ ಮಾಡಿ ಶ್ರೀಗುರುರಾಜರ ಪರಮಾನುಗ್ರಹವನ್ನು ಸಂಪಾದಿಸಿಕೊಂಡು ಮರುಳುವಾಗ ಅಣುಮಂತ್ರಾಲಯದಲ್ಲಿ ವಾಸ್ತವ್ಯಮಾಡಿದರು. ಅಂದು ಅಲ್ಲಿಗೆ ಆಗಮಿಸಿದ್ದ ಶ್ರೀಮದಕ್ಷೋಭ್ಯತೀರ್ಥ ಮಠಾಧೀಶರಾಗಿದ್ದ ಶ್ರೀರಘುಕಾಂತ ತೀರ್ಥರ ದರ್ಶನವನ್ನು ಪಡೆದು-ಅವರಿಂದ ಆಧ್ಯಾತ್ಮಿಕ ಉಪದೇಶ ಪಡೆದದ್ದು ತಮ್ಮ ಜೀವನದಲ್ಲಿಯೇ ಬಹು ಮಹತ್ವದ ಘಟನೆ ಎಂಬುದಾಗಿ ಅವರೇ ಲೇಖಿಸಿದ್ದಾರೆ.

ಇವರಿಗೆ ಅಂಕಿತ ಪ್ರದಾನವಾದದ್ದು ಒಂದು ಅದ್ಭುತ ಘಟನೆಯೆ. ಇವರಕಾಲದಲ್ಲಿ 'ಕೋಸಗಿ ಮುತ್ಯಾ' ಎಂದು ಸುಪ್ರಸಿದ್ಧರಾದ

ಶ್ರೀಗುರುಜಗನ್ನಾಥವಿಠಲರು ಬಹು ಸುಪ್ರಸಿದ್ಧರಾಗಿದ್ದರು. ಇವರು ಅಪರೋಕ್ಷಜ್ಞಾನಿಗಳೆಂದು ಪ್ರಸಿದ್ಧರಾಗಿ, ಹಲವಾರು ಕೀರ್ತನೆ ರಚಿಸಿ, ಹಾಡಿ, ಭಜನೆ ಮಾಡಿ ಜನಮನವನ್ನು ಸೂರೆಗೊಂಡಿದ್ದರು. ಇವರು ಶ್ರೀ ವಿಜಯದಾಸರ ಶಿಷ್ಯರಾದ ಶ್ರೀಗೋಪಾಲದಾಸರ ಶಿಷ್ಯ ಪರಂಪರೆಗೆ ಸೇರಿದವರಾಗಿದ್ದರು.

ಸ್ವಾಮಿರಾಯರಿಗೆ ಅಂಕಿತಕೊಟ್ಟು ಹರಿದಾಸರನ್ನಾಗಿ ಮಾಡುವಂತೆ ಶ್ರೀಗುರುಜಗನ್ನಾಥದಾಸರಿಗೆ ಸೂಚನೆಯಾಗಿತ್ತಂತೆ. ಸ್ವತಃ ದಾಸರೇ ಲಿಂಗಸುಗೂರಿಗೆ ಬಂದು ಸ್ವಾಮಿ ರಾಯನನ್ನು ಕೋಸಗಿ ಗ್ರಾಮಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ಅವರಿಗೆ ವಿಧಿವತ್ತಾಗಿ "ವರದೇಶ ವಿಠಲ" ಎಂದು ಅಂಕಿತ ಪ್ರದಾನ ಮಾಡಿದರು. ಅಂದಿನಿಂದ ಸ್ವಾಮಿರಾಯರು "ಶ್ರೀ ವರದೇಶ ವಿಠ್ಠಲ" ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ಮಾಡಿದರು.

ಶ್ರೀವರದೇಂದ್ರರ ವಿಶೇಷ ಅನುಗ್ರಹ ಶ್ರೀವರದೇಶ ವಿಠಲರ ಮೇಲೆ ಇರುವದನ್ನು ವ್ಯಕ್ತಪಡಿಸುವ ಒಂದು ಪ್ರಸಂಗ ಜರುಗಿತು. ಶ್ರೀ ಗುರುಜಗನ್ನಾಥದಾಸರು ಆಗಾಗ ಶ್ರೀವರದೇಂದ್ರರದರ್ಶನಾಕಾಂಕ್ಷಿಗಳಾಗಿ ಲಿಂಗಸುಗೂರಿಗೆ ಬರುತ್ತಿದ್ದರು. ಹಾಗೊಮ್ಮೆ ಬಂದಾಗ ಶ್ರೀವರದೇಂದ್ರರ ಸನ್ನಿಧಿಯಲ್ಲಿ ಶ್ರೀಗುರುಜಗನ್ನಾಥದಾಸರು, ಶ್ರೀವರದೇಶವಿಠಲರು ಶ್ರೀಹಳ್ಳೇವೆಂಕಟರಾಯರು ರಾತ್ರಿ ಬಹಳಹೊತ್ತಿನವರೆಗೆ ಮಾಧ್ವ ಸಿದ್ಧಾಂತಗಳ ಚಿಂತನೆ, ಚರ್ಚೆಯಲ್ಲಿ ತೊಡಗಿದ್ದರು. ಪ್ರಮೇಯಗಳ ಚಿಂತನ-ಮಂಥನ ಎಷ್ಟು ಹೊತ್ತಾದರೂ ಮುಗಿಯಲಿಲ್ಲ. ಶ್ರೀಗುರುಜಗನ್ನಾಥದಾಸರು ಚರ್ಚೆಯ ಮಧ್ಯದಲ್ಲಿ ಒಮ್ಮೆಲೆ ಸಿಟ್ಟು ಬಂದವರಂತೆ ನಟಿಸಿ ಮಲಗಿ ಬಿಟ್ಟರು. ಆಗ ಗುರುಗಳನ್ನು ಎಬ್ಬಿಸಲು ಅಥವಾ ಮಾತನಾಡಿಸಲು ಯಾರೂ ಧೈರ್ಯಮಾಡಲಿಲ್ಲ. ಬೆಳಗಾದರೂ ಅವರು ನಿದ್ರೆಯಿಂದ ಎದ್ದಿರಲಿಲ್ಲ. ಮುಂಜಾನೆ ಬಹಳ ಹೊತ್ತಾದ ನಂತರ ಶ್ರೀ ವರದೇಶರು ಶ್ರೀವರದೇಂದ್ರರ ದರ್ಶನಕ್ಕಾಗಿ ಮಠಕ್ಕೆ ಬಂದಾಗ ತಕ್ಷಣ ಗುರುಗಳು ಎದ್ದು ಕುಳಿತು ಮಠಕ್ಕೆ ಬಂದ ಶ್ರೀ ವರದೇಶರನ್ನು ನೋಡಿ, ಆನಂದಭರಿತರಾಗಿ ಅವರನ್ನು ಹತ್ತಿರ ಕರೆದು, "ಸ್ವಾಮಿರಾಯ ನೀನು ಎಲ್ಲರಂತೆ ಸಾಮಾನ್ಯನಲ್ಲ; ನೀನು

ಶ್ರೀವರದೇಂದ್ರಸ್ವಾಮಿಗಳ ವಿಶೇಷ ಅನುಗ್ರಹಕ್ಕೆ ಪಾತ್ರನಾದವನು" ಎಂದು ಉದ್ಗರಿಸಿದರಂತೆ. ಹಾಗೂ ಉತ್ಸಾಹಭರಿತರಾಗಿ "ಏಸೇಸು ಕಲ್ಪಕ್ಕು ಈಶನು ನೀನಯ್ಯಾ" ಎಂಬ ಒಂದು ಉಗಾಭೋಗವನ್ನು ಹಾಗೂ ಒಂದು ಕೀರ್ತನೆಯನ್ನು ರಚಿಸಿ ತಮ್ಮ ಶಿಷ್ಯರಿಗೆ ಕೊಟ್ಟರೆಂಬ ಐತಿಹ್ಯವಿದೆ. ಈ ಘಟನೆ ಅಷ್ಟು ಮಹತ್ವದ್ದೆಂದು ಅನಿಸಲಿಕ್ಕಿಲ್ಲ. ಆದರೆ ಇದರ ಹಿಂದಿರುವ ಪ್ರಮೇಯ, ರಹಸ್ಯ ಅಲೌಕಿಕವಾದದ್ದು. ಇದು ಗುರುಶಿಷ್ಯರ ಆತ್ಮೀಯತೆಗೆ ಒಂದು ನಿದರ್ಶನವಾದರೆ, ಶ್ರೀವರದೇಶವಿಠಲರ ಮೇಲೆ ಗುರುಗಳಿಗಿರುವ ಪ್ರೀತ್ಯಾದರಗಳನ್ನು ಹಾಗೂ ಶ್ರೀಹರಿವಾಯುಗಳ ಅನುಗ್ರಹವನ್ನು ಸಂಕೇತಿಸುತ್ತದೆ.

ಶ್ರೀವರದೇಶರಿಗೆ ರಾಮಣ್ಣನೆಂಬ ಒಬ್ಬ ಸೋದರ ಮಾವನಿದ್ದನೆಂದೂ, ಹಾಗೂ ದಾಸರು ಬಾಲ್ಯದಲ್ಲಿ ಮಾತೃ ವಿಯೋಗದಿಂದ ದುಃಖಿತರಾದಾಗ ರಾಮಣ್ಣನ ಆಶ್ರಯದಲ್ಲಿ ಅವರು ಬೆಳೆದರು ಎಂಬ ಅಂಶವನ್ನು ಈ ಹಿಂದೆ ಸೂಚಿಸಲಾಗಿದೆ. ಈ ರಾಮಣ್ಣನಿಗೆ ಹನುಮಂತರಾಯನೆಂಬ ಒಬ್ಬ ಮಗನಿದ್ದನು. ತಾರುಣ್ಯಕ್ಕೆ ಬಂದ ಈತನು ರೋಗಗ್ರಸ್ಥನಾದನು. ರೋಗವು ಉಲ್ಬಣಿಸಿ ಅವನು ಬದುಕುವನೆಂಬ ಭರವಸೆಯೇ ಇಲ್ಲದಾಯಿತು. ಏನೂ ತೋಚದ ಅವನ ತಂದೆಯು ಶ್ರೀವರದೇಶರಿಗೆ ಪತ್ರಮುಖೇನ ಈ ವಿಷಯವನ್ನು ತಿಳಿಸಿದರು. ಈ ಸಮಯದಲ್ಲಿ ದಾಸರು ರಾಯಚೂರಿನಲ್ಲಿದ್ದು–ತಮ್ಮ ನಿತ್ಯ ಅಹ್ನಿಕಗಳನ್ನು ಚಾಚೂ ತಪ್ಪದೇ ನೆರವೇರಿಸುತ್ತ–ನಿತ್ಯದಲ್ಲಿ ಭಜನೆ ಮಾಡುತ್ತ–ಸಜ್ಜನರಿಗೆ ರಹಸ್ಯ ತತ್ವಗಳನ್ನು ಬೋಧಿಸುತ್ತ ಸತ್ಸಂಗದಲ್ಲಿದ್ದರು. ತಮ್ಮ ಸೋದರಮಾವನಿಂದ ವರ್ತಮಾನ ತಿಳಿದು ಖಿನ್ನರಾದ ಅವರು ಶ್ರೀ ಹರಿವಾಯುಗುರುಗಳನ್ನು ಸ್ಮರಿಸುತ್ತ ಲಿಂಗಸುಗೂರಿಗೆ ಆಗಮಿಸಿ ಧ್ವನ್ವಂತರಿ ರೂಪಿಯಾದ ಪರಮಾತ್ಮನಿಗೆ ಪ್ರಾರ್ಥಿಸುತ್ತ ಒಂದು ಕೀರ್ತನೆಯನ್ನು ಹಾಡಿದರು. ಶ್ರೀ ಗೋಪಾಲದಾಸರ ಪ್ರಾರ್ಥನೆಯನ್ನು ಮನ್ನಿಸಿ ಪರಮಾತ್ಮನು ಶ್ರೀನಿವಾಸಾಚಾರ್ಯರ (ಮುಂದೆ ಶ್ರೀ ಜಗನ್ನಾಥದಾಸರು) ರೋಗವನ್ನು ಪರಿಹರಿಸಿ, ಅವರಿಗೆ ಆಯುಷ್ಯ ಪ್ರದಾನ ಮಾಡಲಿಲ್ಲವೇ? ಈ ಘಟನೆಯನ್ನು ಸ್ಮರಿಸಿಕೊಂಡ ವರದೇಶರು, ಇದನ್ನೇ ಕೀರ್ತನೆಯಲ್ಲಿ ಉಲ್ಲೇಖಿಸಿ

ದೇವ ಧನ್ವಂತರಿಯನ್ನು ಹೀಗೆ ಪ್ರಾರ್ಥಿಸಿದರು.

"ಹರಿ ನಿನ್ನ ಕರುಣವಿರಲಾವ ಭಯವು
ಸ್ಮರಣೆ ಮಾತ್ರದಿ ಸಕಲ ದುರಿತಗಳ ಪರಿಹರಿತ ॥
ಸಣ್ಣವಯದಲಿ ಶ್ರೀ ಜಗನ್ನಾಥದಾಸಾರ್ಯ
ಬನ್ನ ಬಡುತಿರೆ ವ್ಯಾಧಿ ಪೀಡೆಯಿಂದ
ಘನ್ನ ಕರುಣಾಬ್ಧಿ ಶ್ರೀ ಗೋಪಾಲದಾಸರಾ
ಬಿನ್ನಪವನಾಲಿಸಿ ರೋಗಮೋಚನಗೈದ ೧

-- - - - - - - - - - - - - -
-- - - - - - - - - - - - - -
-- - - - - - - - - - - - - -
-- - - - - - - - - - - - - - - ೨

ನಿನ್ನನೇ ನಂಬಿರುವೆ ನಿನ್ನನೇ ಪ್ರಾರ್ಥಿಸುವೆ
ಧ್ವನ್ವಂತ್ರಿ ನೀನೆನ್ನ ಮೊರೆಯಾಲಿಸೊ
ನಿನ್ನ ಸೇವಕರ ಬಲು ಬನ್ನ ಪಡಿಸಲು ಸಲ್ಲ
ಇನ್ನು ನೀ ಕರುಣಿಪುದು ವರದೇಶ ವಿಠಲ" ೩

ಎಂದು ಪುನಃ ಪುನಃ ಹಾಡಿ ನರ್ತಿಸಿದರು.
'ಕಿಮಲಭ್ಯಂ ಭಗವತೀ ಪ್ರಸನ್ನೇ
ಶ್ರೀನಿಕೇತನೇ'–

ಎನ್ನುವಂತೆ ದಾಸರ ಪ್ರಾರ್ಥನೆ ಶ್ರೀಹರಿಗೆ ತಲುಪಿತು. ಹನುಮಂತರಾಯನು ಕ್ರಮೇಣ ಗುಣಮುಖನಾದನು. ಸ್ವಲ್ಪದಿನಗಳಲ್ಲಿ ಸಂಪೂರ್ಣ ಚೇತರಿಸಿಕೊಂಡನು. ದಾಸರಲ್ಲಿ–ಅವರ ಮಾತಿನಲ್ಲಿ ಭಗವಂತನಿಗೆ ಇರುವ ಆದರ ಇದರಿಂದ ವ್ಯಕ್ತವಾಗುತ್ತದೆ. ವರದೇಶ ವಿಠಲರ ಪ್ರಾರ್ಥನೆ ಪರಮಾತ್ಮನಿಗೆ ಮುಟ್ಟಿತು ಎಂಬುದರಲ್ಲಿ ಸಂದೇಹವೇ ಇಲ್ಲ.

ದಾಸರಿಗೆ ಹೆಚ್ಚಾಗಿ ಲೌಕಿಕದಲ್ಲಿ ಆಸಕ್ತಿ ಇರಲಿಲ್ಲ ಎಂಬುದಕ್ಕೆ ಅವರ ಜೀವನದ ಹಲವಾರು ಘಟನೆಗಳು ಸಾಕ್ಷಿಯಾಗಿವೆ. ಲೌಕಿಕ ಕಾರ್ಯವನ್ನು ಮಾಡಿದರೂ ಆಯಾ ಕಾರ್ಯಗಳನ್ನು ಆಧ್ಯಾತ್ಮಿಕ ದೃಷ್ಟಿಯಿಂದಲೇ ಮಾಡುತ್ತಿದ್ದರು.

ಅವರು ಲಿಂಗಸುಗೂರಿನಲ್ಲಿ ಒಂದು ಮನೆಯನ್ನು ಕಟ್ಟಿಸಿದ್ದಾರೆ. ನಾವೆಲ್ಲರೂ ಮನೆಯನ್ನೇನೋ ಕಟ್ಟಿಸುತ್ತೇವೆ. ತಕ್ಕ ಮಟ್ಟಿಗೆ ಧಾರ್ಮಿಕ ವಿಧಿಗಳನ್ನು ಆಚರಿಸುತ್ತೇವೆ ಆದರೆ ವರದೇಶದಾಸರ ರೀತಿಯೇ ಬೇರೆಯಾದುದು. ಅವರು ಮನೆಯನ್ನು ಕಟ್ಟಿಸಿ ಹಾಡಿದ ರೀತಿ ಬಹು ಚೇತೋಹಾರಿಯಾಗಿದೆ.

"ಬಾರೊ ನೂತನ ಗೃಹಕೆ ಹರಿಯೆ
ಸಿರಿ ಮಾರುತ ಮುಖಸುರರೊಡಗೂಡಿ ಧೊರಿಯೆ"

ಎಂದು ಹಾಡಿ, "ಮನೆಯ ವರ್ಣನೆಯನ್ನು ಬಹು ಸೂಕ್ಷ್ಮವಾಗಿ ಮಾಡಿ" ನೀನು ದೇವತೆಗಳೊಡನೆ ಬಂದು ಇಲ್ಲಿ 'ನೆಲೆಸು' ಎಂದು ದಯನೀಯವಾಗಿ ಪ್ರಾರ್ಥಿಸಿದ್ದಾರೆ.

ಗುರು ಶಿಷ್ಯರು ಆಗಾಗ ಸಂಧಿಸುತ್ತಿದ್ದರೆಂಬ ವಿಷಯವನ್ನು ಈ ಮೊದಲು ಹೇಳಿದೆ. ಹಾಗೊಮ್ಮೆ ಗುರು-ಶಿಷ್ಯರು ಲಿಂಗಸುಗೂರಿನಲ್ಲಿಯೇ ಸಂಧಿಸಿದರು. ಶ್ರೀಗುರುಜಗನ್ನಾಥದಾಸರು ಶಿಷ್ಯಾನುಗ್ರಹಕಾಂಕ್ಷಿಗಳಾಗಿ ಲಿಂಗಸುಗೂರಿಗೆ ಬಂದರು. ಶ್ರೀವರದೇಶದಾಸರ ಮನೆಯಲ್ಲಿಯೇ ತತ್ವ ಚಿಂತನೆ ನಡೆಯಿತು.

ಚರ್ಚೆಯ ವಿಷಯ ಬಹುಗಂಭೀರವಾಗಿದ್ದು ಶ್ರೀಮಂತ್ರಾಲಯ ಪ್ರಭುಗಳೇ ಚರ್ಚೆಯ ಕ್ರೇಂದ್ರ ಬಿಂದುವಾಗಿದ್ದರು. ವಿಷಯ ಅತ್ತಿತ್ತ ಸಾಗಿ ಶ್ರೀಗುರುರಾಜರ ಸ್ತೋತ್ರದ ಕರ್ತೃಗಳಾದ ಶ್ರೀಅಪ್ಪಣ್ಣಾಚಾರ್ಯರು ಯಾರು ಎಂಬ ವಿಷಯ ಚರ್ಚೆಗೆ ಬಂತು. ಗುರುಜಗನ್ನಾಥದಾಸರು ಆಧಾರಪೂರ್ವಕವಾಗಿ ಅಪ್ಪಣ್ಣಾಚಾರ್ಯರ ವಿಷಯವನ್ನು ಹೇಳುತ್ತ ಅವರ ಚರಿತ್ರೆಯನ್ನು ವಿವರವಾಗಿ ಹೇಳಿದರು. ವರದೇಶರು ಗುರುಗಳು ಹೇಳಿದ ಮಾತಿನ ಅಂತರಾರ್ಥವನ್ನು ಗ್ರಹಿಸಿ,

ಅಪ್ಪಣ್ಣಾಚಾರ್ಯರು ಮೂರು ಜನ್ಮಗಳನ್ನು ಎತ್ತಿದ ವಿಷಯವನ್ನೂ, ಹಾಗೂ ಅವರೇ ಗುರುಜಗನ್ನಾಥದಾಸರು ಎಂಬ ವಿಷಯವನ್ನೂ ಗ್ರಹಿಸಿದರು. ಬಹು ಆನಂದಗೊಂಡರು. ರಾತ್ರಿಯೆಲ್ಲ ಇದೇ ವಿಷಯವನ್ನು ಮಥನ ಮಾಡುತ್ತ ಮಲಗಿದರು. ಬೆಳಗಾಗುವದರಲ್ಲಿ ಅವರ ಚಿಂತನೆಯು ಒಂದು ಹದಕ್ಕೆ ಬಂದು.

"ಸ್ಮರಿಸಿ ಬದುಕಿರೋ ಗುರುರಾಯರ ಪಾದವ।

ಕೊಡುವನು ಸಂಪದವ"–ಎಂಬ ಮೂರು ನುಡಿಗಳ ಪದವನು ಬೆಳಗಿನ ಜಾವ ಎದ್ದು ಹಾಡಿದರು.

"ಪ್ರಥಮದಿ ದ್ವಿಜಕುಲ ತತಿಯಲಿ ಅವತರಿಸಿ
ಬಹುಜನರನು ವಲಿಸಿ ಪಿತಭ್ರಾತಾಚಾರ್ಯನು ತಾನೆಂದೆನಿಸಿ"॥

ಎಂಬ ಆ ಪದದಲ್ಲಿಯ ಸಾಲನ್ನು ಓದಿದ ಅವರ ಗುರುಗಳಾದ ಶ್ರೀಗುರು ಜಗನ್ನಾಥದಾಸರು ಆ ಪದ್ಯದ ಮತಿತಾರ್ಥವನ್ನೂ ಹಾಗೂ ಶ್ರೀವರದೇಶರು ತಮ್ಮ ಅವತಾರವನ್ನು ತಿಳಿದುದನ್ನು ಮನಗಂಡರು. ಸ್ವರೂಪ ತಿಳಿದ ಮೇಲೆ ಇನ್ನು ಇಲ್ಲಿರಬಾರದೆಂದು ತಿಳಿದುಕೊಂಡರು. ತಕ್ಷಣ ಶ್ರೀವರದೇಶರಿಗೆ ಹೀಗೆ ಆದೇಶಿಸಿದರು. "ನಮ್ಮಿಬ್ಬರ ಅವತಾರಗಳನ್ನು ಮುಕ್ತಾಯಗೊಳಿಸುವ ಸಂದರ್ಭ ಈಗ ಬಂದಿತು. ಈ ರಹಸ್ಯವನ್ನು ಇನ್ನಾರಿಗೂ ಹೇಳದಿರು. ಉಳಿದ ಆಯುಷ್ಯದಲ್ಲಿ ತಕ್ಕ ಸಾಧನೆಯನ್ನು ಮಾಡು".

ನಂತರ ಗುರುಗಳು ಕೋಸಗಿಗೆ ಪ್ರಯಾಣ ಮಾಡಿದರು. ಕ್ರಮೇಣ ಶ್ರೀ ವರದೇಶರೂ ಅಲ್ಲಿಗೆ ಹೋದರು. ಗುರು ಶಿಷ್ಯರಿಬ್ಬರೂ ಆಧ್ಯಾತ್ಮ ಚಿಂತನೆಯಲ್ಲಿ ಸಾಧನೆ ಮಾಡುತ್ತ ಸ್ವಲ್ಪಕಾಲ ಆನಂದದಿಂದಿದ್ದರು. ಶ್ರೀವರದೇಶರು ಗುರುಗಳ ಬಳಿ ಇದ್ದಾಗಲೆ ಇಹಲೋಕ ಯಾತ್ರೆಯನ್ನು ಮುಗಿಸಿದರು. ಅದು ಆಶ್ವೀಜ ಶುಕ್ಲ ತೃತಿಯಾ. ಇದಾದ ನಂತರ ಹಲವು ದಿನಗಳಲ್ಲಿ ಅವರ ಗುರುಗಳೂ ಸಹ ವೈಕುಂಠ ಪ್ರಯಾಣ ಮಾಡಿದರು. ಅದು ಆಶ್ವೀಜ ಕೃಷ್ಣಪಕ್ಷ ಪ್ರತಿಪದ.

## ಚರಿತ್ರೆಯನ್ನು ಕುರಿತು ಒಂದು ಐತಿಹ್ಯ

ಶ್ರೀ ವರದೇಶರು ತಮ್ಮ ಜೀವನದ ಒಂದು ಘಟನೆಯನ್ನು ಕುರಿತು ತಾವೇ ಸ್ವತಃ ಬರೆದಿಟ್ಟುದದನ್ನು ಲಿಂಗಸುಗೂರಿನ ಒಂದು ಪ್ರಕಟನೆಯಲ್ಲಿ ಉಲ್ಲೇಖಿಸಿದ್ದು, ಅದನ್ನು ಯಥಾಸ್ಥಿತಿ ಇಲ್ಲಿ ಉದ್ಧರಿಸಲಾಗಿದೆ.

"ಸ್ಮಾರಕವಾದ ಶುಭದಿವಸ ಶಕೆ ೧೮೩೭ ರಾಕ್ಷಸ ನಾಮ ಸಂವತ್ಸರ ನಿಜ ವೈಶಾಖ ವದ್ಯ ದ್ವಾದಶಿ ಮಂತ್ರಾಲಯ ಸುಕ್ಷೇತ್ರದಲ್ಲಿ ಶ್ರೀರಾಘವೇಂದ್ರಗುರುರಾಯರ ದರ್ಶನ ಹಸ್ತೋದಕ, ತುಲಸಿ ಅರ್ಚನಾ, ಮಂಗಳಾರತಿ, ಪಾಲಕಿ ಸೇವಾ (ಗುರುಗಳು ಅನುಗ್ರಹಮಾಡಿ ಪಾಲಕಿದಂಡಿಗೆಯನ್ನು ಈ ಪಾಮರನ ಉದ್ಧಾರಾರ್ಥವಾಗಿ ಈ ಮಡ್ಡನ ಹೆಗಲ ಮೇಲೆಯೇ ಕೊಟ್ಟಿದ್ದು ಪರಮ ಸಂತೋಷ. ಮಾಡಿಕೊಂಡು ಮರುದಿವಸ ಅಂದರೆ ಅದೇ ವದ್ಯ (೧೩) ಗುರುವಾರ ಅಣುಮಂತ್ರಾಲಯ ಕ್ಷೇತ್ರದಲ್ಲಿ ಬಂದು ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯಾದ್ಯನೇಕ ಬಿರುದಾವಳಿಗಳಿಂದ ಶೋಭಿಸುವ ಶ್ರೀಮದಕ್ಷೋಭ್ಯತೀರ್ಥ ಮಠಾಧೀಶ್ವರರಾದ ಶ್ರೀಮದ್ರಘುಕಾಂತತೀರ್ಥ ಶ್ರೀಪಾದಂಗಳವರ ಸಂದರ್ಶನ, ಶ್ರೀರಾಮದೇವರ ದರ್ಶನ, ತೀರ್ಥ ಪ್ರಸಾದ ತೆಗೆದುಕೊಂಡು, ಉಭಯ ಶ್ರೀಪಾದಂಗಳವರ ಮುಖದಿಂದ ಅನೇಕ, ಪ್ರಮೇಯ ಭಾಗಗಳು ದೇವರ ಮಹಿಮಾಗಳು ಕೇಳಿ ಪರಮ ಶುದ್ಧಾಂತಃಕರಣರಾಗಿ ಆ ದಿವಸ ಸಮಗ್ರವಾಗಿ ಮಹದಾಶ್ರಯದಲ್ಲಿ ಕಾಲವನ್ನು ಸಾರ್ಥಕಮಾಡಿ, ರಾತ್ರಿ ಎಂಟು ಗಂಟೆ ಸುಮಾರಕ್ಕೆ ಹಿರೇ ಸ್ವಾಮಿಗಳಿಂದ ಫಲಮಂತ್ರಾಕ್ಷತೆಯನ್ನು ತೆಗೆದುಕೊಂಡು ಶ್ರೀಮದ್ರಘುದಾಂತತೀರ್ಥಶ್ರೀಪಾದಂಗಳವರ ದರಶನಕ್ಕಾಗಿ ಹೋಗಲು ಅಣುಮಂತ್ರಾಲಯಸ್ಥ ರಾಯರ ಸನ್ನಿಧಿಯಲ್ಲಿ ಶ್ರೀ ಪಾದಂಗಳವರು ಕುಳಿತಿದ್ದು ನನಗೂ, ನನ್ನ ಸಂಗಡಿದ್ದ ಸನ್ಮಿತ್ರ ಶಿಖಾಮಣಿಗಳಾದ ವೆಂಕಟರಾವ ವಕೀಲ, ಶ್ರೀಹರಿವಾಯುಗಳ ಪ್ರೇರಣೆಯಿಂದ, ನಮ್ಮುಭಯರ ಮೇಲೆ ಪರಮಾನುಗ್ರಹ ಮಾಡಲಿಚ್ಛಿಸಿ, ಸನ್ಮಾರ್ಗ ಪ್ರದರ್ಶನಮಾಡಿ, ಭಗವದಾರಾಧನೆಯ ಕ್ರಮವನ್ನೂ ನೇಮವನ್ನೂ ತಿಳಿಸಿ, ಅನೇಕ ವಿಧವಾಗಿ ಭಗವದ್ಭಕ್ತಿಯ ರೂಪವನ್ನು, ಮಾರ್ಗವನ್ನು

ಬೋಧಿಸಿ, ನಮ್ಮುಭಯರನ್ನು ಶಿಷ್ಯತ್ವೇನ ಸ್ವೀಕಾರ ಮಾಡಿ, ಆ ರಾತ್ರಿ ಸಂಪೂರ್ಣ ಸದುಪದೇಶದಲ್ಲಿಯೇ ಕ್ರಮಿಸಿ, ಬೆಳಿಗ್ಗೆ ಅಪ್ಪಣೆಯನ್ನು ಪಾಲಿಸಿದರು.

ನನ್ನ ಜನ್ಮ ತಿಥಿ ವಾರವಾದರೂ ಅದೇ ಇದ್ದು ಅದೇ ದಿವಸ ನನ್ನ ವಯಸ್ಸಿನ ಮೂವತ್ತು(೩೦) ವರ್ಷಗಳು ಮುಗಿದು ಆ ದಿವಸವೇ ಪಾರಮಾರ್ಥ ಮಾರ್ಗದಲ್ಲಿ ಎರಡನೇ ಜನ್ಮ ತೆಗೆದು ಕೊಂಡು ಶ್ರೀಗಳವರ ಕರಕಮಲ ಜನಿಸಿದಂತಾದುದಕ್ಕೇ ಅದೇ ದಿವಸವೇ ಶುಭದಿವಸವೆಂದು ತಿಳಿಯಲ್ಪಟ್ಟಿತು. ಶ್ರೀ ಹರಿವಾಯುಗಳವರೇ ಗುರುಗಳವರ ಸದುಪದೇಶದಂತೆ ನಡೆಸಿ ಕೊಳ್ಳಲೆಂದು ತ್ರಿಕರಣಪೂರ್ವಕ ಪ್ರಾರ್ಥನೆ.

ಸನ್ಮಾರ್ಗ ಪ್ರವರ್ತಕನನ್ನಾಗಿ ಮಾಡಿದ ಶ್ರೀಮದ್ರಘುದಾಂತತೀರ್ಥ ಶ್ರೀಪಾದಂಗಳವರಿಗೆ ಕೃತಜ್ಞತಾಪೂರ್ವಕ ಸವಿನಯ ಅನಂತಾನಂತ ದೀರ್ಘದಂಡ ಪ್ರಣಾಮಗಳು".

"ಓಂ ಶಾಂತಿಃ ಶಾಂತಿಃ ಶಾಂತಿಃ"

**ಕೃತಿಗಳ ಸಮೀಕ್ಷೆ**

ಶ್ರೀವರದೇಶ ವಿಠಲರು ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಒಳ್ಳೇ ಪರಿಣಿತರಾಗಿದ್ದರು. ಹಲವಾರು ಕೀರ್ತನೆ, ಉಗಾಭೋಗಗಳನ್ನು ಅವರು ರಚಿಸಿದ್ದು, ಅವುಗಳಲ್ಲಿ ಸಾಹಿತ್ಯಕ ಗುಣವಿದೆ; ಸಂಗೀತದ ಸೊಗಡು ಇದೆ; ಆಧ್ಯಾತ್ಮದ ಕಂಪು ಇದೆ; ಭಕ್ತಿಯ ಪರಾಕಾಷ್ಠತೆ ಇದೆ; ವರ್ಣನಾ ವೈಖರಿಯಂತೂ ಬಹು ಚೇತೋಹಾರಿಯಾಗಿದೆ.

ಒಬ್ಬ ಆರ್ತಭಕ್ತನ ಆತ್ಮಶೋಧನೆ ದಾಸರ ಹಲವು ಪದಗಳಲ್ಲಿ ಬಹು ಮನಂಬುಗುವಂತೆ ಮೂಡಿ ಬಂದಿದೆ.

"ಪಾಪಕರ್ಮವ ಮಾಡಿ ಜೀವಿಸುವೆ ನಿರುತ
ಬಾಲತನವನು ಬಾಲಲೀಲೆಯಿಂದಲಿ ಕಳೆದೆ
ಕೀಳು ಜನರೊಡನೆ ಸ್ನೇಹವ ಬೆರಸಿದೆ

ಹಾಳು ಹರಟೆಗೆ ಹೊತ್ತು ಸಾಲದೋಯಿತು ಯನಗೆ
ಶ್ರೀಲೋಲ ನಿನ್ನಡಿಗೆ ದೂರಾದೆ ನಾನು"- ಎಂದು ತಾವು ವ್ಯರ್ಥವಾಗಿ ಕಾಲ ಕಳೆದದ್ದನ್ನು ನೆನಪಿಸಿಕೊಂಡು ಪಶ್ಚಾತ್ತಾಪಪಟ್ಟಿದ್ದಾರೆ.

"ಮಧ್ವಶಾಸ್ತ್ರದ ಸಾರವನ್ನು ತಿಳಿಯದೆ ನಾನು
ಕದ್ದಕಳ್ಳನ ತೆರದಿ ಬಾಳಿಹೆನು ಬರಿದೆ"

ಎಂಬುದಾಗಿ ತಾವು ಸತ್ ಸಿದ್ಧಾಂತದಿಂದ ವಿಮುಖರಾದದ್ದನ್ನು ನೆನೆದು ಪರಿತಪಿಸಿದ್ದಾರೆ.

"ಉದರಗೊಸುಗ ಪರರ ಹೃದಯದ್ರವಿಸುವ ತೆರದಿ
ವಿಧ-ವಿಧದಿ ಆತ್ಮ-ಸ್ತೋತ್ರವನೆ ಪೊಗಳಿ
ಸದ ಸದ್ವಿವೇಕವನು ತೊರೆದನ್ಯ ಉಳಿದು ಬಲು
ಚದುರ ನಾನೆಂಧೇಳಿ ಮೋಸಗೊಳಿಸುತಜನರ"

ಭಂಡ ಬಾಳನ್ನು ಬಾಳಿದೆ ಎಂದು ಆಲಾಪಿಸಿದ್ದಾರೆ. ಹೀಗೆ ತಾವುಗೈದ ಪಾಪಗಳ ಪಟ್ಟಿಯನ್ನೇ ಕೊಡುತ್ತಾ ಸಾಗಿ

"ನಾಮಾಡದಿಹ ಪಾಪವೀಮಹಿಯೊಳೊಂದಿಲ್ಲ
ಸೀಮೆಗಾಣಲು ರವಿಜನಗೆ ಸಾಧ್ಯವಿಲ್ಲ"

ಎಂದೊರಲಿ ಪತಿತಪಾವನನಾದ ಪರಮಾತ್ಮನೇ ತಮ್ಮನ್ನು ಉದ್ಧರಿಸಬೇಕೆಂದು

"ಸ್ವಾಮಿ ನೀಪೊರೆಯದಿರೆ ಯನಗಾರು ಗತಿಯಿಲ್ಲ"

ಎಂದು ಪ್ರಾರ್ಥಿಸಿ-

"ದೀನ ರಕ್ಷಕನೆಂಬ ಬಿರಿದು ನಿಜವಿದ್ದರಾ
ಧೀನನಾದವನನುದ್ಧಸಲರಿಯಾ"-ಎಂದು ಶ್ರೀ ಹರಿಗೆ ಶರಣು ಬಂದಿದ್ದಾರೆ.

ಪರಮಾತ್ಮನೇ ತಮ್ಮ ದೇಹವೆಂಬ ಮನೆಯಲ್ಲಿ ವಾಸವಾಗಿದ್ದು, ತನ್ನನ್ನು ಸನ್ಮಾರ್ಗಕ್ಕೆ ಹಚ್ಚಬೇಕೆಂದು ಬೇಡಿಕೊಂಡಿದ್ದಾರೆ. ಇನ್ನೊಂದು ಕೀರ್ತನೆಯಲ್ಲಿ

"ಬಾರೋ ನೂತನ ಗೃಹಕೆ ಹರಿಯೆ ಸಿರಿ
ಮಾರುತಿ ಮುಖ ಸುರರೊಡಗೂಡಿಧೊರೆಯೆ" ಎಂದು ಪ್ರಾರ್ಥಿಸುತ್ತ,
"ಏಕಾದಶ ಸೇವಕರ ನಿನ್ನವಶದೊಳಿರಿಸುವೆ"

ಎಂದಿದ್ದಾರೆ–ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು ಹಾಗೂ ಮನಸ್ಸು–ಈ ಏಕಾದಶ ಇಂದ್ರಿಯಗಳನ್ನು ನಿನ್ನ ಸೇವೆಗಾಗಿ ಇಡುವೆ ಎಂದು ತಮ್ಮನ್ನೇ ಸರ್ವಾರ್ಪಣ ಬುದ್ಧಿಯಿಂದ ಶ್ರೀ ಹರಿಯ ಸೇವೆಗೆ ಮೀಸಲಿರಿಸಿದ್ದಾರೆ"– ಈ ಒಂದು ಅಂಶ ಬಹು ಚೇತೋಹಾರಿಯಾಗಿದೆ.

"ಮುಂದೀ ಪರಿಗೃಹ ದೊರೆವುದು ಸುಲಭವೇನಲ್ಲಾ" ಎಂಬುದು ಈ ಕೀರ್ತನೆಯ ಮುಕ್ತಾಯದಸಾಲು ಆಗಿದ್ದು, ಇಡೀ ಕೀರ್ತನೆಗೆ ಹೊಸ ತಿರುವನ್ನು ಕೊಡುತ್ತದೆ.

"ಏಸೇಸು ಕಲ್ಪಕ್ಕು ಈಶನು ನೀನಯ್ಯಾ
ಆಸಾಸು ಕಲ್ಪಕ್ಕು ದಾಸನು ಇವನಯ್ಯಾ" ಎಂಬ

ಉಗಾಭೋಗವಂತೂ ಅವರ ದಾಸನಿಷ್ಠೆಗೆ ಸಾಕ್ಷಿಯಾಗಿದೆ. ದಾಸತ್ವವನ್ನು ಹಾಗೂ ದಾಸನಾಗುವದರ ಲಾಭಗಳನ್ನು ಹಲವು ಕೀರ್ತನೆಗಳಲ್ಲಿ ವರ್ಣಿಸಿದ್ದಾರೆ.

ರಾಮಾವತಾರವನ್ನು ಕುರಿತು ಹಾಡಿದ ಇವರ ಕೀರ್ತನೆಗಳು ಹೆಚ್ಚಾಗಿವೆ. ಒಂದು ಕೀರ್ತನೆಯಲ್ಲಂತು ಶ್ರೀರಾಮನ ಕಥೆಯನ್ನು ಬಹು ಮನೋಜ್ಞವಾಗಿ ಹಾಡಿದ್ದಾರೆ. ಶ್ರೀ ಹರಿಯ ದಶಾವತಾರಗಳನ್ನು ಬಹು ಸುಂದರವಾಗಿ ಒಂದು ಕೀರ್ತನೆಯಲ್ಲಿ ವರ್ಣಿಸಿದ್ದಾರೆ. ಇಡೀ ಕೀರ್ತನೆಯು ಶ್ರೀಹರಿಯು ದಶಾವತಾರಗಳಲ್ಲಿ ತೋರಿದ ಅದ್ಭುತಮಹಿಮೆಗಳಲ್ಲಿ ಹಲವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಹಲವಾರು ನೀತಿಯ ಕೀರ್ತನೆಗಳನ್ನು ಶ್ರೀವರದೇಶರು ರಚಿಸಿದ್ದು- ಇಂತಹ ಕೀರ್ತನೆಗಳು ಉದ್ಬೋಧಕವಾಗಿದೆ.

"ಪರರ ನಿನ್ನಂತೆ ಬಗೆಯಲೋ ಮನವೆ" ಎಂದು ಮನಕ್ಕೆ ಬೊಧಿಸುತ್ತ-

"ಧರಣಿಯ ಸರ್ವಪ್ರಾಣಿಗಳಲ್ಲಿಯೂ
ಮರೆಯಾದೆ ಕರುಣಾದಿ ವ್ಯವಹರಿಸುವದು"

ಎಂದು ಮುಂತಾಗಿ ಶ್ರೀಮದಾಚಾರ್ಯರು ಗೀತಾಭಾಷ್ಯದಲ್ಲಿ ಹೇಳಿದಂತೆ -"ತಸ್ಯ ಪ್ರಾಣ್ಯುಪಕಾರೇನ ಪ್ರೀತೋಭವತಿಕೇಶವಃ"- ಈ ಮುಂತಾಗಿ

ಶ್ರೀಮದಾಚಾರ್ಯರ ಉಪದೇಶಗಳನ್ನು ಅವರ ಕೀರ್ತನೆಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಅವರ ಕೀರ್ತನೆಗಳಲ್ಲಿ ತಾರತಮ್ಯೋಪೇತವಾದ ಭಕ್ತಿ ತಾನೇ ತಾನಾಗಿ ವಿಜೃಂಭಿಸಿದೆ.

"ಶ್ರವಣಂ ಕೀರ್ತನಂ ವಿಷ್ಣೋಃ
ಸ್ಮರಣಂ ಪಾದಸೇವನಂ
ಅರ್ಚನಂ ವಂದನಂ ದಾಸ್ಯಂ
ಸಖ್ಯ ಆತ್ಮನಿವೇದನಂ" ಎಂದು

ಶ್ರೀಮದ್ಭಾಗವತದಲ್ಲಿ ಹೇಳಿದಂತೆ ಭಕ್ತಿಯ ಎಲ್ಲ ಮಜಲುಗಳೂ ಇವರ ಕೀರ್ತನೆಗಳಲ್ಲಿ ಬಿತ್ತರಗೊಂಡಿವೆ. ಲಕ್ಷ್ಮೀದೇವಿ ಹಾಗೂ ವಾಯುದೇವರನ್ನು ಕುರಿತಾದ ಕೀರ್ತನೆಗಳಲ್ಲಿ ದಾಸರು ಪರಿಪರಿಯಾಗಿ ಅವರನ್ನು ಪ್ರಾರ್ಥಿಸುತ್ತ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ಕರುಣಿಸುವಂತೆ ಪ್ರಾರ್ಥಿಸಿದ್ದಾರೆ.

ಶ್ರೀ ಭಾರತೀ ದೇವಿಯರ, ಶ್ರೀ ಮಹದೇವರ, ಶ್ರೀ ಟೀಕಾರಾಯರ ಶ್ರೀ ಮಂತ್ರಾಲಯ ಪ್ರಭುಗಳ ಹಾಗೂ ಶ್ರೀ ವರದೇಂದ್ರರನ್ನು ಕುರಿತಾದ ಅವರ

ಕೀರ್ತನೆಗಳಲ್ಲಿ ಅವರ ಗುರು ಭಕ್ತಿ-ಸಿದ್ಧಾಂತ ದೀಕ್ಷೆ- ಸದಾಚಾರ ಶ್ರದ್ಧೆ, ಬಹು ಹೃದಯಂಗಮವಾಗಿ ಮೂಡಿ ಬಂದಿವೆ.

"ಶ್ರೀ ವರದೇಂದ್ರಾಖ್ಯಾನ ಉತ್ಸವ ವರ್ಣನೆ" ಎಂಬ ಶ್ರೀ ವರದೇಶರ ಇನ್ನೊಂದು ಕೀರ್ತನೆಯು ೪೦೦ ನುಡಿಗಳ ಸುದೀರ್ಘ ಕೀರ್ತನೆಯಾಗಿದ್ದು, ಲಿಂಗಸುಗೂರಿನಲ್ಲಿ ಶ್ರೀವರದೇಂದ್ರರ ಉತ್ಸವವನ್ನು ವರ್ಣಿಸುವ ಕೀರ್ತನೆಯಾಗಿದೆ. ದಾಸರು ಉತ್ಸವದಲ್ಲಿ ಸ್ವತಃ ಭಾಗವಹಿಸಿ, ಉತ್ಸವದ ಅಂದ ಚಂದಗಳನ್ನು ನೋಡಿ ಆನಂದಿಸಿ ಬರೆದ ಕೀರ್ತನೆಯಾಗಿದ್ದರಿಂದ ಬಹು ರಮ್ಯವಾಗಿದೆ. ಉತ್ಸವದ ಪ್ರತಿಯೊಂದು ಘಟ್ಟದ ವರ್ಣನೆ ಓದುಗರ ಮನಃ ಪಟಲದ ಮೇಲೆ ಮೂಡುವಂತೆ ಚಿತ್ರಿತವಾಗಿದೆ.

ಯತಿಗಳನ್ನು ಹಾಗೂ ದಾಸರನ್ನು ಕುರಿತಾದ ಅವರ ಕೀರ್ತನೆಗಳಂತೂ ಭಕ್ತಿಸಿಕ್ತವಾಗಿದ್ದು, ಆಯಾ ಯತಿಗಳ ಹಾಗೂ ದಾಸರ ಮಹಿಮೆಗಳನ್ನು ವ್ಯಕ್ತಪಡಿಸುತ್ತವೆ. ಶ್ರೀಸುಶೀಲೇಂದ್ರರು, ಶ್ರೀರಘುಕಾಂತರು, ಶ್ರೀರಘುದಾಂತರು ಮುಂತಾದ ಯತಿಗಳನ್ನು ಕುರಿತು ಕೀರ್ತನೆ ರಚಿಸಿದ್ದಾರೆ. ಅವರ ಮಹಾಮಹಿಮೆಗಳನ್ನು ಕೊಂಡಾಡಿದ್ದಾರೆ.

"ಶ್ರೀಹರಿದಾಸವೃಂದ ಸ್ತೋತ್ರದಲ್ಲಿ ಶ್ರೀಪುರಂದರದಾಸರನ್ನು ಪ್ರಾರಂಭಿಸಿ ಶ್ರೀ ವಿಜಯದಾಸರು, ಶ್ರೀಗೋಪಾಲದಾಸರು- ಶ್ರೀಜಗನ್ನಾಥದಾಸರು ನಂತರ ಮೋದವಿಠ್ಠಲರ ವರೆಗೆ ಎಲ್ಲದಾಸರನ್ನು ಸ್ಮರಿಸಿ, ಅವರೆಲ್ಲರಿಗೆ ವಂದಿಸಿದ್ದಾರೆ. ಶ್ರೀಪ್ರಾಣೇಶದಾಸರನ್ನೂ, ಶ್ರೀಗುರುಜಗನ್ನಾಥದಾಸರಾಯರನ್ನೂ ಸಹ ತಮ್ಮ ಕೀರ್ತನೆಗಳಲ್ಲಿ ಕೊಂಡಾಡಿದ್ದಾರೆ.

ಶ್ರೀವರದೇಶ ವಿಠ್ಠಲರ ಕೀರ್ತನ ಪ್ರಪಂಚ ವರ್ಣರಂಜಿತವಾಗಿದ್ದು- ಭಕ್ತಿಸಿಕ್ತವಾಗಿದೆ; ಸಿದ್ಧಾಂತಬೋಧಕವಾಗಿದ್ದರೂ- ಪಾಮರರಂಜಕವಾಗಿದೆ. ಸಾಹಿತ್ಯಕ ಗುಣಗಳನ್ನು ಮೈಗೂಡಿಸಿಕೊಂಡಿದ್ದು ಹಾಡಲು ಅನುಕೂಲವಾಗಿದೆ.

ಶ್ರೀಹರಿದಾಸಸಾಹಿತ್ಯಕ್ಕೆ ಹಾಗೂ ಕನ್ನಡ ಸಾಹಿತ್ಯಕ್ಕೆ ಶ್ರೀ ವರದೇಶ ವಿಠ್ಠಲರ ಕೀರ್ತನೆಗಳು ಮೌಲಿಕ ಕೊಡುಗೆಗಳಾಗಿವೆ ಎಂಬುದರಲ್ಲಿ ಸಂದೇಹವಿಲ್ಲ.

## ಶ್ರೀ ಸುಂದರ ವಿಠಲರು

(೧೮೯೩-೧೯೬೯)

ಶ್ರೀಸುಂದರವಿಠಲಾಂಕಿತರೆಂದು ಪ್ರಸಿದ್ಧರಾದ ಗೋರೇಬಾಳ ಹನುಮಂತರಾಯರದು ಇಪ್ಪತ್ತನೇ ಶತಮಾನದ ದಾಸಸಾಹಿತ್ಯದಲ್ಲಿ ಬಹುದೊಡ್ಡ ಹೆಸರು. ಅವರು ಹೆಚ್ಚು ಕೃತಿಗಳನ್ನು ರಚಿಸದೇ ಇದ್ದರೂ. ತಮ್ಮ ಹಿಂದೆ ಬದುಕಿ ಬಾಳಿದ ಹಲವಾರು ದಾಸರ ಕೃತಿಗಳನ್ನು ಸಂಶೋಧಿಸಿ, ಪ್ರಕಟಿಸಿ ಮನೆ ಮನೆಗೆ ತಲುಪಿಸಿದ್ದು ಒಂದು ದೊಡ್ಡ ಸಾಧನೆ.

ಗೋರೇಬಾಳ ಎಂಬುದು ಒಂದು ಚಿಕ್ಕ ಹಳ್ಳಿ. ರಾಯಚೂರು ಜಿಲ್ಲೆಗೆ ಸೇರಿದ ಲಿಂಗಸುಗೂರು ತಾಲೂಕಿನಲ್ಲಿ ಒಂದು ಗ್ರಾಮ. ಬಹುಶಃ ಅಲ್ಲಿ ಇರುವ ಈಶ್ವರ ದೇವಾಲಯದಿಂದ ಈ ಗ್ರಾಮಕ್ಕೆ ಆ ಹೆಸರು ಬಂದಿರಬಹುದು. ಗೊರವ ಎಂದರೆ ಈಶ್ವರ ಎಂಬ ಹೆಸರೂ ಇದೆ. ಶ್ರೀವೆಂಕಣ್ಣ ಕುಲಕರ್ಣಿ ಎಂಬುವರು ಹನುಮಂತರಾಯರ ತಂದೆಯವರು. ಇವರು ವೃತ್ತಿಯಿಂದ ಕುಲಕರ್ಣಿಯವರು. ದೈವಭಕ್ತರೂ ಆಗಿದ್ದರು. ಹಿಂದಿನಿಂದಲೇ ಜ್ಞಾನ ಸಂಪತ್ತು ಇವರಿಗೆ ಅನುಗ್ರಹ ರೂಪದಲ್ಲಿ ಬಂದಿತ್ತು. ಅದೊಂದು ರೋಚಕ ಪ್ರಸಂಗ.

ಹನುಮಂತರಾಯರ ಹಿಂದೆ ಎಂಟನೇ ತಲೆಮಾರಿನಲ್ಲಿ ಕುಪ್ಪಣ್ಣ - ತುಳಸಮ್ಮ ಎಂಬ ದಂಪತಿಗಳಿದ್ದರು. ಆಗ ಪರಮ ಪೂಜ್ಯರೂ. ಅಪರೋಕ್ಷ ಜ್ಞಾನಿಗಳೂ ಆದ ಶ್ರೀ ವಾದಿರಾಜರು ಪೀಠಸ್ಥರಾಗಿದ್ದ ಕಾಲ. ಶ್ರೀ ವಾದಿರಾಜರು ಈ ದಂಪತಿಗಳ ಭಕ್ತಿಗೆ ಮೆಚ್ಚಿ ಇವರಿಗೆ ಒಂದು ಹಯಗ್ರೀವ ಸಾಲಿಗ್ರಾಮವನ್ನು ಕೊಟ್ಟಿದ್ದರು. ಅಂದಿನಿಂದ ಈ ಮನೆತನದಲ್ಲಿ ಬಂದವರೆಲ್ಲರೂ ಈ ಸಾಲಿಗ್ರಾಮ ರೂಪಿ ಹಯಗ್ರೀವ ದೇವರ ಉಪಾಸಕರಾಗಿದ್ದರು. ತಲೆ ತಲಾಂತರದಿಂದ ಈ

ಉಪಾಸನೆ ಮಾಡುತ್ತ ಬಂದಿದ್ದರ ಪುಣ್ಯದ ಪ್ರಭಾವದಿಂದಲೋ ಎನೋ ಎಂಬಂತೆ ಹನುಮಂತರಾಯರಂತಹ ಸತ್ಪುತ್ರನೂ, ಜ್ಞಾನಿಯೂ ಈ ವಂಶದಲ್ಲಿ ಜನಿಸುವ ಭಾಗ್ಯ ಬಂದಿತೆನ್ನಬಹುದು.

ಕುಲಕರ್ಣಿ ವೆಂಕಣ್ಣನವರೂ ದಾಸಸಾಹಿತ್ಯದಲ್ಲಿ ಬಹು ಆಸಕ್ತಿ-ವುಳ್ಳವರಾಗಿದ್ದರು. ಆಗ ಲಿಂಗಸುಗೂರಿನಲ್ಲಿ ಶ್ರೀರಾಮದಾಸರು ಇದ್ದರು. ಇವರು ಗುರು ಪ್ರಾಣೇಶದಾಸರ ಸೋದರ ಅಳಿಯಂದಿರಾಗಿದ್ದರು. ಅವರಿಂದ ಶ್ರೀಶಪ್ರಾಣೇಶವಿಠ್ಠಲ ಎಂದು ಅಂಕಿತವನ್ನು ಪಡೆದಿದ್ದರು. ಅನೇಕ ಪದಸುಳಾದಿಗಳನ್ನು ರಚಿಸಿದ್ದಾರೆ. ವೆಂಕಣ್ಣನವರು ಶ್ರೀರಾಮದಾಸರ ನಿಕಟವರ್ತಿಗಳಾದರು. ಆಗಾಗ ಅವರ ಬಳಿ ಹೋಗಿ, ಅವರೊಡನೆ ಧಾರ್ಮಿಕ ಚರ್ಚೆಗಳಲ್ಲಿ ತೊಡಗುತ್ತಿದ್ದರು. ಹಾಗೂ ಅವರಿಂದ ತತ್ತ್ವೋಪದೇಶ ಪಡೆಯುತ್ತಿದ್ದರು. ಅವರಿಬ್ಬರ ಬಾಂಧವ್ಯ ಇಷ್ಟಕ್ಕೆ ನಿಲ್ಲದೆ ವೆಂಕಣ್ಣನವರು ಶ್ರೀ ರಾಮದಾಸರಿಂದ 'ಗುರುಶ್ರೀಶ ಪ್ರಾಣೇಶ ವಿಠಲ' ಎಂದು ಅಂಕಿತವನ್ನು ಪಡೆದರು.

ವೆಂಕಣ್ಣನವರಿಗೆ ಇಬ್ಬರು ಗಂಡು ಹಾಗೂ ಇಬ್ಬರು ಹೆಣ್ಣು ಮಕ್ಕಳು. ಹನುಮಂತರಾಯರೇ ಜ್ಯೇಷ್ಠಪುತ್ರರಾಗಿದ್ದರು. ಹನುಮಂತರಾಯರಿಗೆ ಐದನೇ ವಯಸ್ಸಿನಲ್ಲಿಯೇ ಉಪನಯನವಾಗಿ, ಅವರು ಗಾಯತ್ರಿಗೆ ಅಧಿಕಾರಿಗಳಾದರು. ಅಂದಿನಿಂದಲೆ ಅವರು ದಾಸಸಾಹಿತ್ಯದ ಅಭ್ಯಾಸವನ್ನು ಪ್ರಾರಂಭಿಸಿದರು. ಲಿಂಗಸುಗೂರಿನ ಶ್ರೀ ಪ್ರಾಣೇಶದಾಸರ ವಂಶೀಕರಾದ ಶ್ರೀ ರಾಮಣ್ಣ ಎಂಬವರಿಗೆ ಹನುಮಂತರಾಯರ ಅಕ್ಕನನ್ನು ವಿವಾಹ ಪೂರ್ವಕ ಕೊಡಲಾಗಿತ್ತು. ಆ ಸಾಧ್ವಿಯು ತೀರಿ ಹೋದನಂತರ ಹನುಮಂತರಾಯರ ಸೋದರತ್ತೆಯನ್ನು ರಾಮಣ್ಣನವರಿಗೆ ವಿವಾಹ ಮಾಡಿಕೊಟ್ಟಿತ್ತು.

ಶ್ರೀಪ್ರಾಣೇಶದಾಸರ ವಂಶಿಕರಾದ ಶ್ರೀರಾಮಣ್ಣನವರ ಬಳಿ ಹನುಮಂತ-ರಾಯರು ಹಾಗು ಅವರ ತಮ್ಮನು ವಿದ್ಯಾಭ್ಯಾಸಕ್ಕಾಗಿ ಇರತೊಡಗಿದರು. ಅವರ ಮನೆಯಲ್ಲಿ ಹನುಮಂತರಾಯರಿಗೆ ಅತ್ಯುತ್ತಮ ಧಾರ್ಮಿಕ ಶಿಕ್ಷಣ

ದೊರೆಯುವಂತಾಯಿತು. ಅವರು ತಮ್ಮ ಜೀವನದುದ್ದಕ್ಕೂ ನಡೆಸಿಕೊಂಡು ಬಂದ ಹರಿದಾಸಸಾಹಿತ್ಯದ ಪ್ರಚಾರ-ಪ್ರಸಾರ - ಅಧ್ಯಯನ, ಸಂಪಾದನೆ, ಗ್ರಂಥರಚನೆ ಮುಂತಾದ ಹಲವು ಮುಖದ ಯಶಸ್ವಿಕಾರ್ಯಕ್ಕೆ ಇದು ಅವರಿಗೆ ಉತ್ತಮ ಕಾರ್ಯಕ್ಷೇತ್ರವಾಯಿತು.

ರಾಮಣ್ಣನವರ ಮನೆಯಲ್ಲಿ ಹನುಮಂತರಾಯರಿಗೆ ಇನ್ನೊಬ್ಬ ಆಧ್ಯಾತ್ಮಜೀವಿಯ ಸಹಯೋಗ ಲಭಿಸಿದ್ದು ದೈವಸಂಕಲ್ಪವೇ ಸರಿ. ಅವರೇ ಸಂತೆಕೆಲ್ಲೂರಿನ ಶ್ರೀಸ್ವಾಮಿರಾಯರು. ಮುಂದೆ ಇವರೇ ಶ್ರೀಗುರುಜಗನ್ನಾಥ ವಿಠಲರಿಂದ ಅಂಕಿತಪಡೆದು ವರದೇಶವಿಠಲಾಂಕಿತರಾದರು. ಬಾಲ್ಯದಲ್ಲಿಯೇ ಇವರ ಮಾತೋಶ್ರೀಯವರು ಕಾಲಾವಾದ್ದದ್ದರಿಂದ ಇವರೂ ಸಹ ರಾಮಣ್ಣನವರ ಮನೆಯಲ್ಲಿ ವಾಸಿಸುತ್ತಿದ್ದರು. ಇವರಿಗೆ ಹಲವಾರು ಭಾಷೆಗಳು ಕರಗತವಾಗಿದ್ದವು. ಹಾಗೂ ಲಿಂಗಸುಗೂರಿನಲ್ಲಿ ಖ್ಯಾತಿವೆತ್ತ ವಕೀಲರಾಗಿದ್ದರು. ಇವರ ಸಖ್ಯ ಸಹವಾಸಗಳಲ್ಲಿ ಬೆಳೆದ ಹನುಮಂತರಾಯರೂ ಸಹ ಹಲವಾರು ಭಾಷೆಗಳಲ್ಲಿ ಪ್ರಭುತ್ವ ಪಡೆದಿದ್ದರು ; ಹಾಗೂ ಪ್ರಸಿದ್ಧ ವಕೀಲರಾಗಿದ್ದರು.

ಇವರೀರ್ವರೂ ವೃತ್ತಿಯಿಂದ ವಕೀಲರಾಗಿದ್ದರೂ ಪ್ರವೃತ್ತಿಯಿಂದ ಹರಿದಾಸದ ಅಧ್ಯಯನ-ಚಿಂತನೆ, ಸಂಗ್ರಹ ಮುಂತಾದ ಆಧ್ಯಾತ್ಮಿಕ ವಿಷಯಗಳಲ್ಲಿ ತಮ್ಮ ಕಾಲವನ್ನು ವ್ಯಯಿಸುತ್ತಿದ್ದರು.

ಸ್ವಾಮಿರಾಯರ ಬಂಧುಗಳಾದ ಕುಪ್ಪಣ್ಣ ಎನ್ನುವವರು ಹನುಮಂತರಾಯರಿಗೆ ತಮ್ಮ ಮಗಳನ್ನು ಕೊಟ್ಟಿದ್ದರು. ಈ ದಂಪತಿಗಳಿಗೆ ಒಂಬತ್ತು ಜನ ಹೆಣ್ಣುಮಕ್ಕಳಿದ್ದರು. ಇವರಿಗೆ ಗಂಡುಸಂತಾನ ಇರಲಿಲ್ಲ. ಅವರು ತಮ್ಮ ಹಿರಿಯ ಮಗಳನ್ನು ಪ್ರಾಣೇಶದಾಸರ ವಂಶಿಕರಾದ ಕುಪ್ಪೆರಾಯರೆಂಬುವರಿಗೆ ವಿವಾಹ ಮಾಡಿಕೊಟ್ಟಿದ್ದರು. ಸುಳಾದಿ ಅನ್ನುವದರಲ್ಲಿ ಪ್ರಖ್ಯಾತರಾಗಿದ್ದ ಅವರು ಸುಳಾದಿ ಕುಪ್ಪೇರಾಯರೆಂದೇ ಖ್ಯಾತನಾಮರಾಗಿದ್ದರು.

ಹನುಮಂತರಾಯರು ಜೀವಿಸಿದ್ದಾಗಲೇ ಅವರ ಏಳು ಮಂದಿ ಹೆಣ್ಣುಮಕ್ಕಳೂ ಹಾಗೂ ಅವರ ಧರ್ಮಪತ್ನಿಯು ತೀರಿಕೊಂಡರು. ಅವರಿಗೆ ಜೀವನ ಬಹು ಜಿಗುಪ್ಸೆಯೆನ್ನಿಸಿತು. ಬಾಳು ಅಸಹ್ಯವಾಯಿತು. ಹೀಗಾಗಿ ಶ್ರೀ ಹರಿಯೇ ಪರಮಾಪ್ತನಾದ ಅನಿಮಿತ್ತ ಬಂಧು ಎಂಬ ಅರಿವು ಅವರಿಗೆ ಮನದಟ್ಟಾಯಿತು. ಇಂಥ ದುಃಖಗಳ ಮಧ್ಯದಲ್ಲಿಯೂ ಅವರ ಹರಿದಾಸಸಾಹಿತ್ಯ ಸೇವೆಗೆ ಕುಂದುಬರಲಿಲ್ಲ.

## ಶ್ರೀ ವರದೇಂದ್ರ ಹರಿದಾಸಸಾಹಿತ್ಯ ಮಂಡಳ

ಹರಿದಾಸಸಾಹಿತ್ಯದ ಗ್ರಂಥ ಪ್ರಕಾಶನಕ್ಕಾಗಿಯೇ ಅವರು ಒಂದು ಸಂಸ್ಥೆಯನ್ನು ಸ್ಥಾಪಿಸಲು ನಿರ್ಧರಿಸಿದರು. 'ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಳ' ಅವರ ಕನಸಿನ ಕೂಸು. ಕ್ರಿ. ಶ. ೧೯೨೬ ರಲ್ಲಿಯೇ ಅವರು ಈ ಮಂಡಳವನ್ನು ಸ್ಥಾಪಿಸಿ, ತನ್ಮೂಲಕ ಅಪ್ರಕಟಿತವಾಗಿದ್ದ ಅಸಂಖ್ಯ ದಾಸಸಾಹಿತ್ಯದ ಕೃತಿಗಳನ್ನು ಪ್ರಕಟಪಡಿಸಿರುವರು. ಇಂದು ಈ ಸಂಸ್ಥೆ ಹೆಮ್ಮರವಾಗಿ ಬೆಳೆದಿದೆ.

ಕರ್ನಾಟಕದ ತುಂಬ ಸಂಚರಿಸಿ, ಅವರಿವರ ಮನೆಯಲ್ಲಿ ಧೂಳಿನಲ್ಲಿ ಮುಚ್ಚಿಹೋಗಿದ್ದ ಹಲವಾರು ದಾಸರ ಪದ, ಪದ್ಯ, ಸುಳಾದಿ, ಉಗಾಭೋಗ, ಹಾಗೂ ಇನ್ನಿತರ ಗ್ರಂಥಗಳನ್ನು ಸಂಗ್ರಹಿಸಿದರು. ಅವುಗಳನ್ನು ಕ್ರಮಬದ್ಧವಾಗಿ ಜೋಡಿಸಿ ವಿದ್ವಾಂಸರಿಂದ ಪರಿಷ್ಕರಿಸಿ ಶ್ರೀಪಾದಂಗಳವರಿಂದ ಮುನ್ನುಡಿ ಬರೆಸಿ ಅವುಗಳನ್ನು ಅಚ್ಚುಹಾಕಿಸಿದರು. ಈ ಕಾರ್ಯಕ್ಕಾಗಿ ತಮ್ಮ ಆಸ್ತಿಯನ್ನು ಸಹ ಕಳೆದುಕೊಂಡರು. ಸ್ವಲ್ಪವೂ ಚಿತ್ತ- ಚಂಚಲರಾಗದೆ ಅಹೋರಾತ್ರಿ ಇದೇ ಕಾರ್ಯಕ್ಕಾಗಿ ದುಡಿದರು.

ಈ ಮಂಡಳದ ಮುಖಾಂತರ ಅವರು ಪ್ರಕಟಿಸಿದ ಹರಿದಾಸಸಾಹಿತ್ಯ ಗ್ರಂಥಗಳ ಸಂಖ್ಯೆ ನೂರಕ್ಕೂ ಹೆಚ್ಚಾಗಿದೆ. ಶ್ರೀ ಪ್ರಾಣೇಶದಾಸರ ಕೃತಿಗಳಿಂದ ಆರಂಭಿಸಿ ದಾಸಸಾಹಿತ್ಯದ ಮೇರು ಕೃತಿಯಾದ ಶ್ರೀ ಹರಿಕಥಾಮೃತಸಾರದ ವ್ಯಾಖ್ಯಾನವಾದ ಪಂಚರತ್ನ ಪ್ರಕಾಶಿಕಾ (ಆರು ಭಾಗಗಳು)ವನ್ನು ಒಳಗೊಂಡಂತೆ ಹತ್ತು ಸಹಸ್ರ ಪುಟಕ್ಕೂ ಮೀರಿ ಪ್ರಮುಖ ಹರಿದಾಸರ ಕೃತಿಗಳನ್ನು ಪ್ರಕಟಿಸಿದ್ದಾರೆ.

ಹನುಮಂತರಾಯರು ಈ ಮಹಾನ್‌ಕಾರ್ಯವನ್ನು ಕೈಗೆತ್ತಿಕೊಳ್ಳದಿದ್ದರೆ ಇಂದು ಬೃಹದಾಕಾರವಾಗಿ ಬೆಳೆದು ನಿಂತ ಹರಿದಾಸಸಾಹಿತ್ಯವು, ಇಷ್ಟು ಬೆಳೆಯಲು ಸಾಧ್ಯವಿರಲಿಲ್ಲ ಎಂದರೆ ಅತಿಶಯೋಕ್ತಿಯಲ್ಲ.

ಅವರು ದಾಸಅಂಕಿತವನ್ನು ಪಡೆದರು. ಕೃತಿಗಳ ರಚನೆಗೆ ಮನಸ್ಸು ಮಾಡದೆ ಹಲವಾರು ಹರಿದಾಸರ ಅಪ್ರಕಟಿತ ಗ್ರಂಥಗಳನ್ನು ಪ್ರಕಟಿಸಿ ಜನರ ಮುಂದೆ ಇಟ್ಟರು. ತನ್ಮೂಲಕ ಅವರು ಗೈದ ಕನ್ನಡಸಾಹಿತ್ಯ ಸೇವೆ ಬಹು ಅಪರೂಪವಾದುದು. ಅವರು ಸ್ವತಂತ್ರವಾಗಿ ರಚಿಸಿದ ಕೀರ್ತನೆಗಳು ಬೆರಳೆಣಿಕೆಯಷ್ಟು ಮಾತ್ರ. ಅವರಿಂದ ಪ್ರಕಟಿತವಾದ ಸಾಹಿತ್ಯ ವಿಪುಲವಾದದ್ದರಿಂದ ಅವುಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ.

**(ಅ) ಸುಳಾದಿಗಳು ಹಾಗೂ ಸ್ತೋತ್ರ ಸಂಗ್ರಹ**

೧. ಪುರಂದರದಾಸರು ಮತ್ತು ಹರಿದಾಸರ ಪೀಳಿಗೆ

೨. ಮೋಕ್ಷಮಾರ್ಗ ಪ್ರದೀಪಿಕೆ

೩. ವಿಜಯದಾಸರ ಸ್ತೋತ್ರ ಭಾಗ ಸುಳಾದಿ

೪. ಪ್ರಾರ್ಥನಾ ಭಾಗ ಸುಳಾದಿ

೫. ಉಪಾಸನಾ ಭಾಗ ಸುಳಾದಿ

೬. ಸಾಧನಾ ಭಾಗ ಸುಳಾದಿ ( ಎರಡು ಭಾಗಗಳು)

೭. ಪ್ರಮೇಯ ಭಾಗ ಸುಳಾದಿ

೮. ತೀರ್ಥ ಕ್ಷೇತ್ರ ಮಹಿಮಾ ಸುಳಾದಿ

೯. ಚಕ್ರಾಬ್ಜಮಂಡಳ ಸುಳಾದಿ

೧೦. ವಿಜಯದಾಸರ ಪದಗಳು (ಎರಡು ಭಾಗಗಳು)

೧೧. ವಿಜಯದಾಸರ ಚರಿತ್ರೆ

೧೨. ಶ್ರೀ ವೆಂಕಟೇಶ ಮಹಾತ್ಮ್ಯ ಸುಳಾದಿ

೧೩. ಹನುಮತ್ ವೃತ ಸುಳಾದಿ

೧೪. ಗೋಪಾಲ ವಿಠಲರ ಸುಳಾದಿ

೧೫. ಪುರಂದರ ದಾಸರ ಸುಳಾದಿ

೧೬. ಗೋಪಾಲದಾಸರ ಶಿಷ್ಯ ಪ್ರಶಿಷ್ಯರ ಸುಳಾದಿ

೧೭. ವೇಣುಗೋಪಾಲ ದಾಸರ ಶಿಷ್ಯ ಪ್ರಶಿಷ್ಯರ ಸುಳಾದಿ

೧೮. ಗೋಪಾಲದಾಸಪರ್ಯಾದಿ ಹರಿದಾಸರ ಪದ

೧೯. ಆದ್ಯಾದಿ ಹರಿದಾಸರ ಪದ ಸುಳಾದಿ

೨೦. ಶ್ರೀ ಪಾದರಾಜಾದಿಹರಿದಾಸರ ಸ್ತೋತ್ರ ಮತ್ತು ಪದ

೨೧. ವಾಸುದೇವ ವಿಠಲರ ಪದಗಳು

೨೨. ಗುರುವಿಜಯ ವಿಠಲರ ಕೃತಿಗಳು

೨೩. ರಾಘವೇಂದ್ರ ಗುರುಸಾರ್ವಭೌಮ

೨೪. ಇಂದಿರೇಶ ವಿಠಲರ ಕೃತಿಗಳು

೨೫. ಲಕ್ಷ್ಮೀ ಲೀಲಾ ವೃತಾ

೨೬. ಸೃಷ್ಟಿ ಪ್ರಕರಣ ಸುಳಾದಿ

**(ಬ) ಗದ್ಯ ಗ್ರಂಥಗಳು**

೧. ಸದಾಚಾರ

೨. ಪಂಚಭೇದ

೩. ಭ್ರಹ್ಮ ಕರ್ಮ

೪. ಆಧ್ಯಾತ್ಮ ಮಾಲಾ (ಎರಡು ಭಾಗಗಳು)

೫. ಸಂಧ್ಯೋಪಾಸನೆ (ಎರಡು ಭಾಗಗಳು)

೬. ಆಧ್ಯಾತ್ಮಿಕ ವಿವಿಧ ನಿಬಂಧನೆಗಳು

## (ಕ) ಇತರ ಧಾರ್ಮಿಕ ಕಾವ್ಯಗಳು

೧. ಹರಿಕಥಾಮೃತಸಾರ - ಸಂಗ್ರಹ

೨. ಹರಿವಾಯುಸ್ತುತಿ

೩. ಪ್ರಾಕೃತ ರಾಘವೇಂದ್ರ ಸ್ತೋತ್ರ

೪. ಶ್ರೀ ಅನಂತನ ವ್ರತ-ಕಥಾ

೫. ಮುಯ್ಯದ ಪದ

೬. ಶ್ರೀ ಕೃಷ್ಣ ಲೀಲಾಮೃತ

೭. ಸೀತಾ ಸ್ವಯಂವರ

೮. ಹನುಮದ್ವಿಲಾಸ

೯. ಭೀಮಸೇನ ವಿಲಾಸ

೧೦. ವೀರಭದ್ರ ವಿಲಾಸ

೧೧. ಅನಿರುದ್ಧ ವಿಲಾಸ

೧೨. ವಶಿಷ್ಠ - ವಿಶ್ವಾಮಿತ್ರ ಆಖ್ಯಾನ

೧೩. ಶ್ರೀಕೃಷ್ಣ ಜಯಂತಿ - ಕಥಾ

೧೪. ಮನ್ಮಥ ವಿಲಾಸ

## (ಡ) ಮಹಾಕಾವ್ಯ

ಶ್ರೀ ಸುಮಧ್ವವಿಜಯ (ವರ ಸುಂದರ ವೆಂಕಟೇಶ ಪ್ರಣೀತ)

## (ಇ) ಶ್ರೀಹರಿಕಥಾಮೃತಸಾರಟೀಕಾ

ಹರಿಕಥಾಮೃತಸಾರ ಪಂಚರತ್ನಟೀಕಾ (ಆರು ಸಂಪುಟಗಳು)

ಹನುಮಂತರಾಯರು ಜೀವನದುದ್ದಕ್ಕೂ ಸಾಧನೆ ಮಾಡಿದ ಮಹಾನ್, ಜೀವಿ, ಲಿಂಗಸುಗೂರಿನಲ್ಲಿ ಶ್ರೀ ಭೀಮಸೇನ ದೇವರ ಗುಡಿ ಇದೆ. ಆ ಭಾಗದಲ್ಲಿ ಕುಪ್ಪಿ ಭೀಮನ ದೇವಸ್ಥಾನ ಎಂಬುದಾಗಿ ಇದು ಪ್ರಸಿದ್ಧಿಯಾಗಿದೆ. ಬಾಲ್ಯದಿಂದಲೂ,

ಹನುಮಂತರಾಯರು ಕುಪ್ಪಿಭೀಮನ ಆರಾಧಕರಾಗಿದ್ದರು. ಆ ದೇವರಿಗೆ ಶಾಶ್ವತವಾದ ಸೇವೆಯನ್ನು ಮಾಡುವ ಉದ್ದೇಶದಿಂದ ಕುಪ್ಪಿ ಭೀಮನ ಹೆಸರಿನಲ್ಲಿ ಒಂದು ಸುಂದರವಾದ ರಥವನ್ನು ಮಾಡಿಸಿಕೊಟ್ಟಿದ್ದಾರೆ. ಅದೇ ರೀತಿ ಸಾವಿರಾರು ರೂಪಾಯಿಗಳನ್ನು ಖರ್ಚು ಮಾಡಿ ಮಾನವಿ ಶ್ರೀ ಜಗನ್ನಾಥದಾಸರಿಗೂ ಬಹು ಸುಂದರವಾದ ರಥವನ್ನು ಮಾಡಿಸಿಕೊಟ್ಟಿದ್ದಾರೆ. ಇದು ಶಾಸ್ತ್ರೋಕ್ತವಾಗಿದ್ದು, ಬಹು ಆಕರ್ಷಕವಾಗಿದೆ. ಈ ಎರಡೂ ಸ್ಥಳಗಳಲ್ಲಿ ಇಂದಿಗೂ ರಥೋತ್ಸವವು ಜರುಗುತ್ತಿದ್ದು, ಸಾವಿರಾರು ಜನರು ಈ ಉತ್ಸವದಲ್ಲಿ ಭಾಗವಹಿಸುತ್ತಾರೆ.

ಹನುಮಂತರಾಯರು ಎಂದಿಗೂ ಪ್ರಶಸ್ತಿ ಸನ್ಮಾನಗಳನ್ನು ಬಯಸಿದವರಲ್ಲ. ಆದರು ಹಲವಾರು ಪ್ರಶಸ್ತಿ ಸನ್ಮಾನಗಳು ಇವರನ್ನು ಹುಡುಕಿಕೊಂಡು ಬಂದಿವೆ.

ಅಯೋಧ್ಯೆಯ ಸಂಸ್ಕೃತ ಕಾರ್ಯಾಲಯದವರು ಇವರಿಗೆ 'ಸಾಹಿತ್ಯ ಸೇವಾಲಂಕಾರ' ಎಂಬ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿದ್ದಾರೆ. ರಾಯಚೂರು ನಗರದ ಕನ್ನಡ ಸಂಘದವರು ಸಹ ಮಾನಪತ್ರವನ್ನು ಅರ್ಪಿಸಿ ಇವರನ್ನು ಗೌರವಿಸಿದ್ದಾರೆ.

ಹನುಮಂತರಾಯರು ವಕಿಲಿ ವೃತ್ತಿಯನ್ನೇ ಅವಲಂಬಿಸಿ ಜೀವಿಸಿದ್ದರೆ ಹೇರಳ ದ್ರವ್ಯವನ್ನು ಸಂಪಾದಿಸಿ, ಬಹುದೊಡ್ಡ ಶ್ರೀ ಮಂತರಾಗಲು ಸಾಧ್ಯವಿತ್ತು. ಹಣಕ್ಕಾಗಿ ಅವರು ಎಂದೂ ಹೆಣಗಾಡಲಿಲ್ಲ. ಪ್ರಸಿದ್ಧಿಗಾಗಿ ಪರಿತಪಿಸಲಿಲ್ಲ. ದಾಸಸಾಹಿತ್ಯದ ಪ್ರಚಾರ ಪ್ರಸಾರಕ್ಕಾಗಿಯೇ ತಮ್ಮ – ಆಯುಷ್ಯವನ್ನೇ ಮೀಸಲಿಟ್ಟ ಮಹಾ ಚೇತನ ಅವರು. ಶ್ರೀ ವರದೇಂದ್ರ ಹರಿದಾಸಸಾಹಿತ್ಯ ಮಂಡಳದ ಏಳಿಗೆಗಾಗಿ ಅವರು ಬಹಳ ಪರಿಶ್ರಮಪಟ್ಟರು. ತಮ್ಮ ತನು ಮನ ಧನವನ್ನೆಲ್ಲ ಮಂಡಳಕ್ಕಾಗಿ ಅರ್ಪಿಸಿದ ತ್ಯಾಗಮಯ ಜೀವನ ಹನುಮಂತರಾಯರು. ಕೊನೆಗೆ ಅನಾರೋಗ್ಯದಿಂದ ಪೀಡಿತರಾದಾಗ ಮಂಡಳದ ಉಸ್ತುವಾರಿಯನ್ನು ಬೇರೆಯವರಿಗೆ ಒಪ್ಪಿಸಿದರು. ಮಂಡಳವು ಮುಂದುವರೆಯುವಂತೆ ವ್ಯವಸ್ಥೆ ಮಾಡಿದ್ದರಿಂದ ಸಮಾಧಾನದ ನಿಟ್ಟುಸಿರು ಬಿಟ್ಟರು.

ಬರಬರುತ್ತ ಅವರ ಆಯುಷ್ಯ ಕ್ಷೀಣಿಸತೊಡಗಿತು. ತಮ್ಮ ಅಂತಿಮ ದಿನಗಳನ್ನು ಹೈದರಾಬಾದದಲ್ಲಿ ಇರುವ ತಮ್ಮ ಅಳಿಯಂದಿರ ಮನೆಯಲ್ಲಿ ಕಳೆದರು. ಕ್ರಿ.ಶ. ೧೯೬೯ ರಲ್ಲಿ ಇಹಲೋಕದ ವ್ಯಾಪಾರ ಮುಗಿಸಿ ಶ್ರೀ ಹರಿಯ ಪಾದವನ್ನು ಸೇರಿದರು.

ಹರಿದಾಸಸಾಹಿತ್ಯದ ಪ್ರಚಾರ ಪ್ರಸಾರಗಳಿಗಾಗಿ ಅಹರ್ನಿಶ ದುಡಿದ ಹನುಮಂತರಾಯರ ಆತ್ಮವು ಅನಂತನಲ್ಲಿ ಲೀನವಾದರೂ, ಅವರು ಮಾಡಿದ ಶ್ರಮ, ಪಟ್ಟಪಾಡು ವ್ಯರ್ಥವಾಗಿಲ್ಲ. ಅವರು ಸ್ಥಾಪಿಸಿದ ಹರಿದಾಸಮಂಡಳ ಇನ್ನೂ ಜೀವಂತವಾಗಿದೆ. ಅವರು ಪ್ರಾರಂಭಿಸಿದ ಕಾರ್ಯವನ್ನು ಮಂಡಳದ ಇಂದಿನ ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳಾದ ಶ್ರೀ ಶ್ರೀನಿವಾಸದಾಸರು (ಸೀಮಾಮಾ) ಇಂದಿಗೂ ಸಮರ್ಥವಾಗಿ ಮುಂದುವರೆಸಿಕೊಂಡು ಬಂದಿದ್ದಾರೆ. ಹನುಮಂತರಾಯರ ಕಾಲದಲ್ಲಿ ಪ್ರಕಟಗೊಂಡ ದಾಸಸಾಹಿತ್ಯದ ಅಮೂಲ್ಯ ಗ್ರಂಥಗಳು ಅವರ ನಂತರ ಮಂಡಳದ ವತಿಯಿಂದ ಪುನರ್ಮುದ್ರಣ ಕಂಡಿವೆ.

ಹನುಮಂತರಾಯರು ನಮ್ಮಿಂದ ಅಗಲಿದರು. ಅವರು ಪ್ರಕಟಪಡಿಸಿ , ಪ್ರಚಾರಕ್ಕೆ ತಂದ ಹರಿದಾಸಸಾಹಿತ್ಯವು ಇಂದಿಗೂ ಜೀವಂತವಾಗಿದೆ ; ಮುಂಬರುವ ದಿನಗಳಲ್ಲಿ ಜೀವಂತವಾಗಿರುವದರಲ್ಲಿ ಸಂದೇಹವಿಲ್ಲ. ಹರಿದಾಸಸಾಹಿತ್ಯದ ರಸಋಷಿಯಾಗಿ ಬಾಳಿದ ಅವರ ಬದುಕು ಸಾರ್ಥಕವಾದುದು.

ಈ ಸಂಪುಟದ ಕಾರ್ಯವನ್ನು ನನಗೆ ವಹಿಸಿ ಕೊಟ್ಟದ್ದಕ್ಕಾಗಿ ಕರ್ನಾಟಕ ಘನಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರಿಗೆ ನನ್ನ ಅನಂತ ಕೃತಜ್ಞತೆಗಳು.

ಈ ಸಂಪುಟವನ್ನು ಸಿದ್ಧಪಡಿಸುವಲ್ಲಿ ನನಗೆ ತುಂಬಾ ಸಹಾಯ ಮಾಡಿ, ಮಾರ್ಗದರ್ಶನ ನೀಡಿ, ಗ್ರಂಥಗಳನ್ನು ಪೂರೈಸಿ, ನನ್ನ ಅನೇಕ ಅಡಚಣೆಗಳನ್ನು ತಡೆದುಕೊಂಡು ಸಹಕರಿಸಿದ ಕಾರ್ಯವಾಹಕರಾದ ಶ್ರೀಮತಿ ಡಾ॥ಟಿ.ಎನ್. ನಾಗರತ್ನ ಅವರಿಗೆ ನನ್ನ ಹಾರ್ದಿಕ ಧನ್ಯವಾದಗಳು.

ಈ ಗ್ರಂಥವನ್ನು ಸಿದ್ಧಪಡಿಸುವಾಗ ನನಗೆ ಅಮೂಲ್ಯ ಸಲಹೆಗಳನ್ನು ನೀಡಿ ಸಾಂದರ್ಭಿಕ ಆಕರ ಗ್ರಂಥಗಳನ್ನು ಒದಗಿಸಿದ ಲಿಂಗಸುಗೂರಿನ ವರದೇಂದ್ರ ಹರಿದಾಸಸಾಹಿತ್ಯ ಮಂಡಳದ ಶ್ರೀ ಶ್ರೀನಿವಾಸದಾಸರಿಗೆ-ಬೆಂಗಳೂರಿನ ಶ್ರೀ ಜಯಸಿಂಹ ಅವರಿಗೆ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೋಜೆಕ್ಟಿನ ಅಧಿಕಾರಿಗಳಾದ ಶ್ರೀ ಕೆ. ಅಪ್ಪಣ್ಣಾಚಾರ್ಯರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸದೆ ಇರಲಾರೆ.

–ಡಾ. ನಾರಾಯಣಾಚಾರ್ಯ ಧೂಳಖೇಡ

# ಕೀರ್ತನೆಗಳ ಕ್ರಮಸೂಚಿ

### ಶ್ರೀ ವರದೇಂದ್ರರು



### ಶ್ರೀ ಧೀರೇಂದ್ರರು

## ದೀರ್ಘ ಕೃತಿಗಳು

೧

## ವಿನಾಯಕ ಪ್ರಾರ್ಥನೆ

ಮೂಷಕ ವಾಹನ ದೋಷ ವಿನಾಶನ
ದೋಷವ ನೋಡದೆ ಪೋಷಿಸು ಎನ್ನಾ ಪ

ಶೇಷ ಶಯನನ ವಿಶೇಷಜ್ಞಾನವನಿತ್ತು
ಈಷಣತ್ರಯ ಭವಸೋಷವ ಗೈಸೋ ದೇವಾ ೧

ನವವಿಧ ಭಕುತಿಯು ಸವನತ್ರಿಪುಜೆಯು
ನವನವ ಪಾಲಿಸೊ ಭವವರ ಪುತ್ರನೆ ೨

ಪಾತಕವನ ಧೂಮಕೇತುವೆ ಗುರುಜಗ
ನ್ನಾಥವಿಠಲ ಸಂಪ್ರೀತಿ ಪಾತ್ರನು ನೀನ್ಯೆ ೩

೨

ಹೇರೊಡಲ ತವ ಪಾದವಾರಿಜದ್ವಯ ಮನೋ -
ನೀರಜಾಲಯದಿ ಭಜಿಪೆ ಪ

ಸಾರಿದವರಘಸ್ತೋಮ ದೂರ ಓಡಿಸಿ ಬಯಕೆ
ಪೂರೈಸಿ ಪೊರೆವೊ ದಾತಾ - ಖ್ಯಾತಾ ಅ.ಪ

ಸಿದ್ಧಿಬುದ್ಧಿಯರಮಣ ಅಭೇದ್ಯತರವಾದ ತಮೋ -
ವಿದ್ಯತತಿಯನು ಕಳೆದು ನಿತ್ಯದಲ್ಲಿ
ಸಿದ್ಧ ಮೂರುತಿ ನಿಮ್ಮ ಮಧ್ವವಲ್ಲಭ ಶ್ರೀ
ಪ್ರದ್ಯುಮ್ನ ಪೌತ್ರಸುತ ಮುದ್ದುಗಣರಾಯಾ ೧

ವಿಘ್ನನಾಯಕನೆ ಬಹು ವಿಘ್ನ ಕೋಟಿಗಳನ್ನು
ಭಗ್ನವಾಗೀ ಹರಿಗುಣಾಂಬುಧಿಯಲೀ

ಮಗ್ನವಾಗಲಿ ಚಿತ್ತ – ಭಗ್ನದಂತನೆ ನಿನ್ನಲಿ
ಲಗ್ನಮನವಿತ್ತು ನಿರ್ವಿಘ್ನಕೃತಿನುಡಿಸೋ ೨

ಶೀತಗಿರಿಸುತೆಸೂನು ಪಾತಕಾರಣ್ಯಕೆ ಧೂಮ
ಕೇತು ಪೋಲುವ ನಿನ್ನನೂ
ಪ್ರೀತಿಯಿಂದಲಿ ಸ್ತುತಿಪೆ ನೀತಗುರುಜಗ –
ನ್ನಾಥವಿಠಲ ಪಾದದೂತ ನೀ ಬಹು ಖ್ಯಾತಾ ೩

## ಶ್ರೀಹರಿ ಸಂಕೀರ್ತನೆ

### ೩

ಅಲ್ಪಮನುಜರಿಗಾಲ್ಪರಿಸಬ್ಯಾಡೊ ಹರಿಯೆ ಪ

ಕಲ್ಪತರುಸಮ ನೀನಲ್ಪಜನತತಿಗೆ ಅ.ಪ

ಕಲ್ಪಕಲ್ಪದಲಹಿತಲ್ಪ ನಿನಸಂ
ಕಲ್ಪವನುಸರಿಸಿ ನಡೆವೊ ಜನಕೆ
ಕಲ್ಪತರು ನೀನೆಂದು ಸಂತಸದಿ ಅನುದಿನ
ಸ್ವಲ್ಪವಾದರು ಮನದೊಳಗೆ ವಿಕಲ್ಪಮಾಡದವನಾ ೧

ನಿನ್ನ ಧ್ಯಾನವಗೈದು ನಿನ್ನ ಪಾದವಭಜಿಸಿ
ನಿನ್ನ ನಾಮದ ಸ್ಮರಣೆ ಮಾಡುತಾ
ಅನ್ಯದೇವರನಾಮ ಮನ್ನದೊಳು ನೆನೆಯದೆ
ನಿನ್ನ ಚರಣವನು ನೆರೆನಂಬಿದವನಾ ೨

ನಿನ್ನ ಸೇವೆಯ ಮಾಡಿ ನಿನ್ನ ಸ್ತೋತ್ರವಗೈದು
ನಿನ್ನ ಪದಯುಗಪದುಮವಾಶ್ರಯಿಸೀ
ಮನ್ನದಲಿ ಭಜಿಪರಾನನ್ಯಶರಣಾನು ಎನಿಸಿ
ಅನ್ಯರನು ಯಾಚಿಸದಿಪ್ಪ ನರನಾ ೩

ಮಧ್ವಮತದಲಿ ಪುಟ್ಟಿ ಮಧ್ವಶಾಸ್ತ್ರವನೋದಿ
ಮಧ್ವಮತವನನುಸರಿಸಿದಾ

ಮಧ್ವದ್ವೇಷಿಗಳೊಡನೆ ಬದ್ಧ ದ್ವೇಷವಮಾಡಿ
ಮಧ್ವರಾಯರಪಾದ ಪೊಂದಿ ಇರುತಿಹನಾ ೪

ನಾಥ ನಿನ್ನದು ಪಾದ ಪಾಥೋಜಯುಗವನು
ಪ್ರೀತಿ ಪೂರ್ವಕ ಭಜಿಪ ಜನರಾ
ವ್ರಾತದೊಳಗೆ ಇಟ್ಟು ಪೊರೆ ನೀ ದಾತ ಗುರುಜಗ
ನ್ನಾಥವಿಠಲರಾಯ ಸತತಾ ೫

೪

ಆವ ರೂಪವ ನೋಡಿ ಮರುಳಾದೆ ಇಂಥ
ದೇವವರಗೆ ಹಾರ ನೀಡಿದೆ ಪ

ಸೇವಕ ಜನಗಳ ಸೇವೆಗೆ ದೊರೆಯದೆ
ಗೋವರ ಮನಿ ಮಹಾದ್ಯೆವನಾದವಗೆ ಅಪ

ವೇದಚೋರನ ಕೊಂದ ಶೂರಗೆ ಭಾರ
ವಾದ ಗಿರಿಯ ಪೊತ್ತ ಧೀರಗೆ
ಮೇದಿನಿ ತಂದಿಹ ವೀರಗೆ ಮಹ
ಅದಿದೈತ್ಯನ ಕೊಂದ ಕ್ರೂರಗೆ
ಬೋಧಗಾರ ಶುದ್ಧಕುಧರನುದ್ಧಾರಗೆ
ಬೋಧರ ವರಘೋರರೂಪನಾದವಗೆ ೧

ಧರೆಯನಳೆದ ಅಳತೆಗಾರಗೆ ತಾಯಿ
ಶಿರವ ತರಿದ ಮೋಸಗಾರಗೆ
ಶರಧಿಗಟ್ಟಿದ ಸೇತುಗಾರಗೆ ಬಹು
ಹರದಿಯರಿಗೆ ವಿಟಗಾರಗೆ
ತಿರುಕರೂಪಗೆ ಪರಶುಧರ ವನಚರಗೆ
ಖರಾಸುರ ವೈರಿಗೆ ಕಂಸಮರ್ದನಗೆ ೨

ವೀತವಸನ ಬಂಡಗಾರಗೆ ಬಹು
ಪಾತಕರೊಳು ಪುಂಡಗಾರಗೆ
ನೀತಸತಿವ್ರತ ಹಾರಗೆ ಖಳ
ಜಾತಿ ಜನರ ಸಂಹಾರಗೆ
ಮಾತುಗಾರ(ಗೆ) ಬಹುಪ್ರೀತಗಾರ(ಗೆ) ನಮ್ಮ
ಖ್ಯಾತ ಗುರುಜಗನ್ನಾಥ ವಿಠಲಗೆ ೩

೫

ಇಂದಿಗೆ ಇರುತಿಹ ಮಂದನ ಶ್ರಮ ಬಹು
ಬಂಧನ ಬಿಡಿಸೊ ಗೋವಿಂದ
ಎನ್ನನು ಕಾಯೊ ಮುಕುಂದ ಪ

ಹಿಂದಿನ ಕಾಲದೊಳಾದ ಪ್ರತೀಕಾರ
ದಿಂದ ಬಾಧಿಪನಿವನೆನ್ನ
ಕಾಯ ಬೇಕೈಯ್ಯಾ ನೀ ಎನ್ನ ೧

ನಿಂದ್ರಾದೆ ಗ್ರಾಮದಿ ಪೊಂದಾದೆ ಜನರನ್ನು
ಕುಂದುತ ಬಂದೆನಾರಣ್ಯ
ವಾಸವಮಾಡುತ ಇನ್ನಾ ೨

ಇಂದಿರಪತಿಪಾದದ್ವಂದ್ವವು ಮನ್ಮನ
ಮಂದಿರದಲಿ ತೋರಿನ್ನಾ
ಐದುವೆ ನಿಜಸುಖವನ್ನಾ ೩

ಪೊಂದಿಸು ನಿನ್ನಯ ವಂದಿಸುವಾ ಜನ
ಸಂದಣಿಯೊಳು ಮುಂದೆನ್ನಾ
ಐದುವೆ ನಾ ನಿನ್ನಾ ೪

ಇಷ್ಟುಶ್ರಮವ ನಾ ತಪ್ಪಿಸಿ ಪೇಳಿದೆ
ಧಿಟ್ಟಗುರುಜಗನ್ನಾಥಾ
ವಿಠ್ಠಲ ನಿಜಜನಪ್ರೀತಾ ೫

೬

ಇಂದು ನೋಡಿದೆ ನಂದದಾಯಕ ಇಂದಿರಾರಮಣನಾ ಪ

ಇಂದು ಮೌಳ್ಯಮರೇಂದ್ರ ವಂದಿತಪಾದನಾ ಅ.ಪ

ವಾರಿಚರ, ಗಿರಿಧಾರಿ, ಸೂಕರ
ಕ್ರೂರರೂಪವತಾಳ್ದನಾ
ಪೋರ, ಜನನಿಶಿರಹಾರಿ, ವನಚರ,
ನಾರಿಜನರಿಗೆ ಒಲಿದನಾ ೧

ನಾರಿವ್ರತ ಪರಿಹಾರ ಮಾಡಿ
ಹಯವನೇರಿ ಮೆರೆದನಾ
ಧಾರುಣಿಯೊಳು ಸಮೀರಗಿರಿವಾಸ
ವೀರಪುರದೊಳು ತೋರೊನಾ ೨

ವೀತಶೋಕ ವಿಧಾತಜನಕನ
ದೂತಜನ ಪರಿಪಾಲನಾ
ಖ್ಯಾತಮಹಿಮನ ದಾತಗುರುಜಗ
ನ್ನಾಥವಿಠಲ ರಾಯನಾ ೩

೭

ಇಂದು ನೋಡಿದೆ ನಂದತೀರ್ಥ ಮು -
ನೀಂದ್ರವಂದಿತ ಚರಣನಾ ಪ

ವಂದಿಸುವ ಭಕುತರಿಗೆ ನಿತ್ಯಾ -
ನಂದಫಲದ ಮುಕುಂದನಾ ಅ.ಪ

ತಮನವೈರಿಯ ಮಂದರಧರ
ಕಮಠರೂಪವ ಪೊತ್ತನಾ

ಕಮಲಸಂಭವಭವನಕಶಿಪು
ದಮನ, ವಾಮನಮೂರ್ತಿಯಾ ೧

ಭೂಮಿಪರ ಸಂಹಾರಿ, ದಶರಥ
ರಾಮನಾಮದಿ ಮೆರೆದನಾ
ಸೋಮಪಾಧಿಪಸುತಗೆ ಒಲಿದು ಸಂ –
ಗ್ರಾಮದಲಿ ರಕ್ಷಿಸಿದನಾ ೨

ಬುದ್ಧರೂಪದಿ ತ್ರಿಪುರಸತಿಯರ
ಬುದ್ಧಿ ಭೇದವ ಮಾಳ್ದನಾ
ಬುದ್ಧರಲಿ ಕಲಿಮುಖ್ಯಯವನರ
ಗೆದ್ದ ಗಾನವಿಲೋಲನಾ ೩

ದೇವಕೀವಸುದೇವತನಯನ
ದೇವಗಣ ಸಂಸೇವ್ಯನಾ
ಈ ವಸುಂಧರೆಯೊಳಗೆ ಮಧ್ವಸ –
ರೋವರದಲಾವಾಸನಾ ೪

ಪೋತವೇಷನ ವೀತಶೋಕನ
ಪೂತನಾದಿವಿಘಾತನಾ
ಮಾತರಿಶ್ವಪ್ರಿಯಾ ಗುರುಜಗ
ನ್ನಾಥವಿಠಲರಾಯನಾ ೫

## ೮

ಇದು ಏನು ಚರಿಯಾ ವೆಂಕಟರಾಯ
ಇದು ಏನು ಚರಿಯಾ ಪ

ಇದು ಏನು ಚರಿಯಾ ಶ್ರೀಯದುಕುಲ ತಿಲಕನೆ
ಸದನತ್ರಯವ ಬಿಟ್ಟು ಹುದುಗಿಕೊಂಡಿರುವುದು ಅ.ಪ

ಕನಕಪರ್ವತದಲ್ಲಿ ದಿನದಿನ ಮಾಡುವ
ಘನ ಪೂಜೆಯನೆ ನೀನೆನಿಸದಿರುವುದು ೧

ಪೊಂಬಣ್ಣಾಂಬರವುಟ್ಟು ಹೊಂಬಣ್ಣಾಂಬರವಿಟ್ಟು
ಕಂಬೆಣ್ಣೆಯನೆ ಬಿಟ್ಟು ದಿಗಂಬರನಾಗಿದ್ದು ೨

ಬುತ್ತಿ ಮೊದಲಾದ ಉತ್ತಮನೈವೇದ್ಯ
ಹೊತ್ತಿಗುಂಬೋದು ಬಿಟ್ಟು ತುತ್ತುಗಾಣದಿರುವೋದು ೩

ಭಾಗ್ಯವಂತನು ನೀನು ಭಾಗ್ಯರೂಪಳು ರಾಣಿ
ಭಾಗ್ಯತನವ ಬಿಟ್ಟು ನಿರ್ಭಾಗ್ಯನಾಗಿರುವೋದು ೪

ದಾತಗುರುಜಗನ್ನಾಥ ವಿಠಲ ಜಗದಿ
ನಾಥನಾಗದೆ ಅನಾಥನಾಗಿರುವೋದು ೫

೯

ಎನ್ನ ಬಿನ್ನಪ ಕೇಳೊ ಘನ್ನ ಮಹಿಮನೆ ಭವ
ಬನ್ನ ಬಡಿಸುತಲಿಹುದೋ ಸ್ವಾಮಿ ಪ

ಇನ್ನು ನೀ ಪೊರೆಯೊ ಅಪನ್ನಜನರಾಪಾಲ
ಮನ್ನಿಸಿ ಕಾಯೊ ಸ್ವಾಮೀ ಪ್ರೇಮೀ ಅ.ಪ

ಆಗಾಮಿಸಂಚಿತಭೋಗಂಗಳು ಎನ್ನ
ಯೋಗ ಮಾರ್ಗಕೆ ಪೋಗದಂತೆ
ಹೇಗೆ ಮಾಡಿ ಜ್ಞಾನನೀಗೆ ನಿನ್ನಲಿ ಮನಸು
ಯೋಗವನು ಮಾಡಗೊಡದೇ
ಜಾಗುಮಾಡುತ ಪರಮಭಾಗವತರಲಿಸದಾ
ಆಗಮಗಳ ತಿಳಿಯದೇ
ಹೀಗಾಗಿ ನಾನು ಅಯೋಗ್ಯನೆನಿಸೀ ಜಗದಿ
ಕಾಗಿಯಾಗಿ ತಿರುಗಿದೇ ಸ್ವಾಮಿ ೧

ಹೆತ್ತ ಈ ಮೊದಲು ಮತ್ತಾರು ಜನರಿಲ್ಲ
ಹೊತ್ತಿಗೇ ಕರೆದನ್ನವೀವರಿಲ್ಲಾ
ಗೊತ್ತು ಸ್ಥಳಗಳು ಇಲ್ಲ ವೃತ್ತಿ ಸ್ವಾಸ್ಥ್ಯಗಳಿಲ್ಲ
ಚಿತ್ತ ಶುದ್ಧಿಯು ಮೊದಲೆ ಇಲ್ಲಾ
ಎತ್ತ ಪೋದರೆನ್ನ ಇತ್ತ ಬಾಯೆಂತೆಂದು
ಹತ್ತಿರ ಕರೆವೊರಿಲ್ಲ
ಎತ್ತ ಪೋದರೆನ್ನ ಮತ್ತೆ ಪಾಲಿಪರ‍್ಯಾರೊ
ಉತ್ತಮನೆ ನೀನೆ ಕಾಯೋ ಸ್ವಾಮೀ ೨

ಗರ್ಭವಾಸದಕಿಂತ ದುರ್ಭರಾಭವತಾಪ
ನಿರ್ಭರಾವಾಗಿಹುದೋ
ಅರ್ಭಕಾಮತಿಯಿಂದ ಅರ್ಭಟಾ ಕಾರ್ಯವನು
ನಿರ್ಭಯದಿ ಮಾಡಿದೆನೊ
ಗರ್ಭ ನಾ ದೂತ ನೀ ನಿರ್ಭಯವ ಕೊಡದಿರಲು
ಲಭ್ಯವೇ ಸರ್ವಕಾರ್ಯಾ
ಲಭ್ಯ ಶ್ರೀಪತಿ ನೀನು ಲಭ್ಯನಾಗದಿರೆ ವೈ
ದರ್ಭಿರಮಣಾ ಕಷ್ಟವೊ ಸ್ವಾಮಿ ೩

ಉಡುವ ವಸ್ತ್ರಗಳಿಲ್ಲ ಒಡಲಿಗಶನವು ಇಲ್ಲ
ಕೊಡುವ ಧನ ಮೊದಲೆ ಇಲ್ಲ
ಪೊಡವಿಯೊಳು ನಾನತೀ ಬಡವನಲ್ಲದೆ ಮಹಾ
ಕಡು ಪಾಪಿಯಾದೆನಲ್ಲೋ
ತುಡುಗುತನದಲಿ ಪರರ ಮಡದಿಯರ ನಾ ಬಲು
ದೃಢಮನಸಿನಿಂದ ಬಯಸಿ
ಧೃಢ ಭಕುತಿಯಿಂದ ಅಡಿಗೆರಗದಲೆ ನಾನು
ಪೊಡವಿಭಾರಾದೆನಲ್ಲೋ ಸ್ವಾಮೀ ೪

ಓದಿ ಬರೆಯಾಲಿಲ್ಲ ವೇದ ಪಠಿಸಾಲಿಲ್ಲ
ಮೋದತೀರ್ಥರ ಶಾಸ್ತ್ರ ತಿಳಿಯಲಿಲ್ಲಾ

ವಾದಶಾಸ್ತ್ರಗಳಿಲ್ಲ ಭೇದಪಂಚಕವಿಲ್ಲ
ಸಾಧನದ ಮಾರ್ಗವಿಲ್ಲ
ಖೇದಗೊಳಿಸುವ ಭವದ ಹಾದಿ ತಿಳಿಯದೆ ನಾನು
ಮೋದಕರವೆಂದು ಅಲ್ಲೀ
ಸಾದರದಿ ಬಿದ್ದು ಆಮೋದಬಡುತಲಿ ದ್ವಿ
ಪಾದಪಶು ನಾನಾದೆನಲ್ಲೋ ಸ್ವಾಮೀ ೫

ಸತಿಸುತ ಮೊದಲಾದ ಅತಿಹಿತ ಜನರೆನ್ನ
ಸತತ ಸಂತ್ಯಜಿಸಿಹರೋ
ವಿತತವಾಗಿಹ ಮಹಾಪತಿತದಾರಿದ್ರ್ಯನ್ನ
ಅತಿಬಾಧೆ ಬಡಿಸುತಿಹದೋ
ಇತರ ಜನರೂ ಎನ್ನ ಅತಿದೂರದಲಿ ನೋಡಿ
ಅತಿಹಾಸ್ಯ ಮಾಡುತಿಹರೋ
ವ್ರತತಿಜಾಂಬಕ ನಿನ್ನ ನತಿಸಿ ಬೇಡಿಕೊಂಬೆ
ಸತತ ನೀ ಪಾಲಿಸೆಂದೂ ಸ್ವಾಮೀ ೬

ತಂದೆ ತಾಯಿಯೂ ನೀನೆ ಬಂಧು ಬಳಗವು ನೀನೆ
ಇಂದು ಮುಂದೆನಗೆ ಗತಿ ನೀನೆ
ವಂದಿಪಾ ಜನಕೆ ಆನಂದವನೆ ಕೊಡುವ
ಮಂದಾರತರುವು ನೀನೆ
ನೊಂದು ನಾನೀಭವದ ಸಿಂಧು ಒಳಗೆ ಬಿದ್ದೆ
ಮುಂದಕ್ಕೆ ಕರೆದು ಕಾಯೋ
ಸುಂದರಾಂಗನೆ ಕೃಪಾಸಿಂಧು ನೀ ಬಿಡೆ ಎನ್ನ
ನೊಂದದಲೆ ಸಲಹೊರ್‍ಯಾರೋ ಸ್ವಾಮಿ ೭

ಹೊಟ್ಟೆಗಿಲ್ಲದೆ ನಾನು ಬಟ್ಟೆ ಹಾಸೀ ನರರಿ
ಗ್ವಟ್ಟರಿಸಿ ಒದರುತಿಹೆನೋ
ಪುಟ್ಟದಿರಲೂ ಅನ್ನ ಸಿಟ್ಟಿನಿಂದಾ ನಾಯಿ
ಬೆಟ್ಟಕ್ಕೆ ಒದರಿ ತಾನೂ
ಹೊಟ್ಟೆಯುಬ್ಬೀ ಕೊನೆಗೆ ಹೊರಳಿ ಹೊರಳಿ ತಾನು

ಸುಟ್ಟ ಬೂದಿಲಿ ಬೀಳ್ವ ತೆರದೀ
ಒಟ್ಟು ಮಾತಿದು ಕೃಪಾವಿಟ್ಟು ನೀ ಎನ್ನನು
ಥಟ್ಟನೇ ಕರಪಿಡಿದು ಕಾಯೋ ಸ್ವಾಮೀ ೮

ನಿನ್ನ ದಾಸನು ಆಗಿ ಅನ್ಯರನ ಬೇಡಿದರೆ
ಘನ್ನತೆಯು ನಿನಗುಂಟೇ
ಘನ್ನ ಜನಪನ ತನುಜ ಇನ್ನು ದೈನ್ಯದಿ ತಾನೆ
ಅನ್ಯರನು ಬೇಡುವುದು ಉಂಟೇ
ಚೆನ್ನ ಸುಮನಸ ಧೇನು ಮುನ್ನ ಮನೆಯೊಳಿರೆ ಗೋ
ವನ್ನು ಬಯಸುವರುಂಟೇ
ಇನ್ನು ಪೇಳುವದೇನು ಎನ್ನಭವಣೇ ತಿಳಿದು
ಇನ್ನು ಕಾಯಲಿ ಬೇಕೋ ಸ್ವಾಮೀ ೯

ಶುದ್ಧಮಾರ್ಗವ ಬಿಟ್ಟು ಬದ್ಧ ಭವಸಾಗರವೆ
ಉದ್ಧಾರ ಮಾಳ್ಪದೆಂದೂ
ಶಿದ್ಧಜನರಾ ಸೇವೆಗೆ ಬದ್ಧನಾಗದೆ ದುರಾ
ರಾಧ್ಯ ಜನರನ್ನು ಭಜಿಸೀ
ಉದ್ಧರಿಸುವೊ ಶ್ರೀ ಮಧ್ವಸಿದ್ಧಾಂತದ ಸೂ
ಪದ್ಧತಿಯನ್ನೆ ಬಿಟ್ಟೊ
ಸಿದ್ಧಮೂರುತಿ ಎನ್ನ ಪದ್ಧಗಳ ಎಣಿಸದಲೆ
ಉದ್ಧಾರಮಾಡೊ ಸ್ವಾಮೀ ಪ್ರೇಮೀ ೧೦

ದಾತ ನೀನೇ ಎನ್ನ ಮಾತುಲಾಲಿಸಿ ಭವದ
ರತಿಯನ್ನೇ ಬಿಡಿಸಿ ಕಾಯೋ
ಪೊತನಲ್ಲವೆ ನಿನಗೆ ಆತುರದಿ ನಾನೀ
ರೀತಿಯಿಂದಲಿ ಪೇಳಿದೆ
ಯಾತರಾ ಮಾತೆಂದು ನೀ ಪ್ರೀತಮನಕೇ ತರದೆ
ತಾತನೂಕೀ ಬಿಟ್ಟರೆನ್ನಾ

ಸೋತುಬಂದಾ ನಿನಗೆ ಆತುರಾವ್ಯಾಕೆಂದು
ನೀತವಾಗೀ ಕಾಯ್ವರಾರೋ ಸ್ವಾಮೀ ೧೧

ಮಾತೆ ಮಕ್ಕಳಿಗೆ ವಿಷದಾತೆಯಾಗೇ ತಂದೆ
ಪೋತರ ಮಾರಿದಾರೆ
ದಾತನಾದಾ ರಾಜ ಆತುರಾದಿಂದಲಿ ನಿಜ
ದೂತರರ್ಥಪಹಾರಮಾಡೆ
ನೀತಸತಿಯು ತನ್ನ ನಾಥನಾಯು ತಾನೆ
ಘಾತವನೆ ಮಾಡಿದಾರೆ
ನೀತವೇ ನಿನಗಿದಕೆ ಯಾತರಾ ಚಿಂತೆ ಈ
ಮಾತಿನಂತೆ ನಿನಗೆ ಪ್ರೀತೇ ಸ್ವಾಮೀ
ಎಷ್ಟು ಪೇಳಲಿ ಎನ್ನ ಕಷ್ಟರಾಶಿಗಳೆಲ್ಲ
ಶ್ರೇಷ್ಟವಾಗಿರುತಿಹವೊ ಸ್ವಾಮೀ
ದುಷ್ಟನಾದರು ತನ್ನ ಭ್ರಷ್ಟಮಗನನು ತಾಯಿ
ಅಟ್ಟೀಸೂವಳೆ ಅಡವಿಗೆ
ಎಷ್ಟು ಕೆಟ್ಟವ ನಾನಾರಿಷ್ಟನಾದರು ಕೃಪಾ
ದೃಷ್ಟಿಯಿಂದಲಿ ನೋಳ್ಪಳೋ
ನಷ್ಟದೈವ ನಾನರಿಷ್ಟ ಅಜ್ಞಾನಿ ಕರುಣಾ ೧೩

ದೃಷ್ಟಿ ಯಿಂದಲಿ ನೋಡಿ ಸಲಹೋ ಸ್ವಾಮೀ
ಕುಟಿಲ ಖಳಮತಿಯು ನಟನೆಮಾಡುತ ಭವಲಂ
ಪಟದೊಳಗೆ ಬಿದ್ದಿಹೆನೊ ಸ್ವಾಮೀ
ಶಠತರನು ನಾನತಿಕಠಿಣಮನಸೀನಿಂದ
ಧಿಟಜ್ಞಾನಿದ್ರೋಹಗೈದೆ
ದಿಟರಿಲ್ಲ ಎನಗೆಂದು ನಟಿಸುತ್ತ ಸರ್ವದ
ಅಟನೆಮಾಡಿದೆ ಸರ್ವರಲ್ಲಿ
ಪಟುತರನು ನಾನೆಂದು ಧಿಟಗುರುಜಗನ್ನಾಥ
ವಿಠಲ ದೇವಾ ನಿನ್ನ ಮರೆದೆ ಸ್ವಾಮೀ ೧೪

## ೧೦

ಎನ್ನ ಮೊರೆಯ ಕೇಳಬಾರದೆ ಹೇ ಶ್ರೀನಿವಾಸ ಪ

ಎನ್ನ ಮೊರೆಯ ಕೇಳದಿರೆ ಎನ್ನನಿವರು ಬದುಕಿಸರು
ಇನ್ನು ಮಾಡಲೇನು ಎಂದು ನಿನ್ನ ಪದಕೆ ಸಾರಿದೆನು ಅ.ಪ

ಇಬ್ಬರ್‍ರಮಣ ನಿನ್ನ ಪಾದ ಉಬ್ಬಿಮನದಿ ಭಜಿಪ ಎನಗೆ
ಮಬ್ಬುಗವಿದು ತಾವು ಎನ್ನ ಮೊಬ್ಬಿನೊಳಗೆ ಕೆಡವಿದರೊ ೧

ಅನ್ಯವಾರ್ತೆಬಿಟ್ಟು ನಾನು ನಿನ್ನ ಗುಣವ ಕೇಳ್ವೆನೆನಲು

ನಿನ್ನವಾರ್ತೆಬಿಡಿಸಿ ತಾವು ಅನ್ಯವಾರ್ತೆ ಕೇಳಿಸೋರು ೨

ನಿನ್ನ ನಾಮಸ್ತೋತ್ರಗಳು ಮನ್ನದಿಂದ ಪಠಿಪೆನೆನಲು
ಎನ್ನ ಮಾತುಸಾಗಗೊಡದೆ ತಮ್ಮ ಮಾತು ಸಾಗಿಸುವರು ೩

ನಿನ್ನ ಪಾದಕಮಲಗಂಧವನ್ನು ಗ್ರಹಿಪೆನೆನಲು ಎನಗೆ
ಚೆನ್ನಗಂಧ ಬಿಡಿಸಿ ತಾವು ಘನ್ನದುರ್ಗಂಧ ಕೊಡುವರೋ ೪

ನಿನ್ನಭಜಕರಂಗಸಂಗವನ್ನು ಮಾಳ್ಪೆನೆನಲು ಅದ
ನನ್ನು ಬಿಡಿಸಿ ಪರರಾದವನ್ನು ತೇರ ಕೂಡಿಸೋರು ೫

ನಿನ್ನ ಚಕ್ರ ಶಿಲಾಸ್ಪರ್ಶವನ್ನು ಮಾಳ್ಪೆನೆನಲು ಅದ
ನನ್ನು ಬಿಡಿಸಿ ನೀಚಜನಾರನ್ನು ಸ್ಪರ್ಶಮಾಡಿಸೋರು ೬

ನಿನ್ನ ಮನಿಗೆ ಬರುವ ಎನ್ನ ಚೆನ್ನವಾಗಿ ಕರೆದು ತಾವು
ಅನ್ಯಮನಿಗೆ ವೈದು ಬಹಳ ಬನ್ನಬಡಿಸುವರಯ್ಯಾ ೭

ಅನ್ಯಮನಿಗೆ ಪೋಗದಲೆ ಎನ್ನ ಮನೆಯ ಒಳಗೆ ನಾನು
ಅನ್ನವಸನ ದಿಂದ ಇರಲು ಅನ್ಯಸದನಕೆಳದು ವೈವ ೮

ಕಠಿಣ ಜನರು ಅವರು ಬಹಳ ಸಟೆಯುಅಲ್ಲವೆನ್ನ ಮಾತು
ಘಟನೆ ಗುರುಜಗನ್ನಾಥವಿಠಲರೇಯ ಲಾಲಿಸೀಗ ೯

## ೧೧

ಎಲ್ಲಿ ಪೋದ ಶಿರಿನಲ್ಲತಾ
ನೆಲ್ಲಿ ಪೋದ ಶಿರಿನಲ್ಲ ಪ

ಎಲ್ಲಿ ಪೋದ ಪದಪಲ್ಲವಭಜಿಪರ
ನಲ್ಲೆ ಬಿಟ್ಟು ಪರನಲ್ಲೇರಿಗೊಲಿದು ತಾ ಅ.ಪ

ಸತಿ ಸುತ ಮುನಿಕಿಂತತಿಹಿತ ಪ್ರೀಯರು
ಮತಿವಂತರೆ ಎನಗತಿ ಎಂಬುವ ತಾ ೧

ಲಕುಮಿಯಕಿಂತಲು ಭಕುತರು ಎನಗೆ
ಸಕಲಭಾಗ್ಯ ಪರಸುಖವೆಂಬುವ ತಾ ೨

ಕಟ್ಟು ಕಾವಲಿ ಪರರಟ್ಟುಳಿ ಇಲ್ಲವೊ
ಬಿಟ್ಟರೆ ಭಕುತರು ಕಟ್ಟೋರು ಎಂಬುವ ೩

ಎಲ್ಲಿರಿಗತಿ ನಾ ಬಲ್ಲಿದ ಎನಪಾದ
ಪಲ್ಲವ ಭಜಕರು ಬಲ್ಲಿದರೆಂಬುವ ೪

ದಾತಗುರು ಜಗನ್ನಾಥವಿಠಲ ನೀ
ರೀತಿಯ ಪೇಳಿದ ದೂತ ಪಾಲಕ ತಾ ೫

## ೧೨

### ಉಗಾಭೋಗ

ಎಸೇಸು ಜನುಮಕ್ಕೆ ಈಶಾನು ನೀನಯ್ಯಾ
ದಾಸನಿವನೆಂಬೊ ನುಡಿಸಿದ್ದ ಉ –

ದಾಶೀನಮಾಡದೆ ಲೇಸು ಭಕುತಿ ಜ್ಞಾನಾ –
ಯಾಸವಿಲ್ಲದೆ ಇತ್ತು ಪಾಲಿಸಯ್ಯಾ
ಶ್ರೀಶಗುರುಜಗನ್ನಾಥ ವಿಠಲ ನಿನ್ನ
ದಾಸನೆನಿಸಿ ಇಲ್ಲಿ ವಾಸಮಾಡೆಲೊ ಸ್ವಾಮೀ

## ೧೩

ಕರುಣಿಸಲೊಲ್ಲ್ಯಾ ಕರುಣಾನಿಧೇ ಪ

ಕರುಣಿಸಲೊಲ್ಲ್ಯಾ ನೀ ಕರುಣಸಾಗರ ನಿನ್ನ
ಚರಣಭಜಿಸಿ ಭವ ಅರಣ ದಾಟುವಂತೆ ಅ.ಪ

ವಿಶ್ವಾಂತರ್ಗತನೆ ವಿಶ್ವಾಹ್ವಯಾ
ವಿಶ್ವವ್ಯಾಪಕನೆ ವಿಶ್ವಾಸುವಿಶ್ವ ನೀ
ವಿಶ್ವ ಪ್ರೇರಕ ನಿನ್ನ ವಿಶ್ವಪಾದದೊಳು ನಾ
ವಿಶ್ವಾಸಮಾಳ್ಪಂತೆ ೧

ದಾನವಾಂತಕನೆ ದಯಾಕರಾ
ಜ್ಞಾನದಾಯಕನೆ ಜ್ಞಾನದಾಯಕ ಎನ್ನ
ಜ್ಞಾನನಿಚಯ ನೀನೆ ಹಾನಿಮಾಡಿ ನಿನ್ನ
ಜ್ಞಾನವನ್ಯೆದೊಂತೆ ೨

ಮಂದರೋದ್ಧರನೆ ಮಹಾರಾಯಾ
ನಂದದಾಯಕನೆ ಇಂದಿರಾಪತಿ ನಿಜ
ನಂದಕೊಡುವ ನಿನ್ನ ದ್ವಂದ್ವ ಚರಣದೊಳು
ಸಂದೇಹವಿಲ್ಲದಂತೆ ೩

ಕಾಮಿತಾರ್ಥವನೆ ಕಮಲಾಕ್ಷಾ
ಕಾಮನ್ನಪಿತನೆ ಕಾಮಿತಾರ್ಥಗಳನ್ನು
ಕಾಮಿಸದಲೆ ನಿನ್ನ ನಾಮವ ಭಜಿಸುವ
ನೇಮಮತಿಯನಿತ್ತು ೪

ಸೃಷ್ಟಿಕಾರಣನೆ ಶ್ರೀಕೃಷ್ಣಯ್ಯಾ
ವೃಷ್ಣಿನಾಯಕನೆ ದುಷ್ಟಮತಿಯ ಬಿಡಿಸಿ
ಶಿಷ್ಟಜ್ಞಾನವನಿತ್ತು ದಿಟ್ಟಗುರುಜಗನ್ನಾಥ
ವಿಠಲ ನೀ ಎನ್ನ ೫

## ೧೪

ಕೊಡು ಕೊಡು ಕೊಡೋ ವರವಾ
ತಡವ್ಯಾಕೋ ದೇವಾ ನೀ ಪ

ಒಡೆಯ ನಿನ್ನಯ ಯುಗ
ಅಡಿಗಳ ಭಜಿಸುವ್ರೋ ಸು
ಧೃಢ ಭಕುತಿ ಜ್ಞಾನವನ್ನು
ತಡೆಯದೆ ಎನಗೆ ನೀ ಅ.ಪ

ಪೊಡವಿ ಪಾಲಕ ನೀನೆಂದು
ಭಿಡೆಯವನ್ನು ನಾ ಮಾಡೆ
ಕಡಲಶಯನ ಸುಮ್ಮನೆ
ಮಡದಿಸಹಿತಾಗಿ ನೀ ೧

ಜಡಜಲೋಚನ ದೇವಾ
ಹುಡಗ ನೀನೆಂದು ನಾ
ನುಡಿದ ಮಾತುಗಳ ನಿ
ನ್ನೊಡಲೊಳಗಿಡದೆ ನೀ ೨

ಚಟುಲಗುರು ಜಗನ್ನಾಥಾ
ವಿಠಲ ನಿನ್ನ ನಾ ಕರಾ
ಪುಟದಿ ಬೇಡುವೆ ಮಮ ಹೃ
ತ್ಪುಟದಿ ತೋರುವೆನೆಂದು ನೀ ೩

## ೧೫

ಗಿರಿರಾಯಾ ಗಿರಿರಾಯಾ ಪ

ಶರಣಾಗತರಿಗೆ ಕರುಣಾಕರ ವೆಂಕಟ ಅ.ಪ

ಸ್ಮರಿಸುವೆ ನಿನ್ನನು ಸರಸಿಜಭವನುತ
ಸ್ಮರತಾಮರತರು ದುರಿತವಿದೂರ ೧

ಶ್ರೀಕರಭವಭಯ ನೂಕಿಸಿ ಎನ್ನನು
ಸಾಕೆಲೋ ಭೂಧರಸೂಕರರೂಪ ೨

ಆಪದ್ಬಾಂಧವ ಶ್ರೀಪತಿ ಎನ್ನನು
ಕಾಪಾಡೆಲೊ ಸಕಲಾಪದ್ಧರ ವೆಂಕಟ ೩

ಕಾಮಿತ ಫಲಪ್ರದ ಈ ಮಹೀತಳದೊಳು
ಸಾಮಜವರದ ಸುಧಾಮನ ಸಖ ಶೌರಿ ೪

ದಾತಗುರುಜಗನ್ನಾಥವಿಠಲ
ಪ್ರೀತನಾಗೊ ನಿನ್ನ ದೂತನು ನಾನೈ ೫

## ೧೬

ಗುರ್ವಂತರ್ಗತ ಗೋಪಾಲ ಪಾಹಿ
ಸರ್ವಪಾಲಕ ಶಿರಿಲೋಲ ಪ

ಶರ್ವಸುರಗಂಧರ್ವ ಮುನಿಕುಲ
ಸರ್ವಸೇವಿತ ಗರ್ವರಹಿತನೆ ಅ.ಪ

ರಾಮಾಕೃಷ್ಣ ವ್ಯಾಸರೂಪದಿಂದಾ
ಮಾಮನೋಹರ ಮಾಡೆಕೃಪಾ

ಶ್ರೀಮಧ್ವ ಮೊದಲಾದ ಆ ಮಹಾಮುನಿಗಳ
ಸ್ತೋಮಸಂತತ ಮಹಾಪ್ರೇಮಮನದಲಿದ್ದು
ಭೂಮಿತಳದೊಳಗಖಿಳಜನರಿಗೆ
ಕಾಮಿತಾರ್ಥವ ಸಲಿಸಿ ತಾ ನಿ
ಸ್ಸೀಮ ಮಹಿಮೆಯ ತೋರಿ ಇವರಿಗೆ
ಆ ಮಹತ್ತರ ಕೀರ್ತಿಕೊಡುತಿಹ ೧

ಆವಾವಜನುಮಗಳಲ್ಲಿ ಜಗಕೆ
ಜೀವನಪ್ರದನಾಗಿ ಇಲ್ಲೀ
ಶ್ರೀವರ ಸರ್ವೇಶ ಜೀವೇಶ ಸುರವಂದ್ಯ
ದೇವ ನಿನ್ನಯ ಪಾದಸೇವಾವ ಸಲಿಸೆಂದೆ
ಕೋವಿದರ ಕುಲಮಣಿಗಳೊಳಗೆ
ಭಾವಿಪುದು ಸನ್ಮನವನಿತ್ತು
ಗೋವಿದಾಂಪತೆ ಜ್ಞಾನಗಮ್ಯನೆ
ಪಾವನಾತ್ಮಕ ಪರಮ ಪಾಲಿಸೋ ೨

ದಾತ ಶ್ರೀ ಗುರುಜಗನ್ನಾಥವಿಠಲ ನೀ
ಧಾತನಾಂಡಕೆ ಮುಖ್ಯನಾಥಾ
ಧಾತಪ್ರಮುಖಸುರವ್ರಾತಸನ್ನುತಪಾದ
ಪಾಥೋಜಯುಗಳ ಸಂಭೂತ ರಜೋದಿಂದ
ಧೂತಪಾಪನ ಮಾಡುವದು ಅ
ದ್ಭೂತ ಜ್ಞಾನ ವಿರಕುತಿ ಸಂಪ
ದ್ವ್ರಾತ ಪಾಲಿಸೊ ಹೇ ಮಹದ್ಭುತ
ದಾತ ಎಂಬೆನೊ ನಮೋ ನಮೋ ೩

## ೧೭

ಭಲಾವ್ಯಾಕೊ ನಿನಗೆ ಎನ್ನಲಿ ಪ

ಭಲಾವ್ಯಾಕೊ ಕೋಲಾಚಲವೇಂಕಟ
ಫಲಾ ನೀಡಿ ನೀ ಭಲಾನೆನಿಸೊ ದೇವಾ ಅ.ಪ

ಧರಾತಳದಿ ಭೂಧರಾಗ್ರಮಂದಿರ
ಪರಾವರೇಶನೆ ದರಾರಿಕರಶೂರ ೧

ರಮಾವರನೆ ತವ ಸಮಾನರಾಗಿಹ
ಸುಮಾನಸಾರ್ಕರ ಕ್ಷಮಾತಳದಿ ಕಾಣೆ ೨

ಕುಲಾಲಕೃತ ಮೃತ್ ಕಲಾಪಧರಮಹಾ
ಉಲಾಯುಗಾತ್ಮಜ ಬಲಾರಿಸುತಸುಖ ೩

ಶತ್ರುಬವರದೊಳು ವೃತ್ರಾರಿತನಯನ
ಮಿತ್ರಾನ ತೋರಿ ಪೊರೆದ್ಯೊ ಶತ್ರುಹನನದೇವ ೪

ತಕ್ಷಕ ಶರಬರೆ ವೀಕ್ಷಿಸಿ ರಥ ಒತ್ತಿ
ತಕ್ಷಣದಲಿ ಸಾಸಿರಾಕ್ಷ ತನಯನ ಪೊರೆದಿ ೫

ಧರ್ಮಾನಸ್ತ್ರದ ನಿಜ ಮರ್ಮವರಿತು ನೀ
ಧರ್ಮಾಪೌತ್ರನ ಕಾಯ್ದಿ ಸುಧರ್ಮನಾಮಕ ನಿನಗೆ ೬

ದಶಾಸ್ಯ ಮುಖಮಹನಿಶಾಚರೇಶರ
ದಶಾಕಳದ ಮಹಾ ದಶಾವತಾರನೆ ೭

ವಟಾದ ಎಲೆಸಂಪುಟಾದಲೊರಗುಂ –
ಗುಟಾವ ನುಂಬುವ ದಿಟಾ ವಿಶ್ವೋದರ ೮

ದಾತಾ ಗುರುಜಗನ್ನಾಥ ವಿಠಲ ನಿಜ
ದೂತಾಪಾಲಕನೆಂದು ಖ್ಯಾತಾನಾಗಿಹ ನಿನಗೆ ೯

## ೧೮

ತಿಳಿಯ ಬಲ್ಲೆನೆ ನಾನಿನ್ನ ವೆಂಕಟರಮಣ ಪ

ತಿಳಿಯ ಬಲ್ಲೆನೆ ನಿನ್ನ ನಳಿನಭವಾದ್ಯರಿ
ಗಳವಡಿಯದ ಪಾದ ನಳಿನಮಹಿಮೆಗಳ ಅ.ಪ

ಭಜಿಪಜನಕೆ ಭಾಗ್ಯ ನಿಜವಾಗಿ ನೀಡುವಿ
ಅಜನ ಪಿತನೆ ನಿನ್ನ ನಿಜರಾಣಿ ಮಹಾಲಕ್ಷ್ಮೀ
ದ್ವಿಜರಾಜ ವರೂಥ ಭುಜಗೇಂದ್ರ ನಿನ ಶಯ್ಯ
ಭುಜಗಭೂಷಣ ಪೌತ್ರ ಅಜನಾಂಡ ನಿಜಸದನ
ಗಜಮೊಗ ಸುರರೆಲ್ಲ ನಿಜಪರಿವಾರವು
ವಿಜಯಸಾರಥಿ ನೀನೆ ಭಜಕರ ಸುರಧೇನು
ವಿಜಯದಾಯಕ ನೀನೆಂದು ನಿನ್ನಯ ಪಾದ
ಭಜನೆ ಬೇಡಿದೆ ಕೃಪಾಸಿಂಧು ನಂಬಿದೆ ನಿನ್ನ
ಸುಜನವಾರಿಧಿ ಶರದೇಂದು ಪಾಲಿಸು ಎನ್ನ
ನಿಜವಾಗಿ ಪೇಳುವೆ ವೃಜಿನಮರ್ದನನೆಂದು ೧

ಎಡಬಲದಲಿ ನಿನ್ನ ಮಡದೇರ ಒಡಗೂಡಿ
ಒಡಲನಾಮಕವಾಗಿ ಒಡಲೊಳಿದ್ದನ್ನವ
ವಡಬಾಗ್ನಿಯೊಳುನಿಂತು ಜಡಜಸಂಭವಸುರ
ಗಡಣ ಕೆ ನೀಡುತ್ತಾ ಒಡೆಯನೆನಿಸಿ ಭವ
ಕಡಲ ದಾಟಿಸಿ ಚರರ ದಡಸೇರಿಸುವನೆಂದು
ಸಡಗರದಿಂದಲಿ ಅಡಿಯುಗ ಸೇವಿಪೆ
ಮೃಢನುತ ಪದಕಮಲಾಯುಗನೆ ಈ
ಪೊಡವಿಯೊಳಗೆ ಮಹಲೀಲಾ ಮಾಡುತ ನಿತ್ಯ
ಒಡೆಯ ಪುಷ್ಕರಣಿಕೂಲನಿಲಯ ಜಗ
ದ್ವಡೆಯ ಎನ್ನನು ಪೊರೆ ತಡವ್ಯಾಕೊ ಸಿರಿಲೋಲ ೨

ಸಿದ್ಧರಾಮಶೆಟ್ಟಿ ಶುದ್ಧಸ್ವರೂಪನೆ
ಮುದ್ದುಮೋಹನ ಮುಖಕೆ ತಿದ್ದಿತೀಡಿದನಾಮ
ಶುದ್ಧ ಭಕ್ತರನ್ನೆಲ್ಲ ಮುದ್ದುಗೊಳಿಸುವಂಥ

ಮುದ್ದಾದ ಮುಖದಲ್ಲಿ ಎದ್ದು ಕಾಣುವ ನಗೆ
ಪೊದ್ದುಕೊಂಡಿಹ ನಾನಾ ಆಭರಣದಿಂದಲಿ
ಎದ್ದು ಬರುವ ನಿನ್ನ ಪ್ರದ್ಯೋತನಿಭ ಮೂರ್ತಿ
ತಿದ್ದಿ ಎನ್ನಯಮನದಿ ನೀನೀಗವಾಸುದೇವ
ಸದ್ಯೋ ಕೆಡಿಸೊ ದುರಿತರಾಶಿಯನ್ನು
ಶುಧ್ಧಮಾಡೋ ನೀನೀಗ ವಾಸುದೇವ
ಮದ್ಹೃದಯಗತಬಿಂಬ ಸಿದ್ಧಗುರುಜಗನ್ನಾಥ ವಿಠಲರೇಯ ೩

## ೧೯

ನಮೋ ನಮೋ ವೆಂಕಟೇಶಾ ಸರ್ವೋತ್ತಮಾನೆ ಶ್ರೀಶಾ ಪ

ರಮಾರಮನೆ ಸದ್ಧಿ ಮಾಕರಾರ್ಕಮುಖ
ಸುಮಾನಸಾನತ ಸಮೀರನಗಧೀಶಾ ಅ.ಪ

ವರವೈಕುಂಠದಿಂದ ಈ ಧರಾತಳಕೆ ಬಂದ
ಚರಣಕಮಲಕೆ ಶರಣು ಮಾಳ್ಪರ
ಕುರುಣಿಸೀ ಭವ ಅರಣದಾಟಿಪ ೧

ಧರೇಶ ತೊಂಡನೃಪಗೆ ನೀ ದರಾರಿ ಇತ್ತವಗೆ

ಧರಾಸುರೇಶನ ಜರತರಿದು ಬಹು
ತ್ವರದಿ ಯೌವನ ಖರೆಯನೀಡಿದಿ ೨

ಇಭರಾಜ ನಿನ್ನ ನುತಿಸೆ ಅಭಯವಿತ್ತೆಘನ್ನಾ
ಶುಭಕರನೆ ನಿನ್ನ ಪ್ರಭಾವ ಕೇಳಿದೆ
ಪ್ರಭುವೆ ಎನ್ನ ಭವಭಯಾಕಳಿಯೊ ಸ್ವಾಮಿ ೩

ಮಹಾನುಭಾವ ಎನ್ನ ಮನದಲಿ ವಹಿಸಿದೇ ನಿನ್ನ
ಗಹನಮಹಿಮನೆ ಮಹಾಪರಾಧವ
ಸಹನ ಮಾಡೆಲೊ ಅಹೀಶಗಿರಿವಾಸ ೪

ಪಾತಕಾದ್ರಿಕುಲಿಶಾ ನೀ ವಿಧಾತಾದಿಸುರಕುಲೇಶಾ
ನೀತಗುರು ಜಗನ್ನಾಥವಿಠಲ ನಿಜ
ದೂತಜನಕತಿ ಪ್ರೀತಾನಾಗುವೊ ದಾತಾ ೫

## ೨೦

ನಿನಗಿನ್ನ ನಾನಧಿಕ ಇಂದಿರೇಶಾ
ಎನಗೆ ನಾಥನು ಉಂಟು ಅನಾಥನು ನೀನು ಪ

ಕುಲಗೋತ್ರ ನಿನಗಿಲ್ಲ ಕುಲಗೋತ್ರ ಎನಗುಂಟು
ಲಲಿತರೂಪನು ನಾನು ಅರೂಪ ನೀನೂ
ಚೆಲುವ ಸುಗುಣಿಯು ನಾನು ಅಗುಣರೂಪನು ನೀನು
ಬಲಹೀನನು ನೀನು ಸಬಲ ನಾನು ದೇವಾ ೧

ನಾಮಧೇಯನು ನಾ ಅನಾಮಧೇಯನು ನೀನು
ಕಾಮಕಾಮುಕ ನಾ ಅಕಾಮಿ ನೀನು
ಪಾರನು ನಾ ಅಪಾರನು ನೀನಯ್ಯಾ
ನೇಮಬದ್ಧನು ನಾ ಅನೇಮಿ ನೀನು ೨

ಗತಿಯು ನೀನೆಗ್ಯೆಯ್ಯ ಸದ್ಗತಿಯು ನಿನಗಾರಯ್ಯ
ವ್ರತನೇಮ ಎನಗುಂಟು ನಿನಗಾವುವೋ
ಸತತಮಾನಿಯು ನಾನು ಅಮಾನಿ ನೀನಯ್ಯ
ವಿತತಕರ್ಮಿಯು ನಾನು ಕರ್ಮಹೀನನು ನೀನು ೩

ಪತಿತಪಾತಕಿ ನಾನು ಪತಿತಪಾವನನು ನೀನು
ರತಿಬದ್ಧನು ನಾ ವಿರತಿಯು ನೀನು
ಶ್ರೀತಜನರಪಾಲ ಆಶ್ರಿತ ನಾನು ನಿನಗ್ಯೆಯ್ಯ
ಸತತಪಾಲಕ ನೀನು ಪಾಲ್ಯ ನಾನು ೪

ದೂತರಾಧಮ ನಾನು ದೂತವತ್ಸಲ ನೀನು
ಆತುರನು ನಾನು ನಿಜದಾತ ನೀನು
ನೀತ ಗುರುಜಗನ್ನಾಥವಿಠಲರೇಯ
ತಾತ ನೀ ಎನಗಯ್ಯ ನಿನಗಾವ ತಾತಾ ೫

## ೨೧

ನಿನಗೆ ಅಚ್ಚರವಲ್ಲ ಅನುಮಾನಸಲ್ಲಾ
ಇನಿತು ಶ್ರಮ ಕಳೆಯದಿರೆ
ಘನತಿಲ್ಲ ನಿಮದಲ್ಲ ಪ

ಹಿಂದೆ ನಿನ್ನ ಅಜ್ಞಾ ನಾ ಒಂದು ಮೀರಿದಕೆ ನೀ
ಇಂದು ಭವಭವಣೆ ಬಹುಪರಿಯಿಂದಲೀ
ತಂದು ನೋಯಿಸಿ ಮನಸುನಿಂದದಲೆ ಪರರಿಗೆ
ಇಂದು ಮೊರೆಯನು ಹೋಗಿಸುವುದು ಥರವೇ ಹರಿಯೇ ೧

ಒಂದು ತಿಳಿಯದಲೆ ನಾನು ಅಂದ ಮಾತಿಗೆ ಮನಸು
ನೊಂದು ಈ ತೆರದಿ ಮಾಡುವುದು ರೀತೇ
ಕಂದನಪರಾಧಗಳ ಒಂದು ನೋಡದ ಜನನಿ
ಯಂದದಲಿ ನೀ ಪಾಲಿಸುವುದು ಸ್ವಾಮೀ ಪ್ರೇಮೀ ೨

ಜಾತಮಗನನು ನಿಜತಾತ ಪರರಿಗೆ ತಾನು
ಆತುರಾದಿಂದಲಿ ಮಾರಿದಂತೆ
ದೂತರನು ಜಗದೇಕನಾಥ ನೀ ಪರಿಪರಿ
ಘಾತಿಸಲು ಇನ್ನಾರು ಪೊರೆವರ್‍ಯ್ಯಾ ಜೀಯಾ ೩

ನಂಬಿದವರನ್ನು ನೀ ಅಂಬಿನಲಿ ಹೊಡೆವರೆ
ಕಂಬು ಅರಿ ಪದುಮ ಗದಧರಪಾಣಿಯೆ
ತುಂಬಿದ್ದರಿಗೋಲಲ್ಲಿ ಇಂಬುಗೊಂಡಿರುವಾಗ
ಅಂಬುಧಿಮುಣುಗಿಸುವದು ಥರವೇನೋ ೪

ಯಾತಕೀಸೊ ಮಾತು ಸೋತೆ ನಾ ನಿನಗೀಗ
ವಾತದೇವನ ತಾತ ಸೀತಾನಾಥಾ
ನೀತ ಶ್ರೀಗುರುಜಗನ್ನಾಥ ವಿಠ್ಠಲರೇಯ
ಮಾತು ಲಾಲಿಸಿ ಪಾಲಿಸುವದು ಇನ್ನಾ ಚೆನ್ನಾ ೫

## ೨೨

ನಿನಗೇನೊ ಭಕುತರ ಚಿಂತೀ
ಘನಮಹಿಮ ಮಹದಾದಿ ಸುರವಂದ್ಯ ತಿಮ್ಮಾ ಪ

ಶಿರಿದೇವಿ ನಿನರಾಣಿ ಪರಮೇಷ್ಟಿ ನಿನಪುತ್ರ
ಕಿರಿಯ ಮಗನು ಜಗತ್ಪ್ರಾಣದೇವಾ
ಹಿರಿಯ ಸೊಸೆಯು ವಾಣಿ ಕಿರಿಯು ಭಾರತೀ ದೇವಿ
ಪುರಹರನು ಮೊಮ್ಮಗನು ಸುರರು ಪರಿವಾರ ೧

ಸಕಲಲೋಕಕೆ ಅರಸು ಲಕುಮಿಕಾಂತನು ಎಂದು
ನಿಖಿಳವೇದ ಸ್ಮೃತಿಯು ಸಾರುತಿಹದೋ
ಅಖಿಳವ್ಯಾಪಕನಾಗಿ ಸಕಲಸುರನರರಿಂದ
ಭಕುತಿಪೂರ್ವಕ ಓಲಗವಕೈಕೊಂಬ ಸಮಯದಲಿ ೨

ಸುರನಾಥ ನೀನಲ್ಲದಿತರ ದೇವತೆಯುಂಟೆ
ಸರವೋತ್ತಮಾನೆಂಬನಾವನವನೋ
ಸರಸಗುಣನಿಧಿಯೆ ಶ್ರೀ ಗುರುಜಗನ್ನಾಥವಿಠಲ
ವರಭಾಗ್ಯ ಮಬ್ಬಿನಲಿ ಇರುವೊ ಸಮಯದಲಿ ೩

## ೨೩

ನಿನ್ನ ಅಂಜಿಕೆಯು ಎನಗೇನುದೇವಾ
ನಿನ್ನ ಭಕುತರಿಗಲ್ಲದಲೆ ಅಂಜುವೆನೆ ನಾನು ಪ

ನಿನ್ನ ಬೈದವನಿಗೆ ಪುಣ್ಯಲೋಕಗಳುಂಟು
ನಿನ್ನವರ ನಿಂದಕರಿಗನ್ಯಗತಿಯು
ನಿನ್ನ ನಿಂದಿಸಲು ಫಲವ ನೀಡುವಿ ದೇವಾ
ಜನ್ಮ ಜನ್ಮಕೆ ನಿನ್ನ ಜನ ದ್ವೇಷಸಲ್ಲಾ ೧

ರೂಪಕೆಡಿಸಿದವಗಾಪಾರ ಗತಿಯನೆ ಇತ್ತಿ
ಪಾಪಿಯವನಾದರೂ ಪುಣ್ಯಶಾಲೀ
ಕೋಪದಿಂದಲಿ ಒದ್ದ ಭೃಗುಮುನಿಯನು ಕಾದ್ಯಾ
ಮೋಸದ್ವೇಷವ ಮಾಡೆ ಪಾಪನರಕಾ ಅಹುದು ೨

ಧಾತಜನಕನೆ ನಿನ್ನ ಘಾತಿಸಲು ಪರವಿಲ್ಲ
ಯಾತಕಾದರು ನಿನ್ನ ದೂತರನ್ನಾ
ಮಾತಿನಿಂದಲಿ ದೂರೆ ಪಾತಕವೆ ಬರುವುದು
ನಿತ್ಯಲ್ಲ ಗುರುಜಗನ್ನಾಥ ವಿಠಲರೇಯಾ ೩

## ೨೪

ನಿನ್ನ ದಾಸನಿವನೇ ಅನನ್ಯ ರಕ್ಷಕನೇ ಪ

ಅನ್ಯರಿಗಾಲ್ಪರಿಯದಂತೆ ಮನ್ನಿಸಿ ಪೊರಿ ಧ್ವರಿಯೇ ಅ.ಪ

ಅನ್ಯನಲ್ಲವೊ ಸ್ವಾಮಿ ಮನ್ನಿಸೀ ಪೊರಿ ಪ್ರೇಮೀ
ಘನ್ನವಿಪತ್ತಿವಗೆ ಬಹುಬನ್ನಬಡಿಸುತಿಹುದೋ ೧

ಬಂದ ವಿಪತ್ತನ್ನು ಈಗ ಛಿಂದಿಸಿಬಿಡು ವೇಗ
ಬಂದಾದುರಿತಗಳೆಲ್ಲ ನೀ ನಿಂದ್ರಾದಂತೆ ಮಾಳ್ಪದೋ ೨

ಅನ್ಯರಿಗಸಾಧ್ಯವಿದು ಎನ್ನ ಮನಕೆ ತೋರುತಿಹದು
ನಿನ್ನನುಳಿದು ಕಾಯ್ವೊರಾರಾಪನ್ನ ಜನಪಾಲಾ ೩

ಇನ್ನು ಸಂದೇಹವ್ಯಾಕೆ ಘನ್ನ ಮಹಿಮಬೇಡಿಕೊಂಬೆ
ನಿನ್ನ ಸೇವಾ ನಿರುತವಿತ್ತು ಎನ್ನವಚನ ಲಾಲಿಸಯ್ಯಾ ೪

ಇವನ ಪೊರೆಯೇ ನಿನಗೆ ಖ್ಯಾತಿ
ಭುವನದೊಳಗೆ ಬಪ್ಪೊದಯ್ಯ
ದೂತಜನಪಾಲ ಗುರುಜಗನ್ನಾಥವಿಠಲ
ತಾನೆ ಪ್ರೀತನಾಗುವನು ೫

## ೨೫

ನಿನ್ನ ದಾಸರ ದಾಸನೆಂತಹನೋ
ಅನಂತ ಅಪರಾಧ ಅನುಗಾಲ ಮಾಡುತಿಹೆ ಪ

ಸ್ನಾನ ಸಂಧ್ಯಾ ಜಪ ಮೌನವೇ ಮೊದಲಾದ
ನಾನಾವಿಧದ ವಿಹಿತ ಧರ್ಮತೊರೆದು
ನಾನು ನನ್ನದು ಎಂಬೊ ಹೀನ ಬುದ್ಧಿಗಳಿಂದ
ಹೀನ ಜನರೊಡಗೂಡಿ ಜ್ಞಾನಿಗಳ ನಿಂದಿಸುವೆ ೧

ಏಕಾದಶಿಯ ಜರಿದು ಲೋಕವಾರ್ತೆಗಳಿಂದ
ಶ್ರೀಕಾಂತ ನಿನ್ನ ಸೇವೆಯನು ಮರೆದು
ಬೇಕಾದ ವೈಷಿಕವ ಸ್ವೀಕರಿಸಿ ಲೋಕದೊಳು
ಸಾಕಿದವರನು ನಾ ನಿರಾಕರಿಸಿ ಬಾಳುವೆನು ೨

ಎನಗಿಂತ ಅಧಿಕರಾದವರ ಕೂಡ ದ್ವೇಷವನು
ಅನುಗಾಲ ಮಾಡುವೆನೊ ಅನಿಮಿಷೇಶಾ
ಎನಗೆ ಸರಿಯಾದವರ ಕಂಡು ಮತ್ಸರಿಸುವೆನು
ಎನಗಿಂತ ನೀಚರನು ನಾ ನೋಡಿ ನಗುತಿಪ್ಪೆ ೩

ಕಾಸಿನಾಸೆಗೆ ಪೋಗಿ ದಾಸವೇಷವ ಧರಿಸಿ
ಮೋಸಮಾಡುವೆ ಜನರ ಪಾಶದಿಂದಾ

ವಾಸುದೇವನೆ ಸರ್ವದೇಶ ಕಾಲಾದಿಗಳಿ
ಗೀಶನೆಂದರಿಯದಲೆ ಮೋಸಹೋದೆನು ಸ್ವಾಮಿ ೪

ಸಕಲ ದುರ್ಗುಣಕೆ ಆಗಾರ ನಾನವನಿಯೊಳು
ಭಕುತಿ ವೈರಾಗ್ಯ ಪ್ರಸಕುತಿಯಿಲ್ಲಾ
ಭಕುತವತ್ಸಲ ಗುರುಜಗನ್ನಾಥವಿಠಲನೆ
ಅಕಳಂಕಮಹಿಮನೆ ಮುಕುತಾಮುಕುತರೊಡೆಯಾ ೫

## ೨೬

ನೀನೇನೋ ನಿನ್ನ ಲಕ್ಷೇನೋ
ದಾನಿ ನಿನ್ನಯ ಪಾದಧ್ಯಾನಿಗಳಿರಲಿನ್ನು ಪ

ಹರಿ ನೀನು ಮುನಿದರೆ ಗುರು ಎನ್ನ ಕಾಯಿವೋನು
ಗುರು ತಾನೆ ಮುನಿದರೆ ಹರಿ ನೀನು ಕಾಯಿದೀಯಾ ೧

ಗುರು ದೊರೆತರೆ ಇನ್ನು ಹರಿ ನೀನು ದೊರೆತೀಯ
ಗುರುವು ದೊರೆಯದಿರೆ ಹರಿ ನೀನು ದೊರೆಯೆಯಯ್ಯ ೨

ಗುರು ತಾನು ಕರುಣಿಸೆ ಹರಿ ನೀನು ಕರುಣಿಪಿ
ಗುರು ಬಿಡಲು ಅವನ ಹರಿ ನೀನು ಬಿಡುವಿಯೊ ೩

ಗುರು ತಾನು ಗತಿಕೊಡೆ ಹರಿ ನೀನು ಗತಿಕೊಡವಿ
ಗುರು ಇಲ್ಲದವನಿಗೆ ಹರಿ ನೀನೂ ಇಲ್ಲವಯ್ಯಾ ೪

ಸುಗುಣಪೂರ್ಣ ಗುರುಜಗನ್ನಾಥ ವಿಠಲಾ
ಜಗಕೆ ಮುಖ್ಯ ಗುರು ನಿಗಮ ಪೇಳಿದಮೇಲೆ ೫

## ೨೭

ನೋಡಿದೆ ವೇಂಕಟ ನಿನ್ನ ನೋಡಿದೆ
ನೋಡಿದೆ ವೇಂಕಟ ನಿನ್ನ ಪ

ಕೊಂಡಾಡಿ ಬೇಡಿದೆ ವರವನ್ನ ಆಹಾ
ರೂಢಿಯೊಳಗೆ ನಿನಗೆ ಈಡುಗಾಣೆನೊ ದೇವ
ನಾಡುದೈವಗಳೆಲ್ಲ ಒಡಿಪೋದವೊ ಸ್ವಾಮಿ ಅ.ಪ

ಮಣಿಗಣಮಯದ ಕಿರೀಟ, ಕಪ್ಪುವ
ರಣಕುಂತಲದ ಲೋಲ್ಯಾಟ, ಯುಗತ
ರಣಕುಂಡಲ ಬಹು ಮಾಟ ಅರ
ಗಿಣಿ ಶಶಿಪೋಲ್ವ ಲಲಾಟ ಆಹಾ
ಎಣೆಗಾಣೆ ಕಸ್ತೂರಿ ಮಣಿರ್ದಿಪ ಭ್ರೂಯುಗ
ಕುಣಿಯುತ ಸ್ಮರಧನು ಗಣಿಸದೊ ಎಲೋದೇವಾ ೧

ವಾರಿಜಯುಗಸಮನಯನ, ನಾಸ
ಚಾರುಚಂಪಕ ತೆನೆ, ವದನದೊಳು
ತೋರುವ ಸುಂದರರದನ ಪಂಕ್ತಿ
ಸಾರಿದಾಧರ ಬಹು ಅರುಣ, ಆಹಾ
ಸಾರಸಮುಖದೊಳು ಸೇರಿ ಶೋಭಿಪ ಚುಬಕ
ಕೂರುಮಯುಗಕದಪು ಸಾರಕಟಾಕ್ಷವ ೨

ಕಂಧರಾಂಕಿತ ಸತ್ರಿರೇಖಾ, ಕಂಠ
ಪೊಂದಿಪ್ಪೊದ್ವರ್ತುಲ ಕ್ರಮುಕ, ಕೊರಳ
ಸುಂದರಕೌಸ್ತುಭಪದಕ, ಬಹು
ಬಂಧುರ ಚೈತ್ರ ಸುರೇಖ ಆಹಾ
ಹಿಂದೆ ಸಿಂಹದ ಹೆಗಲಿನಂದದಲೊಪ್ಪಿದ
ಸ್ಕಂಧದಿ ಶೋಭಿಪ ಒಂದು ಸರಿಗೆಯನ್ನು ೩

ಸ್ವನ್ನ ಏಕಾವಳಿಹಾರಾ, ಬಾ
ವನ್ನ ಪುತ್ಥಳಿ ಸಿರಿಯಾಕಾರ, ಬಹು
ಚನ್ನವಾಗಿಹ ನಾನಾಹಾರ, ಶುಭ್ರ
ವರ್ಣ ಶೋಭಿಪ ಜನಿವಾರ ಆಹಾ
ಇನ್ನು ಗುಂಡಿನಮಾಲೆ, ಘನ್ನ ಜಲಸರಪಳಿ
ಉನ್ನತದಾನರ್ಘ್ಯ ರನ್ನ ಜಯಂತಿಯಾ ೪

ಶಿರಿವತ್ಸಲಾಂಛನಹೃದಯ, ಸುರ
ಕರಿಕರತೆರಬಾಹು ಶಿರಿಯಾ, ನಾಲ್ಕು
ಕರಗಳೊಪ್ಪವವೀಪರಿಯ, ಮೇಲಿ
ನ್ನೆರಡು ಹಸ್ತದಿ ಶಂಖ ಅರಿಯ ಆಹಾ
ವರರತ್ನ ಮುದ್ರಿಕೆ ಧರಿಸಿದ ಬೆರಳುಳ್ಳ
ಕರತೋಡ ಕಡಗಕ್ಕೆ ಸರಿಗಾಣೆ ಧರೆಯೊಳು ೫

ಪರಮವೈಕುಂಠದಕಿಂತ ಈ
ಧರಿತಳವದಿಕವೆನ್ನು ತಾ ಬಲ
ಕರದಿಂದ ಜನಕೆ ತೋರುತಾ ಬಾಹು
ಎರಡು ಆಜಾನುಪೂರಿತಾ ಆಹಾ
ಸ್ವರಣರತ್ನ ಖಚಿತ ವರನಾಗಭೂಷಣ
ಧರಿಸಿ ಟೊಂಕದಿ ವಾಮಕರವಿಟ್ಟು ಮೆರೆವೋದು ೬

ಹಸ್ತಯುಗದಿ ತೋಡ್ಯ ಕಡಗ, ಪ್ರ
ಶಸ್ತ ರತ್ನದ್ವರಳಸಂಘ ರಚಿತ
ಸಿಸ್ತಾದ ಉಂಗುರ ಬೆಡಗ, ಬಹು
ವಿಸ್ತರಾಂತರ ಭುಜಯುಗ ಆಹಾ
ಹಸ್ತಿವರದ ಸಮಸ್ತಲೋಕಕೆ ಸುಖ
ವಿಸ್ತಾರ ನೀಡುತ ಸಿಸ್ತಾದ ದೇವನ ೭

ಉದರ ತ್ರಿರೇಖ ರೋಮಾಳಿನಾಭಿ
ಪದುಮ ಶೋಭಿಪ ಗುಂಭಸುಳಿ ಮೇಲೆ

ಉದಯಾರ್ಕ ಪೋಲುವ ಕಲೆ ಇಂದ
ಸದಮಲಾಂಬರಪಟಾವಳಿ ಆಹಾ
ಬಿದುರಶೋಭಿತ ಮಹಾಚದುರದೊಡ್ಯಾಣವು
ಪದಕ ಮುತ್ತಿನ ತುದಿ ವಿಧವಿಧ ಪೊಳೆವೋದು ೮

ಕುಂಭಿಮಸ್ತಕದೋಲ್ನಿತಂಬ, ದಿಂದ
ರಂಭೆ ಪೋಲುವ ಊರುಸ್ತಂಭ, ಇಂದು
ಬಿಂಬವೆನಿಪ ಜಾನು, ಡಿಂಬ ಭಕ್ತ ಕ
ದಂಬ ಮೋಹಿಪ ವಿಡಂಬ ಆಹಾ
ಅಂಬುಜಾಸನಪಿತನ ತುಂಬಿದ ಮೀನ್ಜಂಘ
ನಂಬಿದ ಜನರನ್ನ ಇಂಬಾಗಿ ಸಲಹೋನಾ ೯

ಪರಡೆರಡು ಮಾಣಿಕ್ಯಾವರಣ, ಪೊಳೆವ
ಕಿರುಗೆಜ್ಜೆನೂಪುರಾಭರಣ ಇಟ್ಟು
ಮೆರೆವೊ ಗಂಗೆಯ ಪೆತ್ತ ಚರಣ ಯುಗ
ನಿರುತ ಭಜಿಪರೊಳತಿ ಕರುಣ ಆಹಾ
ಮರೆಯದೆ ಮಾಡುತ ಪರಿಪರಿ ಸೌಖ್ಯವ
ಕರೆದುನೀಡುವನಹಿಗಿರಿವಾಸ ಶ್ರೀಶನ್ನ ೧೦

ಪೋತೇಂದು ನಖಯುತ ಬೆರಳ ಸಾಲು
ದೂತತತಿಗೆ ಸುಖಗಳನಿತ್ತು
ನೀತಜ್ಞಾನ ಭಕ್ತಿಗಳ ನಿತ್ಯ
ಪ್ರೀತಿಪಡೆಯೆ ಮುಕ್ತಿಗಳ ಆಹಾ
ವಾತಗುರುಜಗನ್ನಾಥವಿಠಲನತಿ
ಪ್ರೀತಿಂದ ಪುರುಷಾರ್ಥದಾತನಾದುದು ನಿತ್ಯ ೧೧

## ೨೮

ಬಂದು ಸಂಸಾರದಿ ನೊಂದು ತಾಪತ್ರಯದಿ
ಬೆಂದು ಕಂದಿ ಕುಂದಿದೆ ದೇವಾ ಪ

ಪರಮ ಕರುಣಿಯೆ ನಿನ್ನ ಶರಣು ಪೊಕ್ಕಾ ಜನರ
ಪರಿಪಾಲಿಪನೆಂಬ ಬಿರಿದೊ ಅರಿದೂ ನೀನೆ
ಮೆರೆಯದಲೆ ಸಲಹಬೇಕೆನ್ನ ನಿನ್ನ
ಚರಣನೀರಜಯುಗ್ಮವನ್ನಾ ತೋರಿ
ಹರುಷವನೆ ನೀಡೆಲೋ ಮುನ್ನಾ ಘನ್ನ
ಪರಮಭಕುತಿ ವಿರಕುತಿ ನೀನೆ ಎನಗಿತ್ತೆನ್ನ
ಹರುಷದಲಿ ಪಾಲಿಸೈಯ್ಯಾ ಜೀಯಾ ೧

ಮಾನುಷಾಧಮ ನಾನು ಹೀನಮತಿಯಲಿ ನಿನ್ನ
ಧ್ಯಾನವನು ಮಾಡದಲೆ ಬರಿದೆ ಜರಿದೆ ಇಂಥ
ಹೀನಭವದೊಳಗೆ ಬಾಯಿದೆರದೆ ದಿವ್ಯ
ಜ್ಞಾನಿಜನರನ್ನು ನಾ ಜರಿದೆ ಜ್ಞಾನ
ಹೀನನಾಗಿ ಕಾಲಕಳೆದೆ ಇನ್ನು
ಶ್ರೀನಿವಾಸನೆ ನಿನ್ನ ಧ್ಯಾನ ಮಾಡುವೆನೋವಿ –
ಜ್ಞಾನವನೆ ಪಾಲಿಸಯ್ಯಾ ಜೀಯಾ ೨

ಈಸುವತ್ಸರ ನಿನ್ನುಪಾಸನವ ಮಾಡದಲೆ
ರಾಸಭಾನಂತೆ ಬದುಕಿದೆ ದೇವಾ ಈಗ
ವಾಸವಾಗೆಲೋ ಮನದಿ ಸ್ವಾಮೀ ನಾನು
ಈಸಲಾರೆನು ಭವದಿ ಪ್ರೇಮೀ ಎನ್ನ
ಆಸೆ ಪೂರ್ತಿಸೊ ಅಂತರ್ಯಾಮಿ ಇನ್ನು
ಎಸುವಿಧದಲಿ ಸರ್ವೇಶ ಪೇಳಲಿ ಮುನ್ನೆ
ಈಶ ಭವಶ್ರಮ ಕಳಿಯೋ ಈಗಾ ವೇಗಾ ೩

ಆವ ಕರ್ಮದಲಿಂದ ಈ ವಸುಮತಿಯಲ್ಲಿ
ಈ ವಿಧಾದಿಂದ ಬಂದೆ ನಿಂದೆ ನಿನ್ನ
ಸೇವಕಾನಲ್ಲವೆ ತಂದೆ ಎನ್ನ
ಆವಾಗ ನೋಡುವಿಯೊ ಮುಂದೆ ಈಗ
ಕಾವವನಾರು ನಾ ಎಂದೆ ವೇಗ
ದೇವ ನಿನ್ನಯ ಪಾದಸೇವೆ ಸುಖವನು ಇತ್ತು
ಆವ(ಅವ)ರಂತೆ ಪೊರೆಯೊ ಎನ್ನಾ ಚೆನ್ನಾ ೪

ಉರಗಾದ್ರಿ ನಿಲಯನೆ ವರಭೋಗಿಶಯನನೆ
ಪರಮಪುರುಷನು ಎಂದು ಮೊರೆಯಾ ಇಡುವೆ ನಿನ್ನ
ಪರಿಪರಿಯ ಜನರನ್ನು ಪೊರೆವೆ ಎನ್ನ
ತಿರಸ್ಕಾರ ಮಾಡುವುದು ಥರವೇ ನಿನ್ನ
ಮರಿಯಾದೆಯಲ್ಲಮರತರುವೇ ಕೃಪಾ
ಕರನೇ ಸರ್ವರಿಗು ಸರಿಯಾಗಿ ಇರುತಿರುವಿ
ಗುರುಜಗನ್ನಾಥ ವಿಠಲಾ ವತ್ಸಲಾ ೫

## ೨೯

## ಶ್ರೀನಿವಾಸದೇವರು

ಬಾರಯ್ಯ ವೇಂಕಟ ಮನ್ಮನಕೆ
ತ್ವರಿತದಿ ನಿಜನಾರೀಸಹಿತದಿ ಈ ಸಮಯಕೆ
ಶರಣೆಂಬೆನು ಪದಯುಗಕೆ ಪ

ಸಾರಿದ ನಿಜಶರಣನ ಈ ಭವಭವ
ಘೋರಭಯವ ಪರಿಹರಿಸುವುದಕ್ಕೆ ಅ.ಪ

ವ್ಯಕ್ತಾವ್ಯಕ್ತ ತ್ರಿಜಗದ್ವ್ಯಾಪ್ತಾ
ದೋಷ ನಿರ್ಲಿಪ್ತಾ
ಮುಕ್ತಾ ಮುಕ್ತ ಜೀವರ ಗಣದಾಪ್ತಾ
ನೀ ಸರ್ವತ್ರದಿ ವ್ಯಾಪ್ತ
ಭಕ್ತನ ಹೃದಯದಿ ವ್ಯಕ್ತನಾಗಿ ನಿಜ
ಮುಕ್ತಿಪಥವ ತೋರೊ ಭಕ್ತಿಯನಿತ್ತು ೧

ಆನಂದನಿಲಯಾ ನಿರ್ಮಲಕಾಯಾ
ಕವಿಜನಗೇಯಾ
ಆನಂದದಾಯಕ ನಿರ್ಜಿತಮಾಯಾ

ಕಾಯಯ್ಯಾ ಜೀಯಾ
ಆನತಜನಸನ್ಮಾನದ ಮನ್ಮನ
ವನಜದಿ ನೀ ಸನ್ನಿಹಿತಾಗುವುದಕೆ ೨

ಸೋಮಾಸುರನಾಮಕ ದೈತ್ಯನ ಕೊಂದೂ
ವೇದವ ತಂದೂ
ಕೂರ್ಮ ಕಿಟ ನರಹರಿ ರೂಪದಿ ನಿಂದೂ
ವಾಮನನೆಂದೂ
ರಾಮ ಭಾರ್ಗವ ಯದುಕುಲಸಾಗರ –
ಸೋಮ ಬೌದ್ಧ ಕಲ್ಕಿ ಪ್ರೇಮದಿ ಮನಕೆ ೩

ನಿಗಮಗೋಚರ ನಿತ್ಯಾನಂದಾ
ಸುಗಮ ನಿನ್ನಿಂದಾ
ಬಗೆಬಗೆ ಜನ್ಮವನೈದಿದೆ ಮುಕುಂದಾ
ಮುಗಿವೆನೊ ಕರದಿಂದಾ
ಅಗಣಿತ ಗುಣನಿಧಿ ಸುಗಮದಿ ಭವದ
ಬಗೆಯನು ತಿಳಿಸೊ ನಗೆ ಮೊಗದಿ ಬಾ ೪

ವಿಧಿಶಂಭುವಂದಿತ ಪದಯುಗಕಮಲಾ
ನಿತ್ಯ ನಿರ್ಮಲಾ
ಆಧಿಭೂತಾಧ್ಯಾತ್ಮಿಕತಾಪದ ಶಮಲಾ
ನೀ ಮಾಡೆನ್ನನು ವಿಮಲಾ
ಸದಯ ಸುಧಾಕರ ಹೃದಯದಿ ತವಪದ
ಪದುಮ ಭಜಿಪೆ ನೀ ಮುದದಲಿ ಮನಕೆ ೫

ಸಾಸಿರನಾಮ ನತಜನಪ್ರೇಮಾ
ಪೊರೆಯೋ ಶ್ರೀ ರಾಮಾ
ಆಶೀ ಪೂರ್ತಿಸಿ ಮಾಡೆನ್ನಲಿ ಪ್ರೇಮಾ
ಸುರಸಾರ್ವಭೌಮಾ

ವಾಸಮಾಡಿ ಅಭಿಲಾಷೆಯ ಪೂರ್ತಿಸೊ
ವಾಸುದೇವ ವಾರಾಸಿಜರಮಣಾ ೬

ಶರಣಾಗತಜನಪರಿಪಾಲಾ
ಕರುಣಾಲವಾಲಾ
ಕರುಣಿಸೆನ್ನನು ಹೇ ಶಿರಿಲೋಲಾ
ನಮಿತಜನಸುರಸಾಲ
ಶಿರಿ ಅಜ ಭವ ಸುರ ನಿಕರಾರ್ಚಿತಪದ
ಸರಸಿಜಯುತ ನೀ ಸುರವರದೇವಾ ೭

ಪನ್ನಗಗಿರಿ ನಿಜಕೃತವಾಸಾ
ಪೊರೆ ಎನ್ನನು ಶ್ರೀಶಾ
ಬಿನ್ನಪ ಮಾಳ್ಪೆನು ಹೇ ಶ್ರೀನಿವಾಸಾ
ಕೊಡು ಎನಗೆ ಲೇಸಾ
ಎನ್ನ ಸಲಹೋದಕೆ ಅನ್ಯರ ಕಾಣೆನೊ
ಮನ್ನಿಸು ನೀನಾಪನ್ನಜನಸುಖದಾ ೮

ಲಕ್ಷ್ಮೀನಾಯಕ ವರಪಕ್ಷಿಗಮನಾ
ಅಕ್ಷಯ ಫಲವನ್ನ
ರಕ್ಷಿಸಿ ಕಾಯ್ವುದೋ ನೀ ಎನ್ನಾ
ಲಕ್ಷ್ಮಣನಣ್ಣಾ
ಅಕ್ಷರಕ್ಷರವಿಲಕ್ಷಣ ಕರುಣ ಕ –
ಟಾಕ್ಷದಿ ಎನ್ನ ವೀಕ್ಷಿಸು ಕ್ಷಣ ಕ್ಷಣ..... ೯

ಧರ್ಮಾರ್ಥಕಾಮಮೋಕ್ಷವ ನಾನೊಲ್ಲೇ
ಕರ್ಮದ ಸುಳಿಯಲ್ಲೇ
ಮರ್ಮವ ತಿಳಿಯದೆ ಬೀಳುವೆ ನಾನಲ್ಲೇ
ನಿರ್ಮಿಸದಿರು ಎನ್ನಲ್ಲೇ
ಕರ್ಮಭವದ ಮಹ ಮರ್ಮವ ತಿಳಿಸೀ
ದುರ್ಮನ ಬಿಡಿಸೆಲೊ ಬೊಮ್ಮನ ತಾತಾ ೧೦

ದಿಟ್ಟ ಗುರು ಜಗನ್ನಾಥವಿಠಲ
ನಾನನಾಥಾ
ಥಟ್ಟಾನೆ ನೀ ಎನ್ನನು ಕಾಯೋ ಶ್ರೀನಾಥಾ
ಇಷ್ಟೇ ಎನಮನದರ್ಥ
ಸೃಷ್ಟಿಯೊಳಗೆ ಬಹು ಭ್ರಷ್ಟರಸ್ತುತಿಸಿ ನಿ –
ಕೃಷ್ಟನಾದೇನೋ ಶ್ರೇಷ್ಠ ಮೂರುತೀ ೧೧

## ೩೦

ಯಾಕೆ ನಿನ್ನ ಮನಕೆ ಬಾರೆನೊ ಶ್ರೀವೇಂಕಟೇಶ
ಯಾಕೆ ನಿನ್ನ ಮನಕೆ ಬಾರೆ ಸಾಕೊ ನಿನ್ನ ಧ್ವರಿಯತನ ಪ

ಕಾಕುಜನರ ಕಾಯ್ದು ಎನ್ನ ಸಾಕದಿರುವದೇನು ನ್ಯಾಯ ಅ.ಪ

ನಿನ್ನನೊದ್ದ ದ್ವಿಜನ ನೀನು ಮನ್ನಿಸಿ ಜಗದೊಳಗವನ
ಘನ್ನನೆನಿಸಿ ಪೊರೆದು ಎನ್ನ ಬನ್ನ ಬಡಿಸೋದು ನ್ಯಾಯವೇ ೧

ನೀಚತರ ಕಿರಾತನಘ ಮೋಚನ ಮಾಡಿ ಪೊರೆದಿ
ನಾಚಿಕಿಲ್ಲದೆಂಜಲ್ಹಣ್ಣು ಯಾಚಿಸಿ ತಿಂದ್ಯಲ್ಲೊ ೨

ಹೊಟ್ಟೆಗಶನವಿಲ್ಲದಿರವೊ ನಷ್ಟ ದಾರಿದ್ರ್ಯ ದ್ವಿಜನ
ಮುಷ್ಟಿಯವಲಕ್ಕಿ ತಿಂದು ಅಷ್ಟೈಶ್ವರ್ಯ ಕೊಟ್ಟಿಯಲ್ಲೊ ೩

ಶಕ್ರಾದಿ ಸುರವಂದ್ಯ ತ್ರಿವಿಕ್ರಮನೆನಿಸಿ ತ್ರೀ –
ವಕ್ರೆಗಂಧಕೆ ಒಲಿದು ಕುಬ್ಜೆಯ ಆಕ್ರತದಲಿ ಬೆರೆತಿಯಲ್ಲೊ ೪

ಕನ್ನೆ ಹಾಲುಗಳ್ಳನೆಂದು ನಿನ್ನ ಒರಳಿಗೆ ಕಟ್ಟಲಾಗ
ಉನ್ನತಾದ ಸುಖವಿತ್ತು ಚಿನ್ನನಾಗಿ ನಡೆದಿಯಲ್ಲೊ ೫

ಇಷ್ಟು ಜನರು ನಿನ್ನ ದಿವ್ಯ ಪೊಟ್ಟೆಮಕ್ಕಳೇನೊ ನಾ
ಬಿಟ್ಟತನಯನೆಂದು ಕರುಣಾ ದೃಷ್ಟಿಯಿಂದ ಪೊರೆಯವಲ್ಯಾ ೬

ದಾತ ಗುರುಜಗನ್ನಾಥ ವಿಠಲ ನೀನು
ಪಾತಕಿ ಜನರ ಪೊರೆದ ರೀತಿ ಏನುನ್ಯಾಯವೋ ೭

## ೩೧

ಯಾಕೆ ನಿನ್ನ ಮನಕೆ ಬಾರೆನೋ ಹೇ ವೇಂಕಟೇಶ ಪ

ಯಾಕೆ ನಿನ್ನ ಮನಕೆ ಬಾರೆ ಸಾಕು ನಿನ್ನ ಧೊರಿಯತನಾ
ಕಾಕು ಬುದ್ಧಿ ಎನಗಿಲ್ಲೋ ಹೇ ವೆಂಕಟೇಶಾ ಅ.ಪ

ಪದದಿ ಭೃಗಮುನಿ ನಿನ್ನಹೃದಯಕೊದ್ದ ತೆರದಿ ನಾನು
ಬೆದರಿ ನಿನ್ನ ನೊದೆಯಲಿಲ್ಲೊ ಹೇ ವೆಂಕಟೇಶಾ ೧

ವನದಿ ಬಂದಾಗ ಬೊರೆಬನದಲ್ಲಿಯ ಬರಿಯಂಜಲು
ತಿನಿಸಿದ ತರ ನಾ ತಿನಿಸಲಿಲ್ಲವೋ ಹೇ ವೆಂಕಟೇಶಾ ೨

ತೊಂಡಪಾರ್ಥ ರಣದಿ ತನ್ನ ಬಂಡಿ ಬೋವನ ಮಾಡಿದಂತೆ
ಭಂಡಿ ಹೊಡಿ ಎಂದು ನಡೆಸಲಿಲ್ಲವೋ ಹೇ ವೆಂಕಟೇಶಾ ೩

ದಿಟ್ಟ ಗುರುವಿನ ಮನಿಗೆ ಕಟ್ಟಿಗಿ ಹೊರಿಸಿದಂತೆ
ಕಟ್ಟಿಗೆಯ ಹೊರಿಸಲಿಲ್ಲವೋ ಹೇ ವೆಂಕಟೇಶಾ ೪

ಕೆಟ್ಟ ಕಾರ್ಯ ಮಾಡಿದವರು ಇಷ್ಟರೆ ಸರಿ ನಿನಗೆ ನಾನು
ಕೆಟ್ಟ ಕಾರ್ಯ ಮಾಡಿಲಿಲ್ಲವೊ ಹೇ ವೆಂಕಟೇಶಾ ೫

ದುಷ್ಟನೆಂದು ಜನರು ನಿನ್ನ ಮುಟ್ಟಲಂಜೀ ದೂರಪೋಗೆ
ಮುಟ್ಟಿ ನಿನ್ನ ಭಜಿಸಿದ ಫಲವೇನೋ ಹೇ ವೆಂಕಟೇಶಾ ೬

ದಾತ ಶ್ರೀ ಗುರುಜಗನ್ನಾಥ ವಿಠಲನೆಂದು ನಾ
ಪ್ರೀತಮನದಿ ಬಂದೆನೋ ವೆಂಕಟೇಶಾ ೭

## ೩೨

ಯಾಕೆ ಪುಟ್ಟಿದೊ ಕರುಣ
ಶ್ರೀ ಕರಾರ್ಚಿತ ಜಗದೇಕಕಾರಣ ಶ್ರೀಕರಾದೇವಾ ಪ

ಪಾಕಶಾಸನ ಮುಖ್ಯಾನೇಕ ಜೀವರನು ನೀ
ಸಾಕುವನಿಗೆ ನಾನ್ಯಾಕೆ ಬಾರೆನೊ ಮನಕೆ ಅ.ಪ

ಅಶನವಸನಗಳಿಲ್ಲಾ ಪಶುಮನಿಧನವಿಲ್ಲಾ
ಕೃಷಿಧಾನ್ಯಕನಕವಿಲ್ಲಾ ಸ್ವಾಮಿ
ವಸತಿಸ್ಥಳವಿಲ್ಲಾ ವಸುಧೆ ತಿರುಗುವೆನಲ್ಲಾ
ವಸುಧೆ ಭಾರಾದೆನಲ್ಲಾ ಸ್ವಾಮಿ
ಕುಸುಮನಾಭನೆ ಎನಗೆ ಮುಸುಗಿದ ದಾರಿದ್ರ್ಯ
ಕಸವಿಸಿ ಬಡಿಪದಲ್ಲಾ ಸ್ವಾಮಿ
ಬಿಸಜಲೋಚನ ಮಹಾ ವ್ಯಸನಪಂಕದಿ ಬಿದ್ದು
ವ್ಯಸನ ಬಡುತಿಹ ದ್ವಿಪದ ಪಶುವಿನ ನೋಡಿ ನಿನಗೆ ೧

ಜನನಿ ಜನಕ ತನಯಾ ವನುತೆ ಈ ದೇಹಾ
ಅನುಬಂಧಿ ಮೊದಲಾದ ಜನರಾ ಸ್ವಾಮಿ
ಮನಕೆ ಬಾರೆನೊ ಅವರ ಅನುಕೂಲವಾಗದಲೆ
ಜನಕೆ ಬ್ಯಾಸರನಾದೆನೊ ಸ್ವಾಮಿ
ಮನುಜದೇಹವ ಧರಿಸಿ ಮನುಜಸುಖಗಳನ್ನು
ಅನುಭವವೆ ಮಾಡಲಿಲ್ಲಾ ಸ್ವಾಮಿ
ಜನುಮವ್ಯಾಕೆಂದು ಆ ಜನರೋಕ್ತಿಯಿಂದೀಗ
ವನದಲ್ಲಿ ಸಂಚಾರ ಇನುತೆ ಮಾಳ್ಪನ ನೋಡಿ ೨

ಶರಣಪಾಲಕ ಸ್ವಾಮಿ ಕರುಣಸಾಗರನೆಂದು
ಶರುಣುಯ್ಯೆದಿದೆನೊ ನಿನ್ನಾ ಸ್ವಾಮಿ

ಕರುಣಪೂರ್ವಕ ಮದಂತಃಕರಣ ಮಧ್ಯದಿ ನಿನ್ನ
ಚರಣಪಂಕಜ ತೋರಿಸೋ ಸ್ವಾಮಿ
ವರಣಿಸಾಲೇನಿನ್ನು ಸುಪರಣವಹನ ಭವ
ಅರಣವನೆ ದಾಟಿಸೋ ಸ್ವಾಮಿ
ಕರಣರಹಿತಶಾಯಿ ಕರಣ ವೈರಿಯ ಮಿತ್ರ
ಕರುಣಿಸ್ಯನ್ನನು ಎಂದು ಶರಣು ಪೊಕ್ಕದು ನೋಡೀ ೩

ನರರ ಸೇವೆಯ ಮಾಡಿ ನರರ ಗುಣ ಕೊಂಡಾಡಿ
ನರರ ಸ್ತೋತ್ರವನೆ ಮಾಡಿ ಸ್ವಾಮಿ
ನರರ ಯಾಚನೆ ಮಾಡಿ ನರರ ಯೋಚನೆ ಮಾಡಿ
ನರರ ಮನೆವಾಸಮಾಡಿ ಸ್ವಾಮಿ
ನರರ ಮಾತನೆ ಕೇಳಿ ನರರಗಾಥವ ಕೇಳಿ
ನರರ ದೌತ್ಯವನೆ ಮಾಡಿ ಸ್ವಾಮಿ
ಪರಿಪರಿಭವದುಃಖ ಹಿರಿದಾಗಿ ಅನುಭವಿಸಿ
ಹರಿ ನಿನ್ನ ಚರಣಾಶ್ರಯಸಿದವನಾ ನೋಡೀ ೪

ಯಾತಕೀಪರಿ ಕಷ್ಟನಾಥ ಬಂದಿಹದೆನಗೆ
ಯಾತಕೆ ಪೋಗದಿನ್ನಾ ಸ್ವಾಮಿ
ವಾತದೇವನ ತಾತ ಸೀತಾನಾಥನೆ ನಿನ್ನ
ದೂತರಾಧಮನಲ್ಲವೇ ಸ್ವಾಮಿ
ತಾತ ಕೇಳೀಗೆನ್ನ ಮಾತು ಮನಸಿಗೆ ತಂದು
ಯಾತಕೂ ಪರರ ಬೇಡದಂತೆ ಸ್ವಾಮಿ
ದಾತ ನೀನೆಂದು ನಾ ಆತುರದಿ ಬೇಡಿದೆನೊ
ನೀತ ಗುರುಜಗನ್ನಾಥವಿಠಲ ನಿನಗೆ ೫

## ೩೩

ವಿರುಪಾಪುರ ವೇಂಕಟರಮಣ ನಿತ್ಯ
ಸ್ಮರಿಸುವೆ ನಿನ್ನ ಚರಣ

ಕರುಣಿಸೊ ನಾ ನಿನ್ನ ಶರಣ ಪೊರಿಸೊ
ನಿನ್ನಯ ಕರುಣಾ ಪ

ಎನ್ನನು ಕಾಯಲು ನಿನಗೆ ಲೋಕದಿ
ಘನ್ನ ಕೀರುತಿ ಬ್ಯಾಗ
ನಿನ್ನ ದಾಸನು ನಾನಾಗೆ ಭವದಲಿ
ಬನ್ನ ಬಡಿಪರೇನೊ ಈಗ ೧

ನ್ಯಾಯವೇನೋ ನಿನಗೆ ಎನ್ನನು
ಕಾಯದಿರುವದೀಗ
ಬಾಯಿ ಬಡಕ ನೀನಾಗೆ ತಪ್ಪದೊ
ಅನ್ಯಾಯಕಾರಿ ಕೊನಿಗೆ ೨

ಮಾತೆ ಮಗಗೆ ವಿಷವೆರಿಯೇ? ತಂದೆಯು
ಪೋತರ ಮಾರೋದು ಬಗೆಯೆ?
ಆತಿಹ ಬೇಲಿಯು ಕುಲಮೋಯೆ ನರ
ನಾಥನು ಸರ್ವಾಪಹಾರವು ಗೈಯೆ ೩

ಆರಿಗೆ ಉಸರಿದೇನು ಕಂ –
ಸಾರಿಯೆ ಧ್ವರಿ ನೀನೂ
ಆರನು ಕಾಣದೆ ನಾನೂ ತವ ಪದ
ಸಾರಿ ಮನದಿ ಭಜಿಸುವೆನು ೪

ಶಿರಿ ಗುರು ಜಗನ್ನಾಥ ವಿಠಲ
ಪರಿಸರಜನಪ್ರೀತಾ
ಮರೆಯದೆ ಪಾಲಿಸೊ ದಾತಾ ನಿನಪದ
ದೂತರ ದೂತನೊ ಶಿರಿನಾಥಾ ೫

## ३४

ಶರಣು ವೆಂಕಟನಾಥ ಪೊರೆನಿಜ
ಕರುಣಿ ಖಗವರೂಥ ಪ

ನತಜನಕೃತಸರಣಾ ದಿತಿಸುತ
ಮಥನನೆ ತವಚರಣಾ
ಸತತ ಎನಗಾಭರಣಾ ಎಂದೆಂಬೆನೊ
ಗತರೋಗಜರಾಮರಣಾ ೧

ಸನಕಾದಿಮುನಿಮಾನ್ಯ ನಿನ್ನವ
ರಣುಗನೆನಿಸೋ ಎನ್ನಾ
ಅನುಪಮಗುಣರನ್ನಾ ಒಲಿದು ಕಾಂ
ಚನಗಿರಿವಾಸ ಎನ್ನಾ ೨

ಎನ್ನ ದೋಷಗಳೆಲ್ಲ ನೋಡದಲೆ ಪ್ರ
ಪನ್ನಜನರವತ್ಸಲಾ
ಅನ್ಯಿಗ ನಾನಲ್ಲ ಶ್ರೀಗುರು ಜ –
ಗನ್ನಾಥ ವಿಠಲಾ ೩

## ३५

ಶ್ರೀನಿವಾಸಾ ನಿನ್ನಯಾಟ ಏನು ಪೇಳಾಲಿ ಪ

ಜ್ಞಾನಿಗಳು ನಿನ್ನಾ ಗುಣಗಳನ್ನು ತಿಳಿಯಾರೂ ಅ.ಪ

ನಿತ್ಯತೃಪ್ತನೆನಿಸಿ ನೀನು
ಸತ್ಯಜಗವನುಂಬುವೀ
ಸತ್ಯ ಸಂಕಲ್ಪನೆನಿಸೀ ನೀ
ಮಿಥ್ಯ ಮಾತನಾಡುವೀ ೧

ನಾರನೆನಿಸಿ ವ್ರಜದ ಪರ
ನಾರಿಯರ ಕೆಡಸೀದೀ
ಸಾರಜನರಘಾವಳೀ
ಚೋರನೆನಿಸಿದೀ ೨

ಜನನರಹಿತನಾಗಿ ಗೋಪೀ
ತನುಜನೆನಿಸೀದೀ
ಸ್ತನವನಿತ್ತ ಪೂತನಿಯನ್ನು
ಹನನಮಾಡಿದೀ ೩

ದಾನವನಿತ್ತ ಬಲಿಯನೊತ್ತಿ
ಹೀನ ಚೈದ್ಯನ ಪೊರೆದೆಯೋ
ಧ್ಯಾನಮಾಡುವ ಯೋಗಿವರರ
ಕಾನನಕಟ್ಟೀದೀ ೪

ನಿನ್ನ ನಿಂದಿಪ ಜನಕೆ
ಘನ್ನ ಸಂಪದ ನೀಡಿದೀ
ನಿನ್ನ ಸೇವಿಪ ಜನರಾ
ಬನ್ನ ಬಡಿಸೀದೀ ೫

ನೀನೇ ಧ್ವರೀ ಎಂದು ಹೀಗೆ
ನೀನು ಮಾಡುವರೇನೋ
ದೀನಜನರುದ್ಧಾರ ಮಾಡದೆ
ದೀನಭಾವವ ತೋರುವೀ ೬

ಶ್ರೀತರುಣಿ ನಿನ್ನ ರಾಣಿ
ಪೋತ ಪ್ರಾಣನಿರಲು ಕಷ್ಟ
ಯಾತಕೆ ಗುರುಜಗ
ನ್ನಾಥವಿಠಲ ನಿನಗೇ ೭

## ೩೬

ಶ್ರೀರಮಣ ನಿನ ಪಾದ ಸಾರಿದಾ ಸುಜನರಿಗೆ
ಘೋರ ದುರಿತಗಳುಂಟೆ ಪ

ದೂರ ಓಡುವವಿನ್ನು ಘೋರಸಿಂಹನ ಕಂಡ
ವಾರಣನಿಚಯದಂತೇ ಇಂತೆ ಅ.ಪ

ಚೋರಭಯ ಮಹವ್ಯಾಘ್ರ ನೀರುಘೂಳಿ ಬೆಂಕಿ
ಧಾರುಣಿ ಪೊರೆವೊ ರಾಜ
ಕ್ರೂರಘಾತಕಶಸ್ತ್ರ ವಾರಾಣಾ ಹರಿ ಸಿಂಹ
ಜಾರನಾರೇರ ಸಂಗವು
ಮಾರ ಮದಕದ ಜಾಳಿಹೋರ ಇಡುವೋ ಬ್ಯಾನಿ
ನಾರಿ ಮೊದಲಾದ ಹುಣ್ಣು
ಈ ರೀತಿ ಬರಲಿನ್ನು ಆರಿಗಾದರು ಘನ್ನ
ಚಾರುನಾಮಕ್ಕೆ ಸರಿಯೇ ಧ್ವರಿಯೇ ೧

ಖೇದ ಆಧಿ ವ್ಯಾಧಿ ಬಾಧಿ ನಿತ್ಯದಿ ಬಹು
ಆದರದಿ ಬರುತಿಪ್ಪವೋ
ವೇದಶಾಸ್ತ್ರದ ಮಹಾಹಾದಿ ತಪ್ಪಿ ಅಲವ
ಭೋದ ತೀರ್ಥರ ಭಜಿಸದೆ
ಓದನಾಸಿಗೆ ಸದನ ಕಾದುಕೊಂಡು ಪರರ
ಮೋದದಿಂದ ಭಜಿಸದೆ
ಸಾಧು ಸಂಗವ ಬಿಟ್ಟಾ ಸಾಧು ಕರ್ಮಗಳಿಂದ
ಸಾಧಿಸಿದ ಪಾಪದಿಂದೇ ಬಂದೇ ೨

ಏನು ಮಾಡಿದ ಪಾಪ ನೀ ನೋಡದಲೆ ಮುನ್ನೆ
ಸಾನುರಾಗದಿ ಪಾಲಿಸೋ
ಶ್ರೀನಿವಾಸನೆ ನಿನ್ನ ದೀನಜನರು ಹಿಂದೆ
ನಾನಾದೋಷಗಳು ಅಲ್ಲೆ

ನೀನು ನೋಡದೆ ಅವರ ಮಾನದಿಂದಲಿ ಪೊರೆದಿ
ಏನು ನ್ಯಾಯ ವಿಚಾರವೋ
ಏನು ಬಂದರು ನಿನ್ನ ನಾನು ಭಜಿಸಿದರಿನ್ನು
ನೀನು ಶ್ರಮ ಬಡಿಸೋದು ಥರವೇ ಪ್ರಭುವೇ ೩

ಇಂದು ದಿನಮೊದಲಾಗಿ ಒಂದುಕಾಲಕೆ ಜನರು
ವಂದನೆಯ ಮಾಡರಿನ್ನಾ
ಛಂದದಲಿ ನೀನ ನಾಮ ಹೊಂದಿದಾ ಮಹಿಮವು
ಇಂದು ನೊಂದು ಪೋಯಿತೋ
ಇಂದು ಈ ಪರಿ ಜನರ ಮುಂದೆ ಸಾರಲು ಸುದ್ದಿ
ಮುಂದ ಮುಂದಕೆ ಪೋಗದೋ
ಹಿಂದೆ ಮಾಡಿದ ಮಹಿಮದಿಂದ ಎನಗೇನು ಫಲ
ಇಂದು ಫಲಿಸಲು ಕೀರ್ತಿ ವಾರ್ತಿ ೪

ಆರು ಮಾಡಿದ ಕಾರ್ಯ ಕ್ರೂರ ಮಾಡಿದ ಕಂಡು
ಧೀರ ಸಹಿಸಿದೆಯೊ ನೀನು
ಪಾರು ಮಾಡೆಲೋ ಮುನ್ನ ಸಾರುವೆನು ನಿನ ಮುಂದೆ
ಕ್ರೂರಮನ ಸಾಗದಂತೆ
ಭಾರಿ ಭಾರಿಗೆ ಪಾದವಾರಿಜದ್ವಯ ಎನ್ನ
ಸಾರಮನದಲಿ ನಿಲ್ಲಿಸೀ
ತೋರು ಶ್ರೀವರ ನಿನ್ನಾಪಾರಮಹಿಮೆಯ ಮುನ್ನ
ಧೀರ ಗುರುಜಗನ್ನಾಥ ವಿಠಲಾ ವತ್ಸಲಾ ೫

## ೩೭

ಶ್ರೀಶನಂಘ್ರಿ ಪ್ರತಿವಾಸರ ಭಜಿಸಲಭಿಲಾಷೆ
ಸಲಿಸಿ ಪೊರೆವಾ ಪ

ವಾಸವಾನುಜ ಅಮರೇಶವಿನುತ ಶಿರಿವಾಸುದೇವ ದೇವ ಅ.ಪ

ಅಖಿಲಾರಾಧಿತ ಸುಖಮಯ ಹರಿವರ
ಸಖಸನ್ನುತ ಚರಣ
ನಿಖಿಲವ್ಯಾಪ್ತ ರವಿಶಿಖಿಶುಭೇಕ್ಷಣ
ನಖಮುಖಶಿಖ ಪೂರ್ಣಾ ೧

ಅನಿಮಿತ್ತ ಬಾಂಧವ ಅನಿಮಿಷರೊಡೆಯಾ
ಅನುದಿನದಲಿ ಕರೆವಾ
ಜನರಿಗೆ ಇಹಪರ ಘನಸುಖಕೊಟ್ಟಿವ
ರಣುಗನಾಗಿ ಇರುವಾ ೨

ಶಿರಿಪತಿ ತನಪದವನು ಸ್ಮರಿಸಿದ ಸುಜನರ
ಗುರುಜಗನ್ನಾಥ ವಿಠಲಾ
ನಿರುತದಿ ಪಾಲಿಪ ಮರೆಯದೆ ನರಹರಿ
ಪರಿಸರವತ್ಸಲಾ ೩

## ೩೮

ಸದಾ ನಿನ್ನ ಭಜಿಪೆ ದಯದಿ
ಪದಾಯುಗವ ನೀಡಿನ್ನಾ ಪ

ಹೃದಾಯದಲಿ ನಿಂತು ಮುದಾವ ನೀಡುತ
ಬುಧಾಮತಿಯನಿತ್ತು ಬದೀಗನಾಗಿಪ್ಪೆ ಅ.ಪ

ಉದಾಧಿಶಯನ ಎನ್ನ ವದನದಿ
ಸದಾ ನಿಂತು ಘನ್ನಾ ರನ್ನಾ
ಪದಾದಿವಚನವ ಸದಾಯಭಾವದಿ
ಮುದಾದಿ ಮುಖದಲಿ ಉದಾಯಗೈಸಿದಿ ೧

ಮದಾಕರಿಯ ಭಂಗಾ ಮಾಡಿ
ಸದಾ ನಿ ನಿಸ್ಸಂಗಾ ರಂಗಾ

ವದಾಗಿ ನೀನಂದು ಸುಧಾಮ ಗೊಲಿದೆಯೆ
ವಿದಾರಿತಾರಿಯೆ ಪದೂಮನಾಭನೆ ೨

ನೀತಾ ಗುಣಗಳನ್ನಾ ಇನ್ನಾ
ತಾತಾ ವ್ಯಕ್ತ ಮಾಡೊ ಘನ್ನಾ
ದಾತಾ ಗುರುಜಗನ್ನಾಥವಿಠಲ ನಿಜ
ದೂತಾನೆನಿಪ ಎನ್ನ ಮಾತು ಲಾಲಿಸೊ ಸ್ವಾಮೀ ೩

೩೯

ಸ್ಮರಿಸುವೆ ಶ್ರೀಹರಿಯಾ ಎನ್ನಯ ಧ್ವರಿಯಾ ಪ

ತ್ವರದಿ ಕಾಯ್ದನು ಕರಿಯಾ ಎನ್ನನು ಮರೆಯಾ ಅ.ಪ

ದುರುಳರಕ್ಕಸ ಸುತನಾ ತ್ವರದಿ ಕೊಲ್ಲಲೂ ಯತನಾ
ಭರದಿ ಮಾಡಲಾನತನಾ ಪೊರೆದೆ ಶ್ರೀನಿಕೇತನಾ ೧

ಶರಣಜನವತ್ಸಲಾ ಕರುಣದಿಪಾಲಿಪಾ ನತರಾ
ಶಿರಿಯ ಮಾನಸಲೋಲಾ ಸ್ವರತ ಗೋಪಾಲಬಾಲ ೨

ಗುರುಜಗನ್ನಾಥ ವಿಠಲಾ ಪರಮಪ್ರೇಮದಿ ನಿರುತಾ
ಸ್ಮರಿಪ ಜನಕೆ ದಾತ ಮರೆಯನೆಂದಿಗು ಖ್ಯಾತಾ ೩

೪೦

ಹರಿ ನೀನೆ ಸರ್ವಜ್ಞ ಸ್ವತಂತ್ರ ಸರ್ವಾಧಾರಕ
ಹರಿ ನೀನೆ ಸರ್ವೋತ್ಪಾದಕ ಸರ್ವೇಶ
ಹರಿ ನೀನೆ ಸರ್ವಜನಕ ಹರಿ ನೀನೆ ಸರ್ವಪಾಲಕ
ಹರಿ ನೀನೆ ಸರ್ವಮಾರಕ ಹರಿ ನೀನೆ ಸರ್ವಪ್ರೇರಕ
ಹರಿ ನೀನೆ ಸರ್ವಗತ ಹರಿ ನೀನೆ ಸರ್ವವ್ಯಾಪ್ತಾ

ಹರಿ ನಿನ್ನ ಕರುಣದಿಂದ ಶಿರಿ ಜಗಜ್ಜನನಿಯಾಗಿ
ಹರಿ ನಿನ್ನ ಕರುಣದಿಂದ ಪರಮೇಷ್ಠಿ
ಮರುತರು ಗುರುಗಳಾಗಿಹರು
ಹರಿ ನಿನ್ನ ಕರುಣದಿಂದ ಗಿರಿಶೇಂದ್ರರು ಪದವಿ ಪೊಂದಿದರು
ಹರಿ ನಿನ್ನ ಕರುಣದಿಂದ ಸಕಲರು ಸ್ಥಿತಿಯನ್ಯೆದಿಹರೋ
ಹರಿ ಗುರುಜಗನ್ನಾಥವಿಠಲಾ ನಿನಗೆ ನೀನೆ ಸಮನೋ

## ೪೧

ಹರಿ ನೀನೆ ಸರ್ವೋತ್ತಮ ಸರ್ವಜ್ಞ ಸರ್ವಾಧಾರ
ಹರಿ ನೀನೆ ಸರ್ವೋತ್ಪಾದಕ ಸರ್ವಪಾಲಕ
ಹರಿ ನೀನೆ ಸರ್ವನಾಶಕ ಸರ್ವಪ್ರೇರಕ
ಹರಿ ನೀನೆ ನಿಯಾಮಕ ನಿಯಾಮ್ಯನೋ
ಹರಿ ನೀನೆ ಬಾಧ್ಯ ಭಾಧಕ ವ್ಯಾಪ್ಯ ವ್ಯಾಪಕ
ಹರಿ ನೀನೆ ಕಾರ್ಯ ಕಾರಣ
ಹರಿ ನೀನೆ ಕರ್ತೃಕರ್ಮಕ್ರಿಯಾ ಶಕ್ತಿ
ಹರಿ ನೀನೆ ಧಾತೃ ದೇಯ ದಾನಪಾತ್ರನೊ
ಹರಿ ನೀನೆ ಸಹಕಾರಿ ಸಹಿತ ಪೋಗುವೀ
ಹರಿ ನೀನೆ ಮುಂಪೋಗಿ ಪರರೀಗೀಪರಿ
ಹರಿ ನೀನೆ ಪ್ರೇರಿಸಿ ಕಾರ್ಯಮಾಳ್ಪಿ
ಹರಿ ನೀನೆ ಸರ್ವದ ಸರ್ವತ್ರದಲಿ ನಿಂತೂ
ಹರಿ ನೀನೆ ಜೀವರ ಪರಿಪಾಲಿಸುವಿ
ಹರಿ ನೀನೆ ಸರ್ವರ ಬಿಂಬಮೂರುತಿ ಎಂದೂ
ಸರ್ವಜ್ಞ ರಾಯರು ಗೀತಾತಾತ್ಪರ್ಯದಿ
ವರದು ಈ ಪರಿಯಿಂದ ಜಗಕೆ ಪೇಳಿಹರೋ
ಹರಿ ನಿನ್ನ ಮಹಿಮೆಯನರಿಯಾದ ಮನುಜರು
ಧರೆಯೊಳು ಸರ್ವಕ್ಕು ನಾವೇ ಕರ್ತೃ
ಮರೆಯಾದೆ ಪೇಳುತ ಭವಸಿಂಧು ಮಧ್ಯದಿ
ಪರಿಪರಿ ದುಃಖವನುಣುತಿಹರೋ
ಹರಿ ನಿನ್ನ ಮರೆಯಾದ ಪರಮಜ್ಞಾನವನಿತ್ತು

ಪೊರೆಯ ಶ್ರೀಗುರು ಜಗನ್ನಾಥ ವಿಠಲರೇಯಾ
ಹರಿ ನಿನ್ನಯ ನಾಮವ ಮರೆಯದೆ ಪೇಳಿಸೋ
ಹರಿ ನಿನ್ನ ಸ್ಮರಣೆಯ ಕರುಣಿಸೋ ಕರುಣಿಸೋ
ಹರಿ ನಿನ್ನ ಧ್ಯಾನ ಮನದಲ್ಲಿ ಮಾಡಿಸೋ
ಹರಿ ನಿನ್ನ ಮೂರುತಿ ತೋರಿಸೊ ತೋರಿಸೋ
ಹರಿ ನಿನ್ನ ಕಾಣುವ ಜ್ಞಾನವನಿತ್ತು
ಪರಿಹರ ಮಾಡೆಲೊ ದುರಿತಗಳಾ
ಹರಿ ನಿನ್ನ ಭಕ್ತರ ಸೇವಕನೋ
ಹರಿ ಎನ್ನನು ಭಾದಿಪ ದಿತಿಜರ
ತ್ವರಿತದಿ ತರಿದೂ ಸ್ಥಿರ ಸುಖವಿತ್ತೂ
ಪರಮ ದಯಾನಿಧೇ ಗುರುಗಳದ್ವಾರಾ
ಹರಿ ನಿನ್ನ ಗುಣಗಳ ಕೀರ್ತನೆ ಮಾಡಿಸೋ
ಗುರುಗಳ ಕರುಣಾಕವಚವ ತೊಡಿಸೋ
ಗುರುವಂತರ್ಗತನಾಗಿಹ ನಮ್ಮ
ಗುರುಜಗನ್ನಾಥವಿಠಲ ನೀನೇ
ಪರಿಪರಿವಿಧದಲಿ ಪೊರೆಯುವ ಕರುಣೀ

## ೪೨

ಹರಿಯ ಭಕುತರ ಸಂಗ ಎನಗೆ ಇರಲಿ ದೇವಾ ಪ

ಪರಿಪರಿ ಜನುಮಾವು ಬಂದರಿನ್ನಾ
ಮರೆಯದೆ ಪೊರೆವೊರೊ ಭಕ್ತವತ್ಸಲರೆಂಬೊ
ಬಿರುದು ಪೊತ್ತಿರುವೋರೊ ಧರೆಯ ಒಳಗೆ ಇಂಥಾ ಅ.ಪ

ಹರಿಕಥಾ ಮಹಿಮೆಯ ಪರಿಪರಿವಿಧದಿಂದ
ವರೆದು ವರೆದು ನಿತ್ಯ ತಿಳಿಸುವರೋ
ಪರಮ ಪುರುಷ ಹರಿಚರಣಾವು ಮನದಲ್ಲಿ
ಸ್ಥಿರವಾಗಿ ಭಜಿಸುವಾ ವರಯೋಗ ಪೇಳ್ವಂಥ ೧

ದುರುಳ ಸಂಸಾರದಿ ಹೊರಳುವ ಜನ ತಮ್ಮ
ಚರಣಕೆ ಮೊರೆಪೋಗೆ ವರಸುಖವ
ಗರೆದು ಮಂದಿರವಿತ್ತ ಪರಿಪರಿಸೌಖ್ಯವ
ಕರೆದು ಕೊಡುತಲಿ ಈ ಧರೆಯೊಳು ಮೆರೆವಂಥ ೨

ಜಗದಿ ಪೂಜಿತರಾಗಿ ಬಗೆಬಗೆ ಮಹಿಮವ
ನಗುತ ಮಾಡುವ ಹರಿಯ ಭಜಿಸುತಲಿ
ನಿಗಮವಂದಿತ ಗುರುಜಗನ್ನಾಥ ವಿಠಲನು
ಸುಗಮಾದಿ ಒಲಿವಂಥಾ ಬಗೆಯ ಪೇಳುವರಿಂಥಾ ೩

## ೪೩

ಹರಿಯೆ ನೀನು ಎನ್ನಾ ಮೊರೆಯ ಲಾಲಿಸೆಂದೆನೂ ಪ

ಪರಿಪರಿ ಭಕುತರನ್ನಾ ಪೊರೆದ ನೀನು ಎನ್ನಾ
ಜರಿದಾ ಕಾರಣವೇನು ಈ ಪರಿಯಾ ಪೇಳೋ ನೀನೂ
ನಿನ್ನ ಚರನಲ್ಲವೇ ನಾನೂ ಈ ಪರಿಯ ಮಾಡೋರೆ ನೀನೂ
ಥರವಲ್ಲ ನಿನಗೇನೂ ಅ.ಪ

ಪರಮ ಭಕುತಿಯಿಂದಾ ನಿನ್ನ
ಚರಣಾ ಭಜಿಸೆನೆಂದಾ
ಚರನ ಭಕುತಿಜ್ಞಾನ ಕೆಡಿಸೀ
ದುರುಳಕಾರ್ಯವ ಮಾಡಿಸುವೆನೆಂದಾಪರ
ತರುಳೆಯರ ಕೂಡಿಸುವನೆಂದಾ ಈ
ಪರಿಯ ವಾಕ್ಯವ ಕೇಳಿ ನಾನೂ
ಜರಿದು ಬಿಟ್ಟರೆ ನೀನೂ
ಪರಮ ಕೋಪವಮಾಡಿ
ಬಿರಿಗಣ್ಣಿಲಿಂದಾ ನೋಡಿ ನೀನೆ
ಶಿರಸು ಕಾಯದಿ ನೀಡೀ ಈ
ಧರಣಿತಳವನು ತೋಡಿ (ಮತ್ತೇ)

ದುರುಳನೊಡಲ ತೋಡಿ ನೀ
ಕರಬಿಕ್ಷಾಟನವ ಮಾಡಿ
ಧರಣೀಶರೊಡನೆ ಕಾದಾಡಿ ಸಾ –
ಗರವ ಬಂಧನ ಮಾಡಿ
ಪರನಾರಿಯರನೆ ಕೂಡಿ
ವರತುರಗವನೇರೋಡೀ ೧

ನಿನ್ನಾ ಚರಣಾವ ನಾನೂ ಎನ್ನ
ಮನ್ನಾದಿ ಭಜಿಸುವೆನೊ
ಘನ್ನ ಇದನೆ ಪಾಲಿಸೆಂದೂ
ನಿನ್ನಾ ಬೇಡಿದಾರೆ ಅ –
ದನ್ನು ನೀಡದಾಲೆ ಆ –
ಮನಸುನಿತ್ತು ಎನ್ನಾ
ಬನ್ನ ಬಡಿಸುವರೆ ಎಂದಾ
ಎನ್ನ ನುಡಿಯಾ ಕೇಳಿ
ಕಣ್ಣು ತೆಗೆದೂ ನಿಂದೂ ನೀ
ಬೆನ್ನಲಿ ಭಾರವ ತಂದೂ
ಮಣ್ಣು ಕೆದರೀ ತಿಂದೂ ನೀ
ಚಿನ್ನಕಶಿಪುನ ಕೊಂದು ಭೂ –
ವನ್ನೇ ದಾನವ ತಂದು ತಾ –
ಯನ್ನೇ ನೀನೇ ಕೊಂದು ಅ –
ರಣ್ಯದೊಳು ಬಂದೂ ಗೋ –
ವನ್ನೆ ಕಾವುತ ನಿಂದೂ ಪರ –
ಹೆಣ್ಣುಗಳನೆ ತಂದೂ
ಘನ್ನ ತುರಗೇರುವೆನೆಂದೂ ೨

ನಾಥಾ ನೀನೇ ಎನ್ನಾ ಮಹಾ
ಪಾತಕ ಕಳೆಯೋ ಇನ್ನಾ
ಈ ತೆರ ನುಡಿದಾ ಎನ್ನಾ
ಮಾತು ಕೇಳದೆ ನೀನೂ

ಪಾತಕ ಕಳೆಯದಿರುವರೇನೋ
ಯಾತರ ಮಾತೆಂದು ನುಡಿಯಲದು -
ಭೂತ ಕೋಪವ ಮಾಡೀ ನೀನು
ಪಾಥಾಚರನು ತಾನೂ ಅದು -
ಭೂತಾ ಕೂರುಮಾನು
ಶ್ವೇತ ವರಾಹನು
ಅತ್ತ ನರಮೃಗ ರೂಪಾನು
ಪೋತನಾದಾನು
ಮಾತೆ ಶಿರ ಹರಿದಾನು
ತಾತನಾಜ್ಞವ ಕೇಳ್ಯಾನು ಪರ -
ಧೂತಾನೆನಸಿದಾನು ಅವ -
ಧೂತಾ ನೆನಿಸಿದಾನು
ಶ್ವೆತಾಶ್ವಗ ಗುರುಜಗನ್ನಾಥವಿಠಲ ನೀನೂ ೩

## ಮಹಾಲಕ್ಷ್ಮಿ

### ೪೪

ಇಂದಿರೇ ಪಾಲಿಸು ಕಮಲಮಂದಿರೆ ಪ

ಇಂದಿರೆ ಇಂದುನಿಭಾಸ್ಯೆ - ಗುಣ -
ವೃಂದ ಶೋಭಿತೆ ಶುಭಗಾತ್ರೆ - ಆಹಾ
ಇಂದು ಶೇಖರಸುರವಂದಿತಪಾದ
ದ್ವಂದಾರವಿಂದಳೆ ಮಂದಸ್ಮಿತಾನನೆ ಅ.ಪ

ಅರುಣದಿಂದೊಪ್ಪುವ ಚರಣ ಯುಗಳಾ -
ಭರಣ ಭೂಷಿತ ಯೋಗಿಶರಣಾ ನಿಜ
ಶರಣರ್ಗೆ ರನ್ನದರ್ಪಣಾಭವ -
ಅರಣತಾರಣಕಾರಣ - ಆಹಾ
ಶರಣು ಪೊಕ್ಕೆನು ದೇವಿ ಚರಣಕಮಲಯುಗ
ವರಣಿಸಲಳವಲ್ಲ ಕರುಣಿಸು ನೀ ಎನ್ನ ೧

ಶ್ರುತಿನುತವಿತತಸಚ್ಚರಿಯೆ ಸದಾ-
ನತರ ಸಂತೈಪೊದಾಶ್ಚರಿಯೆ ನಿನ್ನ
ಸ್ತುತಿಸಿದವಗೆ ಮಹಾ ಶಿರಿಯೆ ಮತ್ತೆ
ನತಿಸದ ಉಗೆ ಘೋರ ನಿರಯ ಅಹಾ
ಸತತ ನಿನ್ನಲಿ ಮನೋರತಿನಿತ್ತು ಶೋಕದ
ವ್ರತತಿ ಖಂಡಿಸಿ ಸುಖತತಿಯ ಪಾಲಿಸು ದೇವೀ ೨

ಜಗಕೆ ಸೃಷ್ಟಿಸ್ಥಿತಿನಾಶಕಾರಿ
ಬಗೆ ಬಗೆ ಭವನದಲ್ಲಿ ಕ್ಲೇಶ-ಹರಸಿ
ಸುಗಮದಿಂದ ಪರಿತೋಷ-ಬಡಿಸಿ
ನಗಿಸುವಿ ಎನ್ನಭಿಲಾಷಾ ಅಹಾ
ನಗೆಮುಖದಲಿ ಗುರು ಜಗನ್ನಾಥ ವಿಠಲನ್ನ
ಅಗಲಿ ಇರದೆ ನಿತ್ಯ ಸೊಗಸಾಗಿ ಇರುತಿಪ್ಪಿ ೩

## ೪೫

ಇಂದಿರೆ ನಿನ್ನ ಪಾದ ವಂದಿಸುವ ಎನ್ನ
ಮಂದಿರದಲ್ಲಿ ನಿಲ್ಲೆ ಕೇಳುವದೇನ ಸೊಲ್ಲೆ ಪ

ಅಂಧಕೂಪದ ಭವ ಸಿಂಧೂವಿನೊಳು ಬಹು
ನೊಂದು ನಿನ್ನ ಬೇಡಿಕೊಂಬೆ ಪಾಲಿಸು ಜಗದಂಬೆ ೧

ಇಂದಿರೇಶನರಾಣಿ ಮಂದಭಾಗ್ಯನ ಕರುಣ -
ದಿಂದಲಿ ಎನ್ನ ನೋಡೆ ನೀ ನಲಿದಾಡೆ ೨

ಮಂದಜಾಸನ ಜನನಿ ಸುಂದರ ಸುಗುಣಿ ನಿನ್ನ
ಕಂದನು ನಾನಮ್ಮ ಶಿರಿಯೆ ನೀ ಸುಖ ಸುರಿಯೆ ೩

ಎಂದಿಗು ಎನ್ನನು ಪೊಂದಿದ ಈ ಭವ
ಬಂಧನ ಬಿಡಿಸೆಂದೆ ನಿನ್ನನು ಬೇಡಿಕೊಂಡೆ ೪

ದಾತ ಗುರುಜಗನ್ನಾಥ ವಿಠಲನ
ಪ್ರೀತಿಯಿಂದ ಎನಗೆ ತೋರೆ, ನೀ ಎನ್ನ ಮನೆಗೆ ಬಾರೆ ೫

## ೪೬

ಇಂದಿರೆ ಪಾಲಿಸು ಎನ್ನ ಪ

ಇಂದಿರೆ ನಿನ್ನನು ವಂದಿಸಿ ತುತಿಸುವೆ
ವಂದಿಪ ಜನಕಾನಂದ ನೀಡುವ ದೇವೀ ಅ.ಪ

ಮಂದಜಾಸನ ಮುಖ ಸುರರಾ ಕರುಣ
ದಿಂದಲಿ ಪಾಲಿಪೆ ಅವರ
ಇಂದು ಮುಖಿಯೆ ನಿನ್ನ ಸದರ ಸದಾ
ಪೊಂದಿದ ಜನಕೆ ಅಧಾರಾ ಆಹ –
ಳೆಂದು ನಿನ್ನಯ ಪಾದದ್ವಂದ್ವಜಲಜ ಮನೋ –
ಮಂದಿರದಲಿ ನಿತ್ಯ ವಂದಿಪೆ ಹರಿರಾಣೀ ೧

ಕರುಣವಾರಿಧಿ ನಿನ್ನ ಚರಣ – ಸದಾ
ಸ್ಮರಣೆ ಮಾಳ್ಪರ ಪಾಪಹರಣ
ಶರಣ ಜನರ ದುಃಖದಾವರಣ ಪರಿ –
ಹರಿಸಿ ಮಾಡುವಿ ಪೂರ ಕರುಣಾ ಆಹಾ
ಸರಿಯಿಲ್ಲ ನಿನಿಗಿನ್ನು ಹರಿಗೆ ಸಮಾಸಮೆ
ತ್ವರಿತಾದಿ ಎನ್ನನು ಮರೆಯದೆ ಪೊರೆಯೆಂದೆ ೨

ಮಾತೆ ದಾರಿದ್ರ್ಯವ ಕಳೆದು ನಿನ್ನ
ದೂತ ನಾನೆಂದು ನೀನೊಲಿದು
ಮಾತು ಲಾಲಿಸಿ ಭಾಗ್ಯಗರಿದು ಎನಗೆ
ನೀತವಾಗಿ ಸುಖ ಸುರಿದು ಆಹಾ
ದಾತಗುರುಜಗನ್ನಾಥವಿಠಲ ನೀ –
ಕೇತನ ಸುಖ ಎನಗೆ ಈ ತೆರ ನೀಡಮ್ಮಾ ೩

## ೪೭

ಕಾಯೆ ಕರುಣಾಂಬುಧಿಯೆ
ತೋಯಜನಯನೆ ಪ

ಕಾಯೆ ಕರುಣಿ ಗಿರಿರಾಯನ ಪಟ್ಟದ
ಜಾಯೆ ಭವದಲಿ ನೋಯಗೊಡದಲೆನ್ನ ಅ.ಪ

ಅಂಬುಜಾಂಬಕೆ ಅಂಭೃಣಿ ಸುಗುಣ ಸನ್ಮಣಿ
ಕಂಬುಚಕ್ರಾಂಕಿತಪಾಣಿ
ಅಂಬೆ ನಿನ್ನಯ ಪಾದಾಂಬುಜ ನಂಬಿದೆ
ಬಿಂಬನ ಎನ ಹೃದಯಾಂಬರದಲಿ ತೋರೆ ೧

ಕಾಮಿತಾರ್ಥ ಪ್ರದಾತೆ ಜಗದೊಳಗೆ ಖ್ಯಾತೆ
ಕಾಮಿತ ಸಲಿಸೆನ್ನ ಮಾತೆ
ಪ್ರೇಮದಿ ನಿನ್ನನು ನೇಮದಿ ಭಜಿಪೆನ್ನ
ಧಾಮದೊಳಗೆ ನೀ ಕ್ಷೇಮದಿ ನಿಲಿಸೀ ೨

ದೂತಜನಕತಿ ಪ್ರೀತೆ ಈ ಜಗಕೆ ಮಾತೆ
ಸೀತೆ ಪಾಲ್ಗಡಲಾ ಸಂಭೂತೆ
ದಾತ ಗುರುಜಗನ್ನಾಥ ವಿಠಲಗೆ
ಪ್ರೀತ ಸತಿಯೆ ಸುಖವ್ರಾತವ ಸಲಿಸಿ ನೀ ೩

## ೪೮

ಕರುಣದಿ ಎನ್ನ ಪೊರಿಯೇ
ತೊರಮ್ಮ ಶಿರಿಯೇ ಪ

ಶರಣರ ಪೊರೆಯುವ ಕರುಣಿಯೆ ನಿನ್ನಯ
ಚರಣಯುಗಕೆ ನಾ ಶರಣು ಮಾಡಿದೆ ದೇವೀ ಅ.ಪ

ವಾರಿಜಾಂಬಕೆ ಅಂಭ್ರಣೀ ಶ್ರೀ ಹರಿಯ ರಾಣಿ
ಮಾರಾರಿ ಮುಖಸುರ ಸಂತ್ರಾಣಿ
ವಾರವಾರಕೆ ನಿನ್ನ ಸಾರಿಭಜಿಪೆ ಎನ್ನ
ದೂರ ನೋಡದೆ ಪೊರಿಭಾರ ನಿನ್ನದು ತಾಯಿ ೧

ಸೃಷ್ಟಿ ಸ್ಥಿತಿಲಯ ಕಾರಿಣೀ ಸುಗುಣಸನ್ಮಣಿ
ಕಷ್ಟ ದಾರಿದ್ರ್ಯ ದುಃಖ ಹಾರಿಣೀ
ದುಷ್ಟರ ಸಂಗದಿ ಕೆಟ್ಟಿಹ ಎನ್ನನು
ಥಟ್ಟನೆ ಕರುಣಾದೃಷ್ಟಿಲಿ ನೋಡಿ ೨

ಜಾತರೂಪಳೆ ಶುಭಗಾತ್ರಿ ತ್ರಿಜಗಕೆ ಧಾತ್ರೀ
ಸೀತೆ ಸತ್ರಾಜಿತನ ಪುತ್ರಿ
ದಾತ ಗುರುಜಗನ್ನಾಥವಿಠಲನ
ನೀತ ಸತಿಯೆ ಎನ್ನಮಾತೆ ವಿಖ್ಯಾತೇ ೩

## ೪೯

ನಮೋ ನಮೋ ಮಾತೇ ಎನ್ನಯ
ಶ್ರಮಾವ ಕಳೆ ದ್ಯೋತೆ ಪ

ಕ್ಷಮಾತಳದಿ ನಿ ಸುಮಾಹಕಲ್ಪ
ದೃಮೋಪಮಾಗಿಹೆ ಸಮಾನ ಸೋತ್ತಮೆ ಅ.ಪ

ರಮಾಧವನರಾಣೀ ನೀ
ತಮೋರೂಪ ಕಲ್ಯಾಣೀ
ನಮಿಪೆ ನಿನ್ನನು
ಕ್ಷಮಾದಿಪತ್ಯವ
ಮಮ್ಮೈವ ಪಾಲಿಸು
ವಿಮಾನ ನಿಲಯಳೆ ೧

ಧರಾತಳದಿ ಬಂದೂ ನೀ
ದುರಾಳ ತತಿ ಕೊಂದೂ
ಭರಾದಿ ಲೋಕದಿ
ಮೆರಾದ ನಿನ್ನನು
ಶಿರಾದಿ ನಮಿಸಿದೆ
ವರಾವ ಪಾಲಿಸು ೨

ಪಿತಾಮಹನ ಮಾತೇ ನೀ
ವಿತಾತ ಗುಣ ಖ್ಯಾತೇ
ದಾತಾ ಗುರುಜಗ –
ನ್ನಾಥಾ ವಿಠಲನ್ನ
ಪ್ರೀತಿಯ ಮಾನಿನಿ
ದೂತಾನ ಪೊರೆವೋದು ೩

## ೫೦

ಪಾಲಸಾಗರ ಸಂಭೂತೆ ಕೈವಲ್ಯದಾತೆ
ಪಾಲಿಸೆನ್ನನು ನಿಜಮಾತೆ ಪ

ಆಲಿಸು ನಿನ್ನಯ ಬಾಲನ ನುಡಿ ಈ
ಕಾಲದಿ ಮನ್ಮನ ಆಲಯದೊಳು ನಿಂದು ಅ.ಪ

ಶ್ರೀ ಮಾ ರಮಾ ಲಕುಮಿ ಕಮಲೆ ನಿತ್ಯ ನಿರ್ಮಲೆ
ಈ ಮಹಾಮಹಿಮ ವಿಶಾಲೆ
ಕಾಮನ ಜನನಿ ಸುಲೀಲೆ ಜಲಜಸುಮಾಲೇ
ಕಾಮಿಪ ಜನರ ಸುರಸಾಲೆ
ತಾಮರಸಾಂಬಕೆ ಸಾಮಜಭವ ಸು –
ತ್ರಾಮ ಪ್ರಮುಖ ಸುರಸ್ತೋಮ ನಮಿತಗುಣ –
ಧಾಮೆ ನಿನ್ನಯ ಪಾದ ಯಾಮ ಯಾಮಕೆ ನಿತ್ಯ
ನೇಮದಿ ಭಜಿಪೆ ಶ್ರೀರಾಮನ ತೋರೆ ೧

ವೇದಾಭಿಮಾನಿ ಅಂಬ್ರಾಣಿ ಸುಗಣಸನ್ಮಣಿ
ವೇದವತಿಯೆ ರುಕ್ಮಿಣಿ
ವೇದವಂದ್ಯಳೆ ಗುಣಪೂರ್ಣೇ ನಿತ್ಯಕಲ್ಯಾಣಿ
ಮೋದದಾಯಕೆ ಗೀರ್ವಾಣಿ
ಖೇದಗೊಳಿಸುವ ಭವೋದಧಿ ದಾಟಿಸಿ
ಮೋದ ಕೊಡುವ ಪಂಚಭೇದಮತಿಯನಿತ್ತು
ಯಾದವಗುಣವನುವಾದ ಮಾಡಿಸಿ ನಿತ್ಯ
ಮೋದಬಡಿಸು ಶ್ರೀ ಮಾಧವರಾಣಿ ೨

ಜಾತರೂಪಾಭಾಶುಭಗಾತ್ರಿ ಈ ಜಗಕೆ ಧಾತ್ರಿ
ಸೀತೆ ನೀನೆ ಲೋಕಪವಿತ್ರೆ
ಧಾತಾಪ್ರಮುಖಸುರಸ್ತೋತ್ರೇ ನೀರಜನೇತ್ರೆ
ವೀತಭಯಳೆ ತ್ರಿನೇತ್ರೇ
ಪಾತಕವನಕುಲವಿತಿಹೋತ್ರ ಸುರ –
ವ್ರಾತ ವಿನುತ ಸುಖವ್ರಾತ ಕೊಡುವ ನಮ್ಮ
ದಾತ ಗುರುಜಗನ್ನಾಥವಿಠಲಗೆ ನೀ
ನೀತಸತಿಯೆ ಎನ್ನ ಮಾತೆ ವಿಖ್ಯಾತೆ ೩

## ೫೧

ಬಾರವ್ವ ಮಹಭಾಗ್ಯದಭಿಮಾನಿ
ಶ್ರೀಹರಿ ನಿಜರಾಣೀ ಪ

ಸಾರಿದೆ ನಿನಪಾದನೀರಜಯುಗ ಮನೋ –
ವಾರಿಜದಲಿ ನೀ ತೋರುತ ಲಕುಮಿ ಅ.ಪ

ಅಖಿಲಾಗಮವಿನುತೆ ಎನ್ನಯ ಮಾತೆ ಸಕಲಸುರಗೀತೆ
ನಿಖಿಲಾ ತ್ರಿಜಗದ್ವ್ಯಾಪ್ತೆ ಪ್ರಖ್ಯಾತೆ ಸಂಪತ್ಪ್ರದಾತೇ
ನಖಮುಖ ಮಾತ್ರದಿ ವಿಖನಸಅಂಡದ
ಅಖಿಲವ್ಯಾಪಾರವ ಸುಖದಲಿ ಮಾಡುವಿ ೧

ಇಷ್ಟಾರ್ಥವ ಸಲಿಸಿ ಎನ್ನನು ಪೊರೆಯೇ
ಕೊಲ್ಹಾಪುರ ಶಿರಿಯೆ
ಅಷ್ಟದಾರಿದ್ರ್ಯಗಳನು ನೀ ತರಿಯೆ
ಈ ಕ್ಷಣ ಸುಖಸುರಿಯೇ
ಅಷ್ಟಪದೋದರ ಅಷ್ಟಮೂರ್ತಿನಿನ್ನ
ದೃಷ್ಟಿಯಿಂದ ಮಹಶ್ರೇಷ್ಟನಾಗಿಹನೇ ೨

ಕ್ಷೀರಾವಾರಿಧಿಯೊಳು ಸಂಜಾತೆ ಮಾರನ್ನ ಮಾತೆ ಅ –
ಪಾರಾಮಹಿಮಾಳೆ ಸುರಸನ್ನುತೆ ಜಗದೊಳಗೆ ಖ್ಯಾತೆ
ವಾರವಾರಕೆ ದುರಿತಾರಿ ನಿನ್ನಯ ಪೂಜೆ
ಚಾರುಮನದಿ ಮಾಳ್ಪೆ ಧೀರೆ ಉದಾರೆ ೩

ಶ್ರೀಶಾನಿಂದಲಿ ಅನಪಾಯಿನಿ ಎನ್ನಾ ಪಾಲಿಸಬೇಕಿನ್ನಾ
ವಾಸವಾಗೆನ್ನಾ ಮನೆಯೊಳಗಿನ್ನಾ ಪಾಲಿಸೆ ಇದನನ್ನಾ
ವಾಸವಾದಿ ಸುರರಾಸೆಯ ಪೂರ್ತಿಸಿ
ಈಶರ ಮಾಡಿದಂತೆ ಈ ಸಮಯದಿ ಎನ್ನ ೪

ನಗೆಮೊಗ ಚೆನ್ನೆ ಸುಪ್ರಸನ್ನೆ ಸುರನಿಕರರನ್ನೆ
ಮಗುವಿನ ಮಾತೆಂದು ನಗುತ ನೀ ಇನ್ನೆ
ಬಾ ಬರುವದು ಘನ್ನೆ
ನಗಹರ ಸುರಪನ ಮಗನನ ಸಖ ಗುರು
ಜಗನ್ನಾಥ ವಿಠಲ ಸಮ್ಮೊಗವಾಗಿ ಬೇಗ ನೀ ೫

## ೫೨

ಶಿರಿದೇವಿ ನಿನ್ನ ಚರಣ ಸರಸಿಜಯುಗಕೆ
ಶಿರದಿ ನಮಿಪೆ ಸತತ ಸರಸಿಜಾಂಬಕೆ
ಸರಿಯಾರು ನಿನಗೀ ಸರಸಿಜಭವಾಂಡದೊಳು
ಸರಸಿಜಾಕ್ಷಗೆ ದೇಶಕಾಲಗಳಿಂದ ಸರಿಯಾಗಿ ನಿತ್ಯದಲಿ
ಪರಿಪರಿಸೇವಾದಿಂದ ಹರಿಯಾ ಮೆಚ್ಚಿಸಿ
ಪರಮಾದರದಿಂದ ಪತಿಗನುಕೂಲ –

ಪರಳಾಗಿ ಸೃಷ್ಟಿಗೆ ಮೂಲಕಾರಣಳೆನಿಸಿ
ಪರಮೇಷ್ಟಿ ಮೊದಲಾದಾನಂತಜೀವರನ್ನ
ಅರಿತು ಯೋಗ್ಯಾಯೋಗ್ಯತೆಯನ್ನನು -
ಸರಿಸಿ ಸೃಜಿಪ ಶಕ್ತಿ ನಿನಗುಂಟು ನೀ
"ಯಂ ಯಂ ಕಾಮಯೆ ತಂ ತಮುಗ್ರಂ ಕೃಣೋಮಿ"
ಎಂತ ಶ್ರುತಿ ಸಾರುತಿದೆ
ಶಿರಿ ನಿನ್ನ ಕಟಾಕ್ಷದಿ ಸಕಲೈಶ್ವರ್ಯಗಳು
ಪರಿಪರಿ ವಿಧದಿಂದ ಒದಗುತಿಪ್ಪವು
ಹರಿಕೃಪೆ ನಿನ್ನೊಳಗೆಂತಿಹುದೋ
ಅರಿಯಾರು ಎಂದಿಗು ಬೊಮ್ಮಾದಿಸುರರು
ನರರೇನು ಬಲ್ಲರಮ್ಮ ನಿನ್ನ ಮಹಿಮೆಯ
ಶಿರಿಮಾನಿ ಎನ್ನ ನೀನು ಕರುಣದಿಂದಲಿ ನೋಡಿ
ಹರಿಮೂರ್ತಿಯನ್ನೇ ತೋರೆ ಹರಿಣಲೋಚನೆ
ಹರಿದಾಸಜನರೊಡೆಯ ಗುರುಜಗನ್ನಾಥವಿಠಲನ್ನ
ಇರವು ತೋರಿಸಿ ಎನ್ನ ಪೊರೆಯಮ್ಮ ೬

## ೫೨

ಹರಿಯ ಪಟ್ಟದ ರಾಣಿ ವರದೆ ಕಲಾಣೀ
ಉರುಗುಣಗಣಶ್ರೇಣಿ ಕರುಣೀ ಪ

ಶಿರದಿ ನಿನ್ನಯ ದಿವ್ಯ ಚರಣಕಮಲಕೆ ನಾನು
ಎರಗಿ ಬಿನ್ನೈಪೆ ತಾಯೆ ಸುಖವೀಯೇ ಅ.ಪ

ವನಜಸಂಭವ ಮುಖ್ಯ ಅನಿಮಿಶೇಷರ ಸ್ತೋಮ
ದಿನದಿನ ನೀ ಪೊರೆವೇ ಘನಮಹಿಮಳೆ
ಮನುಜರಾಧಮನೆಂದು ಮನಸೀಗೆ ನೀ ತಂದು
ಕನಕವೃಷ್ಟಿಯ ಸುರಿದು ಪೊರೆಯೇ ಧ್ವರಿಯೇ ೧

ಸೃಷ್ಟಿಕಾರಣಿ ನೀನೆ ಕಷ್ಟ ತರಿದು ಕೃಪಾ -
ದೃಷ್ಟಿಯಿಂದಲಿ ನೋಡಿ ಸಲಹೇ

ಇಷ್ಟದಾಯಕ ಶಿರಿ ಕೃಷ್ಣನರಸಿಯೆ ನಿನ್ನ
ಇಷ್ಟು ವಿಧದಲಿ ಬೇಡಿಕೊಂಬೆ ಅಂಬೆ ೨

ಖ್ಯಾತಮಹಿಮಳೆ ಎನ್ನ ಮಾತು ಲಾಲಿಸು ದೇವಿ
ಪೋತ ನಾನಲ್ಲೆ ನಿನಗೆ
ದಾತಗುರುಜಗನ್ನಾಥವಿಠಲ ನಿನ್ನ
ನಾಥನಾಗಿ ಭಾಗ್ಯಪಡೆದ ಜಸಪಡೆದಾ ೩

## ಬ್ರಹ್ಮದೇವರು

### ೫೪

ಬೊಮ್ಮನೆ ಎನ್ನಯ ದುಮ್ಮನ ಬಿಡಿಸಿ
ಸುಮ್ಮನ ನೀಡು ಇಮ್ಮನ ಮಾಡದೆ
ಒಮ್ಮನವಿತ್ತು ಘಮ್ಮನೆ ಬಾ ರುಜೋ
ತ್ತುಮ್ಮನೆ ಎನ್ನಯ ಹಮ್ಮನು ಕಳಿ ನ
ಮ್ಮಮ್ಮನುದರದಿ ಮತ್ತೊಮ್ಮೆ ಜನಿಸದಂತೆ
ರಮ್ಯನ ಮಾಳ್ಪುದಧಮ್ಮನು ನಾನೋ
ಶಮ್ಮದಮ್ಮಗುಣ ಇಮ್ಮಡಿ ಮಾಡ್ಯನು
ಪಮ್ಮಚರಿತ ಪರಬೊಮ್ಮನ ತೋರಿಸು
ನಿಮ್ಮವನಲ್ಲವೆ ಸುಮ್ಮನಸರೊಡೆಯ
ಗುರುಜಗನ್ನಾಥವಿಠಲ ಸಮ್ಮೊಗನಾಗಿರುವಂತೆ ಮಾಡೋ

## ಹನುಮ-ಭೀಮ-ಮಧ್ವರು

### ೫೫

ಅಖಿಳ ಬೊಮ್ಮಾಂಡ ನಾಯಕ
ಸಕಲ ಜೀವೋತ್ತುಮ
ವಿಖನಸಾರ್ಚಿತ ಪಾದ ನಿಖಿಳ ಲೋಕವ್ಯಾಪ್ತಾ
ಲಕುಮಿರಮಣನ ಪ್ರಾಣ ಸಂಭೂತ

ಸುಖಜ್ಞಾನಮಯ ಸ್ವರೂಪ ಸುಮನೋತ್ತಂಸ
ಶಿಖಿಸಖೋದಿತರವಿ ಪ್ರಕರ ಸನ್ನಿಭ ಮುಖ
ಸುಖಪೂರ್ಣ ಶುದ್ಧ ಸತ್ತ್ವಶರೀರ
ಆಖಣಾಶ್ಮ ಸಮಚರಣ ಭಕ್ತಾಭರಣ
ಲೋಕೈಕ ವೈದ್ಯಾಭಾರತೀಕಾಂತಾ
ಲೌಕಿಕ ಸುಖದಾತಾ ಪ್ರಖ್ಯಾತಾ
ಕಾಕೋದರ ಶಾಯಿ ನಮ್ಮ ಗುರುಜಗನ್ನಾಥವಿಠಲನಾ
ಲೋಕನವಿತ್ತು ಪೊರೆಯೋ ಪ್ರಾಣರಾಯ

## ೫೬

ಇದನೆ ಪಾಲಿಸೋ ಹನುಮಾ ಮಾಳ್ಪೆನೊ
ಪದ ಪದುಮಯುಗಕೆ ಪ್ರಣಾಮಾ ಪ

ಸದಯನೆ ನಾ ನಿನ್ನ ಇದನನು ಬೇಡಿದೆ
ಪದುಮ ನಯನ ಶ್ರೀ ಮುದತೀರಥರಾಯಾ ಅ.ಪ

ದಿವಸ ಪೋದವಲ್ಲಾ ಗುರುಗಳ ಅನುಭವಾಗಲಿಲ್ಲಾ
ಪವನ ತನಯ ನೀ ಜವದಲಿ ಮಾಡಲು
ಭುವನದೊಳಗೆ ಬೃಹಚ್ಛ್ರವನು ಎನಿಸುವೆನು ೧

ಧನವು ಎನಗೆ ಇಲ್ಲಾ ಸಹಾಯಕ
ಜನರು ಮೊದಲೆ ಇಲ್ಲಾ
ಧನಪಸಖ ನನ ಜನಕನು ನೀನಿರೆ
ಮನುಜರ ಬೇಡೋದು ಘನತಿ ಎನಗಲ್ಲಾ ೨

ದಾತ ಇದನು ಪೂರ್ತಿ ಮಾಡೊ ಧಾತ ನಾ ಶರಣಾರ್ಥಿ
ಯಾತಕೆ ಸುಮ್ಮನೆ ಈ ತೆರ ಇರುವುದು
ತಾತನೆ ಗುರುಜಗನ್ನಾಥವಿಠಲದೂತ ೩

## ೫೭

ಎಂಥಾ ಬಲವಂತನೋ ಭಾರತೀಕಾಂತಾ
ಎಂಥಾ ದಯವಂತನೋ ಪ

ಎಂಥ ಮಹಬಲವಂತ ಬಹುಗುಣ –
ವಂತ ಸರ್ವದಾನಂತಚೇತನ
ರಂತರಾದೋಳ್ನಿಂತು ಪ್ರೇರಿಪ
ನಂತು ಮಹಿಮೆಯ ಅಂತು ತಿಳಿಯದೊ ಅ.ಪ

ವೀರರಾಘವನಂಘ್ರಿಯ ಭಜಿಸಿ ಕಪಿ –
ವೀರನಾದನು ಮಹರಾಯಾ
ವಾರಿಧಿಯಾಗಾಧತೋಯ ಲಂಘಿಸಿ ಲಂಕಾ
ಸಾರಿ ಪೇಳಿದ ವಾರ್ತೆಯ
ವೀರ ವನವನಂಗಾರಮುಖಕೆ ಇತ್ತು
ವೀರಾಕ್ಷನೆನಿಪ ಕುಮಾರನ ದಂಡಿಸಿ
ಸಾರಿ ಉಂಗುರವಿತ್ತು ಮತ್ತೆ
ಹಾರಿ ವಾರಿಧಿ ವಾನರೇಶನು
ತೋರಿ ರಾಮನ ಪದಕೆ ನಮಿಸಿ
ಚಾರು ರಾಗಟೆ ಇತ್ತ ತ್ವರದಿ ೧

ದುರುಳ ದುಶ್ಯಾಸನನೂ ಕೋಪದಿ ತಾ
ತರುಳೆ ದ್ರೌಪದಿಯನ್ನು
ಶರಗು ಪಿಡಿದು ಶಳದಾನು ಕರಿಯಲು ಬ್ಯಾಗ
ಹರಿ ತಾನಂಬರವಿತ್ತನು
ಧುರದಿ ಭೀಮನು ನಿನ್ನ ತರಿದರಕ್ತದಿ ತಾನು
ಬೆರೆಸಿ ಕೇಶವ ಕಟ್ಟಿ ಕರುಳ ದಂಡೆಯನಿಟ್ಟು
ಮೆರೆವೆ ಕೇಳೆಲೋ ದುರುಳನೆಂದಾ –
ತರುಣಿವಚನವ ಸ್ಥಿರವ ಮಾಡಿದ

ಧರಿಯತಳದಲಿ ಸರಿಯುಗಾಣೆನೊ
ವರವೃಕೋದರ ಪರಮ ಕರುಣಿಯೆ ೨

ಭೂತೇಶ ಸರ್ವೋತ್ತುಮಾನೆಂಬುವೊ ಮಹಾ -
ಪಾತಕಿ ಜನಮಾತನೇಮ
ಈತ ಮಾಡಿದ ನಿರ್ಧೂಮ ಹರಿಗೆ ಶಿವ
ದೂತಜನರಿಗುತ್ತುಮ
ಭೂತಳದಲಿ ತಾನೆ ಜಾತನಾಗಿ ಮಧ್ವ
ಖ್ಯಾತಿ ಮಾಡಿದ ಜೀವಜಾತಿ ಪ್ರೇರಕನಾಗಿ
ಶ್ವೇತವಾಹನ ದೂತನಾಗಿಹ
ನಾಥ ಗುರು ಜಗನ್ನಾಥವಿಠಲ
ಧಾತನಾಂಡಕೆನಾಥ, ನಿರ್ಜರ
ನಾಥರೆಲ್ಲರೂ ದೂತರೆಂದರು ೩

## ೫೮

ಕರುಣಿಸೆನ್ನನು ಕರುಣಾನಿಧಿಯೆ ಪ

ಹರಿ ಭಜಕರಾಗ್ರಣಿಯೆ ವರಕಪಿಶಿರೋಮಣಿಯೆ ಅ.ಪ

ತರಣಿ ತನಯನನು ನೀ ಪೊರೆದ ಕೀರುತಿ ಈ
ಧರಣಿತಳದಲ್ಲಿ ಪರಿಪೂರ್ಣವಾಗೀ
ಇರುವ ವಾರ್ತೆಯ ಕೇಳಿ ಹರುಷ ಮನದಲಿ ನಿನ್ನ
ಚರಣ ಪಂಕಜಯುಗ್ಮ ಭರದಿ ಭಜಿಪ ಎನ್ನ ೧

ದುರುಳ ದೈತ್ಯನ ಶೀಳಿ ಧರಣಿಸುರಸುತನ ನೀ
ಪೊರೆದ ಕೀರುತಿ ಕೇಳಿ ತ್ವರದೀ
ಭರದಿ ನಿನ್ನಯ ಪಾದ ಸರಸಿಜ್ವದಯವನ್ನು
ನಿರುತ ಭಜನೆಯ ಮಾಳ್ಪ ದುರುಳ ಮಾನವ ನಾ ೨

ಜನಕ ಮಾಡಿದ ಋಣವ ಹುಣಿಸೆ ಬೀಜಗಳಿಂದ
ಋಣಗಳೆದ ಘನ ಮಹಿಮೆ ಕೇಳಿ
ಮನದಿ ಯೋಚಿಸಿ ಚರಣವನಜ ಭಜಿಸುವ ಎನ್ನ
ಋಣ ಬಿಡಿಸೊ ಗುರುಜಗನ್ನಾಥ ವಿಠಲ ಪ್ರಿಯಾ ೩

## ೫೯

ಗಡಾನೆ ವರ ಪಾಲಿಸೋ ಕೋಶಿಗಿಯೊಡೆಯ ಹನುಮನೆ ಪ

ತಡೆಯಾದೆ ತವ ಪಾದಯುಗಳ, ಜಡಜ ನಂಬಿದೆ ಅ.ಪ

ಕಡಲ ಲಂಘಿಸಿ ರಾಮನ ಮಡದಿಗುಂಗುರವನ್ನೆ ಇತ್ತು
ಸಡಗರದಿಂದವನ ನಗರ ಬಡಬಗೆ ನೀಡಿ ಬಂದೆ ನೀ ೧

ದುರುಳ ದುಶ್ಯಾಸನುದರ ಕರುಳುಗಳಿಂದ ದ್ರುಪದ
ತರಳೆಯಳಾ ಮನಪೂರ್ತಿಸಿ ಹಿಂಗುರುಳು ಕಟ್ಟಿದ ಧೀರನೆ ೨

ದಿಟ್ಟ ಮೋದತೀರ್ಥರೆನಿಸಿ ದುಷ್ಟ ಮಾಯಾವಾದ ಮತ
ಸುಟ್ಟ ಶ್ರೀ ಗುರುಜಗನ್ನಾಥ ವಿಠಲ ಪದ ಭಜಕನೆ ೩

## ವಾಯುದೇವರು

## ೬೦

ನಮೋ ನಮೋ ಹನುಮಾ ಪ್ಲವಗೋ
ತ್ತುಮಾಂಜನೇಯ ನಾಮಾ ಪ

ಶಮಾದಿಗುಣಗಣ ಸಮೀರ ನುತಜನ
ಪ್ರಮಾದ ಹರಿಸೆಲೊ ಉಮೇಶ ವಂದ್ಯನೆ ಅ.ಪ

ದಶಾಪುರುಷ ನೀನೇ ಶ್ರೀ -
ದಶಾದ್ಯಮರ ಪೂಜಿತನೆ
ದಶಾಸ್ಯಮುಖ ಮಹ ನಿಶಾಚರೇಶರ
ದಶಾಕಳೆದು ಈ ವಸೂಧಿಯೋಳು ಮೆರೆದೆ ೧

ಬಕಾಸುರಗೆ ವೈರೀ ನಿನ್ನ
ಭಕೂತ ಜನಕೀಪರಿ
ಅಖೀಳ ಸೌಖ್ಯದ ಲಕೂಮಿರಮಣನ
ಭಕೂತಿ ಪೂರ್ವಕ ಮೂಕೂತಿ ದಾಯಕ ೨

ಯತೀಶಕುಲನಾಥಾ ದಶ -
ಮತೀನಾಮ ಖ್ಯಾತಾ
ಕ್ಷಿತೀಶ ಗುರುಜಗನ್ನಾಥಾವಿಠಲ ದೂತ
ಪಾಥೋಜಜಾಂಡಕೆ ನಾಥಾನೆ ಪಾಲಿಸೊ ೩

## ೬೧

ನೀನೆ ಪಾಲಿಸೊ ಎನ್ನ ಮಾರುತಿರಾಯ ಪ

ನೀನೆ ಪಾಲಿಸೊ ಮಹಾನುಭಾವನೆ ಸದಾ
ಜ್ಞಾನ ಭಕುತಿನಿತ್ತು ಮಾನಾದಿ ನೀ ವೇಗ ಅ.ಪ

ನಿನ್ನ ಆಧಾರ ಲೋಕಾ ಜನರು ಸದಾ
ನಿನ್ನ ಭಜಿಸುವೊರೇಕಾ ಪ್ರಕಾರದಿ
ನಿನ್ನ ಸೇವಿಪರನೀಕಾ ಸಂಗಾವಿತ್ತು
ನಿನ್ನ ಧ್ಯಾನಿಪ ವಿವೇಕಾ ಮತಿಯನಿತ್ತು
ಮನ್ನಿಸೊ ಮಜ್ಜನಕಾ
ನಿನ್ನಾ ಭಜಿಪರಿಗೆ ಅನ್ಯಾಲೋಕಗಳುಂಟೆ
ಘನ್ನಾ ಹರಿಯ ಲೋಕವನ್ನೆ ಸೇರುವರಯ್ಯಾ ೧

ಸಂತತ ಪವಮಾನನು ನೀನೆ ಸರ್ವ
ರಂತರ ದೊಳಗಿಹನು ಎಂದು ನಿನ್ನಾ
ನಂತ ರೂಪಗಳನ್ನು ಭಜಿಸುವ
ಗಂತು ಜ್ಞಾನವನ್ನು ನೀಡುತ ಜನ
ರಂತರದಲಿ ನೀನು
ನಿಂತು ಪಾಲಿಸಿ ಜೀವರಂತೆ ಗತಿಯನಿತ್ತು
ಕಂತುಹರಾದ್ಯರ ಸಂತತಿ ವಂದ್ಯನೆ ೨

ಸೀತಾರಾಮನ ಪಾದವಾ ಸೇವಿಸಿ ನಿತ್ಯ
ಪಾತಕಾಂಬುಧಿಗೆ ದಾವಾನಂತೆ ಜಗದಿ
ಈ ತೆರದಲಿ ಮೆರೆವಾನೆಂದು ಈಗ
ಸೋತು ನಾ ಬಂದೆ ದೇವಾ ನೀನೇ ಎನ್ನ
ಮಾತು ಲಾಲಿಸೊ ದ್ಯುಧವಾ
ಮಾತರಿಶ್ವ ನಿಜ ದೂತಾನು ನಾನಯ್ಯ
ನೀತ ಗುರು ಜಗನ್ನಾಥವಿಠಲಪ್ರಿಯ ೩

## ೬೨

ನಂದ ತೀರಥರಾಯ ಅಸ್ಮದ್ಗುರೋರ್ಗುರು
ನಂದ ಸುಖಮಯ ಕಾಯ ಪೊರೆಯಯ್ಯ ಜೀಯಾ ಪ

ನಂದನಂದನ ಪಾದ ಕಮಲಕೆ
ನಂದ ಮಧುಕರ ನಂದದಲಿ ನಿಜ
ಮಂದ ಜನರಿಗೆ ನಂದ ಕೊಡುವಾ
ನಂದ ಮೂರ್ತಿ ಆನಂದಕಾರಿಯೆ ಅ.ಪ

ಮಧ್ಯಮನಿ ದ್ವಿಜನಲ್ಲಿ ಉದ್ಭವಿಸಿ ನೀನೂ
ಮಧ್ವಮುನಿ ಪೆಸರಲ್ಲಿ ದುರ್ವಾದಿಗಳ ಅ –
ಶುದ್ಧ ಭಾಷ್ಯಗಳಲ್ಲಿ ಜಯಪಡೆದ ನಿನ್ನಾ

ಶುದ್ಧ ಭಾಷ್ಯಗಳಲ್ಲಿ ಭಕ್ತಿಯಿಂದಲ್ಲಿ
ಶುದ್ಧ ಶ್ರೀ ಹರಿಮತದ ಶುಭ
ಸಿದ್ಧಾಂತ ಸ್ಥಾಪಿಸಿ ಜಗದಿ ಜೀವರ
ಸಿದ್ಧಗಣಕಧಿನಾಥನೆಂದೂ ಪ್ರ –
ಸಿದ್ಧಗೈಸಿದಿ ಶುದ್ಧ ಮೂರುತಿ ೧

ಬದರಿಕಾಶ್ರಮವನ್ನು ಐದಿದ್ಯೊ ಮುದದಿ
ಪದುಮನಾಭನನ್ನು ಬಲಗೈಸಿ ನಿನ್ನ
ಬದಿಗ ಜನರಿಗಿನ್ನೂ ಸುವಾಕ್ಯ
ದಿಂದಲಿ ಪೇಳಿದದು ನಿಜ
ಪದುಮನಾಭನೆ ಪರಮದೈವನು
ಪದುಮೆ ಮೊದಲು ಬ್ರಹ್ಮಾಂತ ಜೀವರ
ಪದದಿ ಗುಣದ ತಾರತಮ್ಯವ
ಹೃದಯ ಮಂದಿರದಲ್ಲಿ ಪೇಳಿದ ೨

ಘನ್ನಮಹಿಮನೆ ಎನ್ನಮನ ವಚನ ಕಾಯದಿ
ಇನ್ನು ಮಾಡುವುದನ್ನು ಸ್ವೀಕರಿಸಿ ಹರಿಗೆ
ಮುನ್ನ ನೀಡೆಲೊ ಚೆನ್ನವಾಗಿ ನಿಜಫಲ
ನಿನ್ನ ಜನರೀಗಿನ್ನ ನೀಡಯ್ಯ ಮುನ್ನ
ನಿನ್ನ ಒಳಗೆ ನಿರುತ ಇರುವ
ಘನ್ನ ಗುರುಜಗನ್ನಾಥವಿಠಲನ
ಎನ್ನ ಮನದಲಿ ತೋರಿಸೆಂದು
ನಿನ್ನ ಪದಯುಗವನ್ನು ಭಜಿಸಿದೆ ೩

## ೬೩

ಪಾಲಿಸಗಸ್ತ್ಯ ಪುರವಾಸಾ ಸಂತತ ಲೇಸಾ
ಲಾಲಿಸೋ ಭಾರತೀಶಾ ಪ

## ಪದ್ಯ

ರವಿಶತ ನಿಭ ಕಾಯಾ, ನಿತ್ಯ ನಿರ್ಧೂತಮಾಯಾ
ಕವಿಜನ ವರಗೇಯಾ, ಕಾಮಿತಾರ್ಥಾಭಿಧೀಯಾ
ದಿವಿಭುವಿ ನಿಜಗೇಯಾ, ನೀತ ಸದ್ಭಕ್ತ ಪ್ರೀಯಾ
ತ್ರಿವಿಧಜನ್ವ ಸುಕಾಯಾ ನಿಲಯ ವಾಙ್ಮನೋ ಪ್ರೀಯಾ
ನಿಗಮ ವಂದಿತ ಮುಖ್ಯಗುಣಧಾಮಾ
ಸ್ವಾಶ್ರಿತಪ್ರೇಮಾತೋಷಿತ ಶ್ರೀರಾಮಾ
ಜಗಕೆ ಜೀವನನಾದ ಹನುಮಾ
ಕಾಮದ ಭೀಮಾ ಮೋಕ್ಷದ ಮಧ್ವನಾಮಾ
ಮುಗಿವೆ ಕರದ್ವಯ ನಿಮಗಯ್ಯಾ
ನಮೋ ನತಜೀಯಾ ಸಂತತ ಪಿಡಿ ಕೈಯಾ ೧

## ಪದ್ಯ

ಜಲರುಹಭವಪೋತಾ ಭೂತನಾಥೈಕತಾತಾ
ಸುಲಲಿತಜನದಾತಾ ಶುದ್ಧಸತ್ತ್ವಾಧಿನಾಥಾ
ಕಲಿಮಲ ಪ್ರವೀಘಾತಾ ವಿಶ್ವಕೋಶವ್ಯತೀತಾ
ವಿಲುಲಿತ ದಿತಿಜಾತಾ ಧೂತ ಸರ್ವತ್ರಾಭೀತಾ

## ಪದ

ಏಕವಿಂಶತಿ ಸಹಸ್ರ ಷಟ್‌ಶತಾ
ಜಪಮಾಡುತಾ ತ್ರಿವಿಧರೊಳಿರುತ
ಏಕೋ ನಾರಾಯಣನುತ್ತಮಾ
ಸರ್ವ ಸುರೋತ್ತಮ ಜೀವಗಣವೆಂಬೋದು ಅಥವಾ
ಏಕೋ ಭಾವಭಕ್ತಿವಿಜ್ಞಾನಾ
ಭವದೊಳು ಜ್ಞಾನಾ ಕಲ್ಪಿಸಿ ಅಜ್ಞಾನಾ
ಏಕವಾಗಿತ್ತು ಸತ್ವರಾ
ಭವದಿಂದ ಮುಕ್ತರಾ ಮಾಡುವಿ ಸತ್ವರಾ ೨

## ಪದ್ಯ

ಶ್ರುತಿತತಿಸ್ಮ್ರತಿವೇದ್ಯಾ, ಸೂತ್ರನಾಮಾಮರಾದ್ಯಾ
ವಿತತವಿಮಲಗಾತ್ರಾ, ವೀಶಶೇಷತ್ರಿನೇತ್ರಾ
ಶತಮಖ ಮುಖಧ್ಯಾತಾ, ಧೀತವೇದಾಂತಜಾತಾ
ಶ್ರುತಿಪಥನಿರಪೇಕ್ಷಾ ಕಾಮಿನಾಂ ಕಲ್ಪವೃಕ್ಷಾ

## ಪದ

ವಿಶ್ವೇಶ ವಿಶ್ವಾಂತರಾತುಮಾ
ಚೆಚ್ಚುಕಾತುಮಾ ಸರ್ವಜೀವರುತ್ತಮಾ
ವಿಶ್ವಾಸದಿಂದಲಿ ತವಪಾದಾ
ನಂಬಲು ಮೋದ ದಾಯಕ ಮುಕ್ತಿಫಲದಾ
ವಿಶ್ವನಾಟಕ ವಿಷ್ಣುಪದ ಭಕ್ತಾ
ಸಜ್ಜನಸಕ್ತ ಪಾಲಿಸು ನಿನ ಭಕ್ತಾ
ವಿಶ್ವೇಶ ಗುರುಜಗನ್ನಾಥ
ವಿಠಲಪದದೂತ ನೀಡಯ್ಯ ಮೋದ ೩

## ೬೪

ಪಾವನೀ ಆವಹಿ ಮಾಂ ಪ

ಪಾವನಿ ಪಾತಕಾರಣ್ಯ ಮಹಾ
ಪಾವಕ ನೀನಾದ್ಯೊ ಘನ್ನ ಆಹಾ
ಆವಕಾಲದಲ್ಲಿ ಭಾವಜಜನಕನ
ಸೇವೆಯೊಳಿರುವಂಥ ಭಾವ ಪಾಲಿಸೊ ದೇವ ಅ.ಪ

ಪ್ರಾಣಾದಿ ಪಂಚರೂಪಕನೆ ಸುರ
ಗಣ ಕರಾರ್ಚಿತ ಪಾದಯುಗನೆ ಗುಣ
ಗಣನಿಧಿ ಬಾರತೀಧವನೇ ಜಗ
ತ್ರಾಣ ಕಾರಣನೆ ಮಾರುತನೇ ಆಹಾ

ಕ್ಷೋಣಿಧರಕೃತ ಬಾಣ ವಂದಿತ ಚಾರು ಚ
ರಣ ವಂದಿಪೆ ಜಗತ್ಕಾರಣಕರ್ತನೇ ೧

ಖದ್ಯೋತ ಶತ ನಿಭ ಚರಣಾ ಅನಾದ್ಯ
ವಿದ್ಯಾ ತಮೋ ಹರಣ ಸದ್ಯ
ವಿದ್ಯೋತ ವೇದಾಂತಾಭರಣಾ ಅನ
ವಧ್ಯ ಸ್ವಭಕ್ತಾಂತಃ ಕರಣಾ ಆಹಾ
ವಿದ್ಯಾರಮಣ ನೀನೆ ಸದ್ಯೋಜಾತಗೆ ಸು
ವಿದ್ಯಾ ಪೇಳಿದ್ಯೋ ಪ್ರದ್ಯುಮ್ನನ ತೋರಿಸೋ ೨

ಶ್ರೀನಾಥನಿಗೆ ಪ್ರತೀಕಾ ಬಾಲ
ಭಾನುಕೋಟಿ ಪ್ರಕಾಶಾ ಏನು
ಕರುಣಾಳೊ ಭಕ್ತಾಭಿಲಾಷಾ ಅನು
ಸಾರದಿ ಪೂರ್ತಿಪ ಈಶಾ ಆಹಾ
ಹನುಮದಾದಿರೂಪ ಘನವಾಗಿ ಧರಿಸಿ ನೀ
ವನಧಿ ಲಂಘಿಸಿ ಹರಿ ವನಿತೆಯ ತಂದಿತ್ತೆ ೩

ಸೂತ್ರನಾಮಕ ಶುಭಗಾತ್ರಾ ಚಿತ್ರ
ಚರ್ಯ ಪಿತಾಮಹಪುತ್ರಾ ಗೋತ್ರ
ಧರಮುಖ ದ್ಯು ಸ್ವಕಲತ್ರಾ ಮಿತ್ರ
ತಾಡನ ಹರ್ತ ಅರ್ಧಗಾತ್ರಾ ಆಹಾ
ಸುತ್ರಾಮ ಮುಖ ತ್ರಿನೇತ್ರಾಂತ ಸುರಕೃತ
ಸ್ತೋತ್ರ ಪದಾಂಬುಜ ಮದಂತ್ರದಿ ನಿಲಿಸಯ್ಯಾ ೪

ಘೋಟ ಖೇಟ ಕಂಠೀರವ ವದನಾ ಭವ
ಕಾಟ ತಪ್ಪಿಸಿ ಪೊರಿ ಎನ್ನಾ ಕಿಟ ಮ
ರ್ಕಟ ರೂಪನೆ ನಿನ್ನಾ ಭಕ್ತ
ಕೋಟಿಯೊಳಗೆ ಸೇರಿಸೆನ್ನಾ ಆಹಾ
ದಿಟ್ಟ ಮಹಿಮ ಗುರು ಜಗನ್ನಾಥ ವಿಠಲನ್ನ
ಮುಟ್ಟಿ ಭಜಿಪ ದಿವ್ಯ ದೃಷ್ಟಿಯ ಪಾಲಿಸೋ ೫

## ೬೫

ಪೂರ್ಣಭೋಧ ಮುನಿರಾಯಾ ಎನ್ನಲಿ
ಕರುಣವ ಮಾಡಯ್ಯಾ ಪ

ಚರಣವ ನಂಬಿದ ತರುಣನ ಭವ
ಅರಣವ ದಾಟಿಸಿ ಶರಣನ ಪೊರೆಯೋ ಅ.ಪ

ನಿನ್ನ ಮತದಿ ದೀಕ್ಷಾ ಪೊಂದಿಸಿ
ನಿನ್ನ ಕರುಣ ಕಟಾಕ್ಷ
ನಿನ್ನ ಶಾಸ್ತ್ರದಲನನ್ಯ ಭಾವವ
ಮನ್ನಿಸೊ ದಿನದಿನ ಎನ್ನೊಳು ನೆಲೆಸಿದ್ದು ೧

ಪಂಚಭೇದಮತಿಯಾ ತರತಮ
ಪಂಚಕ ಭಾವದ ಪರಿಯಾ
ವಂಚನೆ ಮಾಡದೆ ಪಂಚಿಕಿ ತಿಳಿಸೆಲೊ
ಮಂಚಿಗೆ ಮರುತ ವಿರಿಂಚಿಯಾಗುವಿ ನೀ ೨

ಮಾತರಿಶ್ವ ಹನುಮಾ ಭೀಮಾ
ಯತಿನಾಥ ಮಧ್ವನಾಮಾ
ಖ್ಯಾತ ಮಾಯಿಮತ ವ್ರಾತವನಳಿದ
ದಾತಗುರುಜಗನ್ನಾಥ ವಿಠಲ ಪ್ರಿಯ ೩

## ೬೬

ಪ್ರಾಣನಾಥನೇ ಬಹು ತ್ರಾಣತಪ್ಪಿದೆ ಎನ್ನ
ತ್ರಾಣವಾಗೊಟ್ಟು ಪೊರಿಯೋ ಪ

ಕ್ಷೋಣಿತಳದಿ ದುರ್ಗಾಣಿ ಕಾಣದೀಪರಿ
ಕ್ಷೀಣನಾಗಿ ನಾ ಬಂದೆ ಮುಖ್ಯ ಪ್ರಾಣನಾಥನೆ ಅ.ಪ

ದೀನಜನಕೆ ಸುರಧೇನುವರನೆನಿಸಿ
ದೀನರ ಪೊರೆಯದಿರಲು
ಜ್ಞಾನಿಗಳಿದಕನುಮಾನ ಮಾಡದೆ ತಮ್ಮ
ಮಾನಸದಲಿ ನಿನ್ನಾ ಧ್ಯಾನಿಸುತಿಹರೈ ೧

ವಾಣೀಪತಿಯೆ ಪಂಚಾನನಾದ್ಯಣುರೇಣು
ಕೊನೆಯಾಗಿಪ್ಪಾ ಜಗಕೆ
ಪ್ರಾಣ ಗುಣ ಧನ ತ್ರಾಣ ಮೊದಲಾದ
ಕ್ಷೀಣ ಸಂಪದವ ಕೊಡುವೆ ಮುಖ್ಯ ೨

ದಾತಾ ನೆನಿಸಿದೆ ಧಾತಾನಾಂಡಕೆ ಭಾವಿ ವಿ –
ಧಾತಾ ನೀನಹುದೈ
ಧಾತಾ ಪ್ರಮುಖಸುರನಾಥಾ ಗುರು ಜಗ
ನ್ನಾಥಾ ವಿಠಲ ಪ್ರಿಯನೇ ಮುಖ್ಯ ೩

## ೬೭

ಭಾರತಿರಮಣ ನಾ ಸಾರುವೆ ಚರಣಾ
ತೋರೊ ಮನ್ಮನದೊಳು ಭೂರಿ ಸುಕರುಣಾ ಪ

ಮೂರು ಕಾಲದಿ ನಾನಾಮೂರೊಂದು ರೂಪಾ
ಮೂರಾರು ಭಕುತಿಲಿ ಸಾರುವೆ ಸುರಪಾ ೧

ಮೂರೆರಡಾರಿಂದಲಿ ಮೂರಿಂದ ತಾಪಾ
ಮೂರುಮಾಡದಲೆನ್ನಾ ಪೊರೆಯಯ್ಯಾ ಭೂಪಾ ೨

ಕುಟಿಲ ದುರ್ವಿಷಯ ಲಂಪಟ ಬಿಡಿಸೀಗಾ
ದಿಟ ಗುರುಜಗನ್ನಾಥ ವಿಠಲನ ನಣುಗಾ ೩

## ೬೮

ಮಾತರಿಶ್ವ ಮಹಾರಾಯಾ ನಿನ್ನ
ದೂತನಾದೆನೊ ಪೊರಿ ಜೀಯಾ ಪ

ಭೂತನಾಥ ಪುರುಹೂತ ಪ್ರಮುಖ ಸುರ
ವ್ರಾತವಿನುತ ಶಿರಿನಾಥನ ನಿನ್ನೊಳು
ಪ್ರೀತಿಲಿ ತೋರಿಸಿ ನೀತ ಜ್ಞಾನವಿತ್ತು
ಮಾತು ಲಾಲಿಸೊ ಎನ್ನ ಮಾತೆಯ ತೆರದಿ ಅ.ಪ

ಪ್ರಾಣಾದಿ ಪಂಚರೂಪಕನೆ ಜಗ
ತ್ರಾಣ ಭಾವಿ ವಿರಿಂಚನೆ
ಮಾಣದೆ ತವ ರೂಪ ಕಾಣಿಸೊ ಮನದಲ್ಲಿ
ಪಾಣಿಯುಗವ ಮುಗಿವೆ ಕ್ಷೀಣಪಾಪನ ಮಾಡೊ
ಕ್ಷೋಣಿಜಾಧವ ಪಾದಪದುಮದ
ರೇಣು ಭಜನೆಯ ಗೈದು ಸರ್ವದ
ವೀಣೆ ಪಿಡಿದತಿ ಗಾನ ಮಾಡುತ
ಜಾಣನೆನಿಸಿ ಕ್ಷೋಣಿ ಪಾಲಿಪೆ ೧

ಮೂಲರಾಮನ ಪಾದಕಮಲಾ ಯುಗಕೆ
ನೀಲಷಟ್ಪದ ವರಬಾಲಾ
ವಾಲಿಯಾನುಜ ಕಪಿ ಜಾಲಪಾಲಕನನ್ನು
ಆಲಿಸಿ ಭೂಮಿಜ ಲೋಲರಾಮನ ಮೈತ್ರ್ಯ
ಪಾಲಿಸೀ ಶರಧಿಯನು ನೀನೆ
ಲೀಲೆಯಿಂದಲಿ ದಾಟಿ ಸೀತೆಗೆ
ಬಾಲರೂಪದಿ ರಾಮವಾರ್ತೆಯ
ಪೇಳಿ ವನವನು ಹಾಳುಮಾಡಿದಿ ೨

ಪಾತಕ ರಾವಣ ಮಗನಾ ರಣದಿ
ಘಾತಿಸಿ ಯಮಗಿತ್ತವನಾ
ತಾತಗುರು ಜಗನ್ನಾಥವಿಠಲ ನಿಜ
ಪೋತನಾಗಿ ಜಗದಿ ಖ್ಯಾತಿಯ ಪಡೆದಿ
ರೀತಿ ಏನಿದು ನಿನ್ನ ಪದಯುಗ
ದೂತನಾಲ್ಪರಿವ ಮಾತನು
ಯಾತಕೇ ಕಿವಿ ಕೇಳದೋ ಕಪಿ
ನಾಥ ಪಾಲಿಸೊ ಎನ್ನ ತಾತಾ ೩

೬೯

ಮಾರುತಿ ನಿನ್ನಾ ನಿರುತದಿ ಭಜಿಪೆ
ತ್ವರಿತದಿ ಹರಿ ಸರ್ವೋತ್ತಮನೆಂಬುವ
ಸರಸ ವಿಜ್ಞಾನವ ಸರಿ ಇಲ್ಲದೆ ಇತ್ತು
ಪರಿಪಾಲಿಸು ಎಂದು ಶಿರಸದಿ ನಮಿಪೆ
ಸರಿಯಾರಯ್ಯಾ ನಿನಗೀ ಸರಸಿಜಜಾಂಡದೊಳು
ಆರಿಸಿ ನೋಡಲು ಆರಾರು ಇಲ್ಲವೊ
ಕಾರುಣ್ಯಸಾಗರ ಕರುಣಿಸೆ ನೀ ಎನ್ನಾ
ಹರಿ ತಾ ಕರುಣಿಪನೆಂದು
ಅರಿತು ನಿನ್ನಯ ದಿವ್ಯ
ಚರಣ ಸೇರಿದೆನಯ್ಯಾ
ಸರಿಬಂದದ್ದು ಮಾಡೋ
ಹರಿ ಕುಲಾವರಿಯಾನೆ
ಪರಿಪರಿ ಜನರನ್ನು ಪಾಲಿಸಿ ಎನ್ನನು
ದೂರದಿ ಇಟ್ಟರೆ ದೊರೆತನವೇನಯ್ಯಾ
ಸಾರುವೆ ಸಾರುವೆ ಸರಸಿಜನಾಭನ ಸುತನೆ
ಆರುಮೂರೆರಡೊಂದು ಸಾವಿರಾ
ಮೂರೆರಡು ಶತಶ್ವಾಸ ಜಪಗಳನು
ಮೂರುಜೀವರಲ್ಲಿ ನೀರಜಜಾಕಲ್ಪ

ಪರಿಯಂತರ ಮಾಡಿ ಅವರವರ ಗತಿಯಾ
ಮರಿಯದೆ ನೀಡುವಿ ಗಿರಿಶಾನುತಪಾದ
ಗುರುಜಗನ್ನಾಥ ವಿಠಲನ್ನ ಅರಿವಂತೆ
ಮಾಡೋ ಧೀರಾ ಕರುಣಿಯೇ

## ೭೦

ಯತಿ ಕುಲಾಂಬುಜ ನಿಜತರಣಿ ಸದಾ
ನುತಿಪ ಸುಜನರಿಗೆ ದೊರೆವೋನು ಕರುಣಿ ಪ

ಕ್ಷಿತಿಯೊಳಗೆ ಮಣಿಮಂತ ಮೊದಲಾ
ದತಿ ದುರಾತ್ಮರ ತತಿಯ ಖಂಡಿಸಿ
ವಿತತ ನಿಜಹರಿ ಮತವ ಸ್ಥಾಪಿಸಿ
ದತುಳ ಮಹಿಮನ ಸತತ ಸ್ಮರಿಸುವೆ ಅ.ಪ

ಹನುಮ ಭೀಮ ಮಧ್ವರಾಯನೆಂದು
ತನು ತ್ರಯದಿಂದಲಿ ಜನಿಸಿವ, ತೋಯ
ತನುಜ ಸಂಭವ ದೇವಿ ಕಾಯ ನೋಡಿ
ದನುಜ ಕೌರವರ ಕೊಂದನು ಭೀಮರಾಯ
ದಿನಕರ್ವಂಶಜ ಪಾದಕಮಲಕೆ
ಹನುಮ ಭಾಸ್ಕರನೆನಿಪ, ಭೀಮನು
ಮನದಿ ಕೃಷ್ಣನ ಭಜಿಪ, ವ್ಯಾಸರ
ಅಣುಗನೆನಿಸುತ ಘನದಿ ಮೆರೆದನು ೧

ರಾವಣಿ ಹಂತಕ ಹನುಮನೆನಿಸಿ
ಶೈವರಾಗ್ರಣಿ ಜರಾಸಂಧಾರಿ ಭೀಮ
ಪಾವನಾತ್ಮಕ ಮಧ್ವನಾಮ, ನಾನೆ
ದೇವರೆಂತೆಂಬೊ ಸಂಕರನ ನಿರ್ಧೂಮ

ದೇವನನುಜಗೆ ಜೀವನಿತ್ತನು
ದೇವಿ ಮೊರೆಯನು ಕೇಳಿ ಕುರುಗಳ
ಜೀವ ಹನನವ ಗೈದ ಭೀಮನು
ಶೈವ ಶಾಸ್ತ್ರವ ಮುರಿದ ಮಧ್ವನು ೨

ಜಗಕೆ ಜೀವನನೆನಿಪ ಪ್ರಾಣ ದೇವ
ನಗವೈರಿ ಮಗನಿಗೆ ನಿರುತ ಸಂತ್ರಾಣ
ಬಗೆ ವಿಧ ವಿಧದ ಪ್ರಯಾಣದಿಂದ
ಜಗದಿ ಮೆರೆದ ಪದವಾಕ್ಯ ಪ್ರವೀಣ
ಮುಗಿವೆ ಹಸ್ತದ್ವಯವ ಶಾಖಾ
ಮೃಗ, ನರಾಧಿಪ, ನಿಗಮನಿರ್ಣಯ
ಜಗಕೆ ಗುರುಜಗನ್ನಾಥವಿಠಲನು
ನಿಗಮವಾಕ್ಯದಿ ನಗುತ ಪೇಳಿದ ೩

## ೭೧

ಸತತ ಸ್ಮರಿಸೆಲೊ ಹರಿಯಾ ಪ

ಸತತ ಸ್ಮರಿಸೆಲೊ ಪರಿಯ ನುತಿಪ ಜನರನು ಮರೆಯ
ಪ್ರತಿದಿವಸ ಜನರ ಪೊರೆಯಾ ಗೋಸುಗದಿ
ಕ್ಷಿತಿಯೊಳಗೆ ತನ್ನ ಚರಿಯಾ ತೋರಿಸುತ
ಪತಿತಪಾವನರ ಹಿರಿಯಾನಾಗಿ ಬಹು
ಪತಿತ ಜನತತಿಯ ಪೊರಿಯಾ ಖರಿಯಾ ಅ.ಪ

ದ್ವಿತೀಯ ಯುಗದಲಿ ಜನಿಸಿ ಕ್ಷಿತಿಜೆ ದೇವಿಯ ಸ್ತುತಿಸಿ
ವ್ರತತಿನಿಲಯವ ಲಂಘಿಸಿ ರಾಕ್ಷಸರ
ತತಿಯ ಸಂಗರವ ಜೈಸೀ ಜಾನಕಿಯ

ಪತಿಯ ಪದಯುಗಕೆ ನಮಿಸೀ ನಿಜಪಾದಾ
ಶ್ರಿತಜನರ ಮನ ಪೂರ್ತಿಸೀ ಸಲಿಸೀ ೧

ಕುರುಕುಲೋದ್ಭವನಾಗಿ ದುರುಳ ಕುರುಗಳ ನೀಗಿ
ಧರೆಯೊಳಗೆ ಭೀಮನಾಗಿ ಧರಣಿವರ
ವರ ಯಾಗ ಯಾಜಿಯಾಗಿ ಯದುವರನ
ನಿರುತ ಪದ ಅಣುಗನಾಗಿ ಈ ಮಹಾ
ಪರಮ ಐಶ್ವರ್ಯ ಭೋಗಿಯಾಗಿ ೨

ಯತಿಯ ರೂಪವ ತಾಳಿ ಪತಿತಮತವನೆ ಸೀಳಿ
ಸತತ ಹರಿಪಾದ ಧೂಳಿ ಎಂದೆನಿಸಿ
ಶ್ರುತಿ ಸ್ಮೃತಿಗಳರ್ಥ ಪೇಳಿ ಸತ್ಯವತಿ
ಸುತನ ವಾರ್ತೆಯನೆ ಕೇಳಿ ಬದರಿಗೆ
ಧ್ರುತಗಮನವನ್ನೆ ತಾಳಿ ಪೇಳಿ ೩

ಇದಕೆ ಸರಿಯಾಗಿದ್ದ ಅದುಭುತ ಸ್ಥಳ ಇನ್ನು
ಬದಲಾವುದಿಲ್ಲವೆಂದು ಶಿಷ್ಯರಿಗೆ
ಇದ ನೀವು ತಿಳಿಯಿರೆಂದು ಎನವಾಣಿ
ಪದುಮಾಕ್ಷ ಪರವೆಂದು ಪೇಳಿದ್ದು
ಬದಲೆಂದಿಗಿಲ್ಲವೆಂದು ನಿಂದು ೪

ಮೂರು ವಿಧ ಜೀವರಲಿ ಮೂರೇಳು ಸಾವಿರದ
ಆರುನೂರೆನಿಪ ಜಪವಾ – ನಿತ್ಯದಲಿ
ತಾರಚಿಸಿ ಸತ್ವಜೀವಾ ರಜೋತಮಕ
ಪಾರ ಸುಖಾಸುಖ ಮಿಶ್ರವಾ ನೀಡುತಲಿ
ವಾರಿಭವ ಭವ ಕಲ್ಪವಾ ದೇವಾ ೫

ಚತುರವಿಂಶತಿ ತತ್ವಪತಿ ದೇವತತಿಯೊಳಗೆ
ಸತತ ನಿಂತು ಕಾರ್ಯವಾ ಮಾಡುತಲಿ
ವಿತತ ತತ್ಕಾರ್ಯ ಫಲವಾ ಜೀವರಿಗೆ

ಪ್ರತಿದಿವಸದಲುಣಿಸುವಾ ಮುಂದೆ ತಾ
ಚತುರವದನನ ಸ್ಥಾನವಾ ತಾಳುವಾ ೬

ತಾನು ಮಾಡಿದ ಕರ್ಮ ನಾನಾ ಸಾಧನ ಶ್ರೇಷ್ಠ
ಈ ನರಾದ್ಯಸುರರಲ್ಲಿ ಗುಣಕಾರ್ಯ
ನಾನಾಪರಿಪರಿಯಿಂದಲ್ಲಿ ಮಾಡಿಸುತ
ಜ್ಞಾನ ಅಜ್ಞಾನದಲ್ಲಿ ಬಂಧಿಸುತ
ತಾನಿದನು ತಿಳಿಸನಲ್ಲಿ ಇಲ್ಲೀ ೭

ಎಲ್ಲ ಸ್ಥಾನಗಳಲ್ಲಿ ಫುಲ್ಲನಾಭನ ರೂಪ
ನಿಲ್ಲದಲೆ ತಾ ನೋಡುತಾ ಭಜಿಸುವರ
ಸೊಲ್ಲಕೇಳಲ್ಲಿ ಬರುತಾ ಇರುವ ಹೃ –
ತ್ಫುಲ್ಲದಲಿ ಹರಿ ತೋರುತಾ ಭಕ್ತರನು
ಎಲ್ಲಿ ಪೋದರು ಪೊರೆಯತಾ ಇರುತಾ ೮

ಕಂಡು ಕಾಣಿಸಿ ಕೊಡುವ ಉಂಡು ಉಣಿಸುತಲಿ ಆ
ಖಂಡಲನ ಪದವಾಳಿದಾ ಸುದತಿಯರ
ಗಂಡರಿಂದಲಿ ಕಲಿಸಿದಾ ವಿಷವನು
ಉಂಡು ತ್ರಿಜಗಜ್ಜೀವದಾನೆನಿಸಿ
ಭೂಮಂಡಲಾವನ್ನಾಳಿದಾ ಶ್ರೀದಾ ೯

ಆರುಸರಿ ಇವಗಿಲ್ಲ ಪಾರಮಹಿಮನ ವೇದ
ಸಾರುತಿಹವೀತ ನಂತಾ ಗಾಣದಲೆ
ಮಾರಮುಖ ಸುರಮಹಂತಾ ಪೂಜ್ಯಪದ
ಸಾರಿದಾ ಜನ ಕೃತಾಂತಾ ತೋರಿಸನು
ಭಾರತೀದೇವಿ ಕಾಂತಾ ಶಾಂತಾ ೧೦

ನಿಗಮ ವೇದಿತ ಪಾದ ಸುಗುಣಗಣಪೂರ್ಣ ಗುರು –
ಜಗನ್ನಾಥವಿಠಲನ ದೂತ ನಿಜಕರವ
ಮುಗಿದು ಪೊರೆಯೆಂಬ ಮಾತಾನಾಡುವರ

ನಗುತ ಪಾಲಿಪನು ವೀತಾಭಯ ತಾನು
ಸುಗತಿಯನೆ ಕೊಡುವ ದಾತಾ ಖ್ಯಾತಾ ೧೧

## ಸರಸ್ವತಿ – ಭಾರತಿ

### ೭೨

ಕೃತಿಪತಿಸುತೆ ಭಾರತಿ(ಯಾ) ದೇವೀ (ಯ)
ಸತತ ಸನ್ಮತಿಯಾನಿತ್ತು
ವಿತತವಾಗಿಹಜ್ಞಾನಾ
ತತಿಯನ್ನೆ ಬಿಡಿಸಿ ನಿತ್ಯಾ
ವ್ರತತಿಜಾನಾಭನ್ನ ಸ್ತುತಿಸುವಂತೆ
ನತಿಸಿ ಬೇಡಿದೆ ಜನನಿ ಎನ್ನಾ
ಜತನಮಾಡೆಂದು ನಿನ್ನಯ ಪಾದಾ
ವ್ರತತಿಜಾದ್ವಯಗಳಿಗೆ
ನತಿಸಿ ನಿಜಾಕರಜತಿಮಾಡಿ ಬೇಡುವೆ
ನಿರಂತರಾ ಬಪ್ಪಾ ವಿಘ್ನಗಳಾ
ತತಿ ಪರಿಹರಿಸ್ಯನ್ನಾ
ಮತಿಯಲ್ಲಿ ನೀ ನಿಂತು
ವ್ಯಕತಾಳಾಗಿರೆ ನಿಜಾ
ಗತಿದಾ ಶ್ರೀ ಮಾರುತೀ ಅಂತರ್ಗತನಾದಾ
ಭೂತೇಶಾನುತಪಾದ ಗುರುಜಗ
ನ್ನಾಥಾವಿಠಲನ್ನಾ ನಿಜ ವಿ –
ಭೂತಿಗಳಾ ನೋಳ್ಪಂತೆ

### ೭೩

ಭಾರತಿದೇವಿ ಭರತನ ರಾಣಿ
ಭಾರವು ನಿನ್ನದು ತಾಯೆ
ಧಾರುಣಿಯೊಳು ನಿನ್ನಾ
ಕೀರುತಿ ಕೇಳಿ ಸಾರಿದೆ ನಿನ್ನನು
ಸಾರಭಕುತಿಯನಿತ್ತು

ಪಾರುಗಾಣಿಸು ವೈ
ಕಾರಿಕಸುರಕರವಾರಿಜ ಪೂಜಿತ
ಚಾರುಚರಣಯುಗ
ತೋರಿಸಿ ಎನ ಮನೋ-
ನೀರಜದಲಿ ನಿಂದು ಮಾರಮಣನ ಪಾದ
ಸೇರಿಪ ಭಕ್ತಿಯ ದಾರಿಯನಿತ್ತು ಭವ
ದೂರನ ಮಾಡೆಂದು ಸಾರಿದೆ ಸಾರಿದೆ
ಮಾರಜನಕ ಗುರು ಜಗನ್ನಾಥವಿಠಲನ
ತೋರಿಸು ತೋರಿಸು ದೂರಮಾಡದಲೆ

## ೭೪

ಭಾರತಿ ಪಾಲಿಸು ನಿತ್ಯ ಪ

ಭಾರತಿ ಭಾಸ್ವರಕಾಂತೆ ನಿನ್ನ
ಸಾರುವೆ ಸತತ ನಿಶ್ಚಿಂತೆ ಆಹಾ
ವಾರಿಜಸಮಪಾದ ತೋರಿಸು ಮಮ ಸುಹೃ -
ನ್ನೀರಜದೊಳು ನಿತ್ಯ ಗಾರುಮಾಡದೆ ಜನನಿ ಅ.ಪ

ಹರಿಯ ಪಟ್ಟದ ನಿಜರಾಣಿ ಎನಗೆ
ಹರಿಯ ತೋರಿಸೆ ಹೇ ಕಲ್ಯಾಣಿ ನಿನಗೆ
ಶರಣೆಂಬೆ ಕಾಲಾಹಿವೇಣಿ ಪರಮ
ಕರುಣಿಯೆ ಕೋಕಿಲವಾಣಿ ಆಹಾ
ಹರಿಹರಾದ್ಯನಿಮಿಷ ಕರಕಮಲಪೂಜಿತೆ
ವರಭಾಗವತರಗ್ರೇಸಳೆಂದು ನಮಿಸುವೆ ೧

ಮೂರೇಳು ತತ್ವಾಭಿಮಾನಿ ಎನಿಸಿ
ಮೂರಾರು ಭಕುತಿಯಿಂದಲಿ ನೀ ಸತತ
ಮೂರು ಜೀವರೊಳು ಪ್ರೇರಣೆಯಾಗಿ
ಮೂರೊಂದು ಮೊಗನ ಕಲ್ಯಾಣಿ ಆಹಾ

ಮೂರು ಬಗೆಯ ಜನಕೆ ಮೂರು ವಿಧದಿ ಗತಿ
ಮೂರು ಕಾಲಕೆ ಇತ್ತು ಮೂರುಮಾಡುವಿ ದೇವಿ ೨

ಮಾತರಿಶ್ವನ ಪಾದಕಮಲ ಯುಗಕೆ
ನೀತಷಟ್ಪದಳೆ ನಿರ್ಮಲ ಮನಸು
ಆತುರದಲಿ ಮಾಡು ವಿಮಲೆ ನಮಿಪೆ
ಕಾತರಭವಶ್ರಮಶಮಲಾ ಆಹಾ
ಜಾತರೂಪೋದರತಾತ ಶ್ರೀ ಗುರುಜಗ –
ನ್ನಾಥವಿಠಲಗೆ ನೀ ದೂತನೆನಿಸು ಎನ್ನ ೩

## ೭೫

ವಾಣಿ ಬೊಮ್ಮನ ರಾಣೀ ಗುಣಗಣ ಶ್ರೇಣೀ
ವೀಣಾಪಾಣೀ ಕೋಕಿಲವಾಣೀ ಕಾಲಾಹಿವೇಣೀ
ಮಾಣದೆ ಎನ್ನಾ ವಾಣಿಲಿ ನಿಂತು ಜಾಣತನವಿತ್ತು
ವೀಣೆಯ ಪಿಡಿದು ವಾಣಿಯ ನುಡಿಸುವ
ವೈಣಿಕನ ತೆರ ವಾಣಿಲಿ ಹರಿಗುಣ
ಗಾನವ ಮಾಡಿಸೆ ಪಾಣಿಯುಗವ ಮುಗಿದು
ಗೋಣು ಬೊಗ್ಗಿಸಿ ನಮಿಪೆ ಕ್ಷೋಣಿಯೊಳಗೆ ಜ್ಞಾನ
ಕ್ಷೀಣಿಸಿದಂತಿತ್ತು ಪ್ರಾಣಾಂತರ್ಗತ ವೇಣುಗೋಪಾಲನ
ಕಾಣಿಸುಯನ್ನೊಳು ಕರುಣದಲಿ
ಮಾನದ ಗುರುಜಗನ್ನಾಥವಿಠಲ ತಾನೆ ತೋರುವಂತೆ ಮಾಡೆ

## ೭೬

ಸರಸಿಜೋದ್ಭವ ರಾಣಿ ಸರಸಕೋಕಿಲ ವಾಣಿ
ಸರಳಾ ನುಡಿಯಾ ನೀಡೆ ಸುಗುಣಾಮಣಿ
ದುರುಳಾ ದುರ್ವಿಷಯಾ ಹಣಿ ತರಳನಾ
ನುಡಿ ಕೇಳು ಎನ್ನಾ ವಾಣೀ

ಮರುಳುಮಾಯಾಗರಳಾಸಾಗರದೊಳು ಬಿ –
ದ್ದೊರಳುವೆನೇ ನಿತ್ಯಾ ಮರಗುವೆ ಶರಣಾಗತನಾದ್ಯನ್ನಾ
ದುರಿತಾ ಪರಿಹರಿಸಿ ಹರಿಸರ್ವೋತ್ತಮನ್ನಾ ಭಜಿಸುವಂತೆ
ತ್ವರಿತದಿ ಮಾಡೆಂದು ಶರಣುಪೊಕ್ಕೆನೆ ನಿನ್ನಾ
ಚರಣಕಮಲಕೆ ಅರಿತು ನೀನೇ ಪರಿಪಾಲಿಸೆ ಜನನೀ
ಮರೆತು ಬಿಟ್ಟರೆನ್ನಾ ಪೊರಿವೊರ್‍ಯಾರೇ
ಗುರುತಮ ಮಾರುತಿ ಅಂತರ್ಗತನಾದಾ
ಭೂತೇಶಾನುತಪಾದಾಂ
ತರಿಯಾಮಿ ಗುರುಜಗನ್ನಾಥ ವಿಠಲನ್ನಾ
ಪರಿಪರಿ ಸ್ತುತಿಸುವಂಥ ಭಾಗ್ಯ ಭಾರತಿ ನೀಡೇ

## ರುದ್ರದೇವರು

### ೭೭

ಇಂದು ಶೇಖರ ಶಿವ ನಂದಿವಾಹನ ಶೂಲಿ
ಸ್ಕಂಧಗಣಪರ ತಾತ ದಂದಶೂಕಕಲಾಪ
ಮಂದಾಕಿನಿಧರ ಪುರಂದರ ಮುಖಸುರ
ವೃಂದವಿನುತ ಪಾದಾದಿಂದ ಶೋಭಿತ ದೇವ
ಕಂದು ಕಂಧರ ತ್ರಿಪುರ ಸಂದೋಹಹರ ಹರ
ವಂದಿಸಿ ಬೇಡುವೆ ಫಲ ಸಂದೇಹಮಾಡದಲಿತ್ತು
ನಂದ ನೀಡುವಿ ನೀನೆಂದು ನಿನ್ನಯ ಬಳಿಗೆ
ಬಂದೆನ್ನ ಮನೋರಥಾ ಇಂದು ಪೂರ್ತಿಸೋ ಗುರೋ
ಗಂಧವಾಹನ ತನಯಾ ಇಂದಿರಪತಿ ಗುರುಜಗನ್ನಾಥವಿಠಲಾ
ನಂದಾ ಬಡುವನಿದಕೆ ಸಂದೇಹ ಇನಿತಿಲ್ಲಾ

### ೭೮

ನೀಲಕಂಧರಾ ಪಾಲಿಸು ಎನ್ನ ನೀಲಕಂಧರಾ ಪ

ಕೀಳು ಸುರರು ತಾವು ತಾಳದೆ ಬಿಟ್ಟಿಹ
ಕಾಳಕೂಟವನು ತಾಳಿದ ಧೀರಾ ಅ.ಪ

ಇಂದುಶೇಖರಾ ನಮಿಸುವೆ ನಿನ್ನ
ನಂದಿಯ ತೇರಾ
ಇಂದ್ರವಂದ್ಯಹರ ಮಂದಾಕಿನಿ ಧರ
ಗೊಂದೆವಳವಿಗೆ ಮುಕುಂದನ ದಾಸ ೧

ಶಂಭೋ ಮಹಾದೇವ ಭಜಿಸುವ ಭಕುತಕ –
ದಂಬವ ಕಾವ
ವಂದಿಪ ಜನಕಾ – ನಂದ ನೀಡುವ ಗೋ –
ವಿಂದನ ನಿಜಮನ ಮಂದಿರದಲಿ ತೋರೋ ೨

ಭೂತನಾಥನೆ ಗುರುಜಗನ್ನಾಥವಿಠಲ ದೂತನೆ
ಪಾತಕರಾಶಿಯ ಘಾತಿಸು ತ್ರಿಪುರಾ –
ರಾತಿಯೆ ನಿನ್ನಲಿ ಪ್ರೀತಿಯ ಸಲಿಸೋ ೩

## ೭೯

ರುದ್ರ ಎನ್ನನು ಪಾಲಿಸೋ ವೀರಭದ್ರಾ ಪ

ರುದ್ರ ನೀ ಎನ್ನ ಹೃದ್ರೋಗ ಕಳೆದು ಸ –
ಮುದ್ರನಿಲಯನ ಪದಭಕುತಿಯಾ
ಛಿದ್ರವಿಲ್ಲದೆ ನೀಡ್ಯು ಪದ್ರವಳಿದು ಜ್ಞಾ –
ನಾರ್ದ್ರಸ್ವಾಂತನ ಮಾಡೊ ಸುಭದ್ರ ಮೂರುತಿಯೆ ೧

ಕುಧ್ರಜಾಧವ ಕೇಳೋ ಕುಧ್ರಬೆನ್ನಲಿ ತಾಳಿ ಸ –
ಮುದ್ರ ಮಥಿಸ್ಯಮೃತ ಸಾಧಿಸೀ
ನಿದ್ರಹೀನರಿಗಿತ್ತ ಸುಭದ್ರೆಯಣ್ಣನಭಕುತಿ
ಯುದ್ರೇಕವನೆ ಪಾಲಿಸಯ್ಯಾ ರುದ್ರಾ ೨

ಭೂತಿದಾಯಕನೆ ವಿಭೂತಿಭೂಷಣ ವಿ –
ಧಾತನಾತ್ಮಜ ಹೃದಯವಾಸಾ
ವಾತಗುರುಜಗನ್ನಾಥವಿಠಲ ಪೌತ್ರ
ಮಾತು ಲಾಲಿಸೊ ಮುಖ್ಯದೂತನಿವನೆಂದು ೩

## ೮೦

ಶಂಭೊ ಪಾಲಿಸೊ ನೀ ಎನ್ನ ಜಗ –
ದಂಬಾರಮಣ ಮುಕ್ಕಣ್ಣಾ ಪ

ಕುಂಭಿಣಿಕೃತರಥ ಜಂಭಾರಿನುತಪಾದ –
ಅಂಬುಜ ಮನ್ಮನೊ ಅಂಬುಜದಲಿ ತೋರೊ ಅ.ಪ

ನಂದಿವಾಹನ ತ್ರಿಶೂಲಿ ಶತಾ –
ನಂದನಂದನ ಕಪಾಲೀ
ವಂದಿಪ ಜನರಘ ಛಿಂದಿಸಿ ಸುಜ್ಞಾನಾ
ನಂದಾ ಸಲಿಸುವ ನೆಂದು ನಿನ್ನನು ಭಜಿಪೆ
ಸಿಂಧು ಜಾತಾರ್ಧ ಮೌಲಿಯೆ
ಕಂದುಕಂಧರ ನಿನ್ನ ಪಾದ –
ದ್ವಂದ್ವದಲಿ ಮನ್ಮನಸು ನಿಲ್ಲಿಸಿ
ಇಂದಿರೇಶನ ತೋರಿಸಯ್ಯಾ ೧

ಮನೋಮಾನಿಯೇ ಮಾರಾರಿ ಎನ್ನಯ ದು –
ರ್ಮನಸು ಬಿಡಿಸೊ ತ್ರಿಪುರಾರಿ
ಕನಕಗರ್ಭನ ಭೃಕುಟಿ – ಜನುಮ ನಿನ್ನಯ ಪಾದ –
ವನಜಯುಗ್ಮದಿ ಎನ್ನ – ತನುವು ನೀಡುವೆ ದೇವಾ
ಇನಶಶಾಂಕಾಗ್ನೀನಯನನೆ
ಕನಕಗಿರಿಕೃತಅಂಬುಪಾಣಿಯೆ
ಜನುಮ ಜನುಮಕೆ ಹರಿಯ ಭಜಿಸುವ
ಮನಸು ಪಾಲಿಸೊ ಪವನತನಯನೆ ೨

ನಿಟಿಲಾಕ್ಷ ಸುರಗಂಗಾಧರನೆ – ಪಂಪಾ –
ತಟನಿಲಯನೆ ನಿಸ್ಸಂಗಾ
ಕಟುಜನಅಹಿಕುಲ ಖಟಸಮ ಹರಿಪಾದ
ಭಟಜನರೊಳು ನೀನು – ದ್ಧಟನೆನಿಸಿದ ದೇವಾ
ಧಿಟನೆ ಎನ ಭವ ಅಟದವಾನಲ
ಕುಟಿಲ ಕಟು ಮತಿ ಥಟನೆ ನೀಗುವ
ಧಿಟ ಗುರುಜಗನ್ನಾಥ ವಿಠಲನ
ಭಟಜನಾಗ್ರಣಿ ಥಟನೆ ಪಾಲಿಸೊ ೩

## ೮೧

ಹರನೆ ನಾ ನಿನ್ನ ಪರಿಸರನಯ್ಯಾ
ಪೊರಿ ಎನ್ನ ಜೀಯಾ
ಸುರವರ ಸ್ಮರಮುಖ ನುರಗಣಸೇವ್ಯನೆ ಪ

ನರವರನಿಗೆ ನೀ ಹರಿಮಹಿಮೆಯ ಪೇಳಿದೆ ಅ.ಪ
ಅಂಬಾಧವ ಹೇರಂಬನ ತಾತ ಶರಜನ್ಮನ ಪಿತ
ಶಂಬಾರಾರಿಯ ಭಯನಿರ್ಜಿತ ಸುರವರನಾಥ
ಕುಂಭಿಣಿರಥ ಹರಳಂಭೋ ಶಂಕರ ಶಿವ
ನಂಬಿದೆ ನಿನ್ನನು ತ್ರ್ಯಂಬಕ ಪಾಲಿಸೊ ೧

ನಂದೀವಾಹನ ಮೃಗವರವಾಣಿ ಸದ್ಗುಣಶ್ರೇಣೀ
ತಂದೂತಂದರ ಚಂದ್ರದ್ಯುಮಣಿ ಪಾವಕ ನೇತ್ರ ತ್ರೀಣಿ
ಇಂದುಶೇಖರ ಭವ ಕಂಧರಮಾಲಿಯೆ
ದಂದಶೂರ ನಿಜಬಂದ ಕಲಾಪನೆ ೨

ಗಂಗಾಧರ ದಿಗಂಬರವೇಷಾ – ಧರಿಸಿದ ಈಶಾ
ಲಿಂಗಾಕಾರದಿ ಜನಮನತೋಷಾ–ಮಾಡುವಿ ಜಗದೀಶಾ
ಮಂಗಳಕರ ಭವಸಂಗ ವಿವರ್ಜಿತ
ತುಂಗಮಹಿಮ ಭಸಿತಾಂಗ ಶುಭಾಂಗ ೩

ಕನಕಾಚಲಕೃತವರಚಾಪಾ – ದೋಷನಿರ್ಲೇಪಾ
ಮನಸೀ ಜಾತನ ಸುಪ್ರತಾಪಾ ನಿರಸನ ಮಾಡಿದ ಭೂಪಾ
ಘನಗುಣ ನಿನ್ನ ಪಾದವನಜಕೆನಮಿಪೆ
ಧನವನು ಪಾಲಿಸು ಧನಪನ ಸಖನೆ ೪

ದಾತಾ ಗುರುಜಗನ್ನಾಥಾ – ವಿಠಲದೂತಾ
ಪ್ರೀತಾನಾಗೆನ್ನಯ ಮಾತಾ ಲಾಲಿಸೊ ಖ್ಯಾತಾ
ಪಾತಕ ಕಾನನ ವೀತಿಹೋತ್ರ ಶುಭ
ವ್ರಾತವ ಪಾಲಿಸ್ಯನಾಥನ ಪೊರಿಯೋ ೫

## ಪಾರ್ವತಿ

## ೮೨

ಅಂಬಾ ನಿನ್ನಯ ಪಾದ ಅಂಬುಜಯುಗ ಮನ
ಅಂಬುಜಾದೊಳಗತಿ ಸಂಭ್ರಮದಿಂದಲಿ
ನಂಬಿ ಭಜಿಪನ ಚಿತ್ತದಿ ಇಂಬುಗೊಂಡಿರುವೋ
ಬಿಂಬರೂಪನ ತೋರೆ ಅಂಬುಜಾಂಬಕೆ
ಶಂಭುದೇವನ ಪ್ರಿಯೆ – ದಂಭೋಲಿಧರವಿನುತೆ
ಅಂಬರಮಾನಿಮಾತೆ ಪ್ರಖ್ಯಾತೆ
ಶುಂಭನಿಶುಂಭಾಸುರ ಕದಂಬ ಸಂಗ್ರಾಮ ಹಾರೀ
ಕುಂಭಿಣಿಧರಜಾತೆ ರಾಜಿತೆ
ಕಂಬುಚಕ್ರಪಾಣಿ ವಿಶ್ವಂಭರ ಮೂರುತಿ
ಅಂಬುಜಾಪತಿ ನಮ್ಮ ಗುರುಜಗನ್ನಾಥವಿಠಲನ್ನ
ಕಾಂಬುವತೆರ ಮಾಡೆ ಕರುಣಾಕರಳೆ

# ಯತಿಗಳು

## ಜಯತೀರ್ಥರು

### ೮೩

ಜಯರಾಯಾ ಜಯರಾಯಾ ಪ

ದಯಕರ ಸಜ್ಜನಭಯಹರ ಗುರುವರ ಅ.ಪ

ವಾಸವ ನೀ ವಸುಧೀಶನ ನಿಜ
ಕೂಸೆನಿಸೀಪರಿ ದೇಶದಿ ಮೆರೆದೆ ೧

ಸತಿಯಳ ತ್ಯಜಿಸಿ ಯತಿರೂಪ ಧರಿಸಿ
ಪತಿತರ ಶಾಸ್ತ್ರವ ಹತಮಾಡಿದಿ ನೀ ೨

ಸುಧಾದಿಗ್ರಂಥವ ಮುದದಲಿ ರಚಿಸಿ
ಬುಧಜನಸ್ತೋಮಕೆ ಒದಗಿಸಿ ಕೊಟ್ಟೆ ೩

ಅಲವಬೋಧರ ಮತ ಬಲವತ್ತರಮಾಡಿ
ಜಲಜನಾಭನ ಮನ ಒಲಿಸಿದ್ಯೊ ಜೀಯಾ ೪

ಪ್ರಮಿತಜನಗಣನಮಿತ ಪದಾಂಬುಜ
ಅಮಿತಮಹಿಮ ನಿನ್ನ ನಮಿಸುವೆ ದಿನದಿನ ೫

ಯಾತಕೆ ಎನ್ನನು ಈ ತೆರನೋಡುವಿ
ದಾತಗುರುಜಗನ್ನಾಥ ವಿಠಲ ಪ್ರೀಯ ೬

## ಶ್ರೀ ವ್ಯಾಸರಾಯರು

### ೮೪

ನೋಡಿದೇ ನಾ ನೋಡಿದೆ ಪ

ನೋಡಿದೆನೊ ಗುರು ವ್ಯಾಸರಾಯರ
ನೋಡಿದೆನೊ ಶುಭಕಾಯರಾ
ಮಾಡಿದೆ ಶಿರಬಾಗಿ ನಮನವ
ಬೇಡಿದರ್ಥವ ಕೊಡುವ ವಡೆಯರ ಅ.ಪ

ಭಿದುರಮಯವಾದ ವೇದಿಕಾಗ್ರದಿ
ಚದುರದಿಕ್ಕಿಲಿ ಶೋಭಿಸುವ ಶುಭ
ತ್ರಿದಿಶವರ ಮುಖ ದಿವಿಜರ್ವೈವರು
ಮುದದಿ ಇರುತಿಹರಿವರ ಮಧ್ಯದಿ
ಪದುಮನಾಭನ ಚತುರರೂಪವ
ಹೃದಯ ಮಂದಿರದಲ್ಲಿ ಭಜಿಸುವ
ಪದುಮನಾಭನ ಪ್ರೀತಿಪಾತ್ರರ
ಸದಮಲಾಗುರು ವ್ಯಾಸರಾಯರ ೧

ಶ್ರೀನಿವಾಸನು ಶಿರಸಿನೊಳಗಿಹ
ಆನನಾಗ್ರದಿ ಬಾದರಾಯಣ
ಜ್ಞಾನಮಯ ಶಿರಿ ಹಂಸ ಅಚ್ಯುತ
ಮೌನಿ ಕಪಿಲಾನಂತ ಭಾರ್ಗವ
ಮಾನನಿಧಿ ಹಯಗ್ರೀವ ಹಂಸನು
ದಾನವಾಂತಕ ರಾಮಚಂದ್ರ ಸ –
ದಾನುರಾಗದಿ ತೆನೆಗಳಲ್ಲಿ
ಭಾನುನಂದದಿ ಪೊಳೆವ ಬಗೆಯನು ೨

ಮಧ್ಯಭಾಗದಿ ಕೃಷ್ಣದೇವನು
ಇದ್ದು ಇವರನು ಸೇವೆ ಮಾಳ್ಪರ

ಶುದ್ಧ ಮಾಡ್ಯವರರ್ಥ ಸರ್ವದ
ಶಿದ್ಧಿಮಾಡಿ ಇವರನತಿ ಪ್ರ
ಶಿದ್ಧಮಾಡಿವರಲ್ಲಿ ಪ್ರತ್ಯಕ್ಷ
ಸಿದ್ಧನಾಗಿರುತಿಹನು ನಮ್ಮ ಗುರು
ಮಧ್ವಗುರುಜಗನ್ನಾಥವಿಠಲನ
ಮಧ್ಯಹೃದಯದಿ ಭಜಿಪ ಗುರುಗಳ ೩

## ೮೫

ವ್ಯಾಸರಾಯಾ ಅಸ್ಮದ್ಗುರೋ ವ್ಯಾಸರಾಯಾ ಪ

ವ್ಯಾಸರಾಯಾ ತವೋಪಾಸನ ಮಾಳ್ಪ
ವಿಶೇಷ ಜ್ಞಾನ ಭಕ್ತಿ ಲೇಸಾಗಿ ಸಲಿಸಯ್ಯಾ ಅ.ಪ

ದಾಸನಾಮಕ ದ್ವಿಜ ದೇಶಮುಖನ ಮನಿ -
ಕೂಸಾಗಿ ಜನಿಸಿದೆ ಭೂಸ್ಪರ್ಶವಿಲ್ಲದೆ ೧

ಶ್ರೀಪಾದರಾಯರು ಈ ಪರಿ ನಿನ್ನನು
ಕಾಪಾಡಿ ನವವರ್ಷ ಭೂಪತಿ ಮಾಡಿದರೋ ೨

ದಶಮವತ್ಸರದಲ್ಲಿ ಅಸಮಜ್ಞಾನಿ ಎನಿಸಿ
ವಸುದೇವ ಸುತನನ್ನು ಸುಸಮಾಧಿಯಲಿ ಪಡೆದೆ ೩

ಅಲವಬೋಧರ ಮತ ಜಲಧಿನಿಶಾಕರ
ಕಲೆಯಂತೆ ದಿನದಿನದಲಿ ವೃದ್ಧನಾದೆ ನೀ ೪

ಚಂಪಕ ತರು ಮುಖ್ಯ ಕಂಪಿತ ನದಿಯುತ
ಪಂಪಾಕ್ಷೇತ್ರದಿ ಮಹಾ ಸಂಪತ್ತಿನಿಂದಿದ್ದೆ ೫

ಚಕ್ರತೀರ್ಥದಲಿ ಮರ್ಕಟ ಬರಲಂದು
ತರ್ಕಿಸಿ ಯಂತ್ರಸ್ಥ ಚಕ್ರದಿ ಬಂಧಿಸಿದೆ ೬

ಪದ್ಮತೀರ್ಥದಲಿ ಇದ್ದ ನಿಜಗುರು
ಮಧ್ವರಾಯರ ತಂದು ಸಿದ್ಧಮಾಡಿ ಇಟ್ಟೆ ೭

ಮಂದಜನಕೆ ಸುಧಾ ಛಂದಾಗಿ ಇದರರ್ಥ

ಪೊಂದದೆಂದು ನೀನು ಚಂದ್ರಿಕೆ ರಚಿಸಿದೆ ೮

ಇನಿತೆ ಮಹಾಮಹಿಮೆ ಘನವಾಗಿ ಜನರಿಗೆ
ಅನುಭವ ಮಾಡಿಸಿದೆ ಅನುಪಮ ಚರಿತನೆ ೯

ಇಭಗುಹವರತುಂಗ ಉಭಯ ಪ್ರವಾಹಮಧ್ಯ
ಶುಭಮಯ ಸ್ಥಳದಲ್ಲಿ ಅಭಯನಾಗಿ ನಿಂತೆ ನೀ ೧೦

ಬಂದ ಜನರಘ ನಿಂದ್ರಾದೆ ಕಳೆಯುತ
ಛಂದದ ನವಶುಭವೃಂದಾವನದೊಳಿದ್ದೆ ೧೧

ಇಂದು ನಿಮ್ಮಯ ಪಾದ ಪೊಂದಿ ಎನ್ನಯ ವೃಜಿನ –
ವೃಂದ ಪೋದವು ಅರ್ಕನಿಂದ ತಿಮಿರದಂತೆ ೧೨

ಮಂದಜನರಿಗೆ ಅಮಂದ ಭಾಗ್ಯನಿಧೆ
ವಂದಿಸಿ ಬೇಡುವೆ ನಂದದಿ ಸಲಹಯ್ಯ ೧೩

ತಂದೆ ತಾಯಿಗಳು ಅಂದೆ ಬಿಟ್ಟರೆನ್ನ
ಇಂದು ರಕ್ಷಕರಿಲ್ಲವೆಂದು ನಿನ್ನನು ಸಾರ್ದೆ ೧೪

ಪೊಂದಿ ಕೊಂಡಿರುವವನೆಂದು ಎನ್ನನು ಕೃಪೆ
ಯಿಂದ ಕರೆದು ಕಾಯೋ ನಂದಾದಾಯಕ ನೀನೆ ೧೫

ಇಷ್ಟದಾಯಕ ನಿನ್ನ ಮುಟ್ಟಿಭಜಿಪ ದಿವ್ಯ
ದೃಷ್ಟಿ ಪಾಲಿಸೊ ಸರ್ವೋತ್ಕೃಷ್ಟ ಮಹಿಮ ನೀನೆ ೧೬

ಮಾತು ಲಾಲಿಸೊ ನಿಜತಾತ ನೀನೆ ಸೀತಾ -
ನಾಥ ಗುರುಜಗನ್ನಾಥವಿಠಲನಾಣೆ ೧೭

## ಶ್ರೀ ವಾದಿರಾಜರು

### ೮೬

ವಾದಿರಾಜ ನಿಜ ಮೋದನೀಡುವ ತವ
ಪಾದವ ತೋರಿಸಯ್ಯಾ ಹೇ ಜೀಯಾ ಪ

ವೇದವೇದ್ಯ ಯತ್ಯಾರಾಧೀತ ಸುಜ -
ನೋದ್ಧಾರಮಾಡಿದ ಪಾದವೋಗುರುರಾಯಾ ।
ಮೇದಿನಿ ಸುರರಿಗೆ ಸಾದರದಿಂದ
ಭೋಧನೀಡಿದ ಪಾದವೋ ಮಹರಾಯಾ ೧

ವಂಧ್ಯಸತೀ ಜನಕೆ ಸಂದೇಹಮಾಡದೆ
ಕಂದರ ಕೊಟ್ಟ ಪಾದ ಯತಿರಾಯಾ
ಮಂದಭಾಗ್ಯಗೆ ಭಾಗ್ಯಸಂದೋಹ ದಿನದಿನಾ
ಮಂದ ನೀಡುವ ಪಾದವೋ ಸುರನಾಥ ೨

ನಷ್ಟನಯನ ಮಹಾಕುಷ್ಟಜನರ ನಿಜ
ಇಷ್ಟಾ ನೀಡುವೋ ಮಹರಾಜಾ
ಕಷ್ಟಬಡುವ ಸುಜನಾನಿಷ್ಟ ಕಳೆದು ಸರ್ವೋ
ತೃಷ್ಟರೆನಿಸಿದ ಪಾದವೋ ಹೇ ಪ್ರಭುವೇ ೩

ಎಲ್ಲಾರ ಮನೋರಥ ನಿಲ್ಲಾದೆ ಸರ್ವದ
ಸಲ್ಲೀಸಿರುವ ಪಾದವೋ ಕರುಣಾಳೋ
ಪುಲ್ಲಲೋಚನ ಬಲ್ಲಿದ ಮಮ ಮನೋರಥ
ಸಲ್ಲಿಸ ದೇನೋ ಪಾದ ಶ್ರೀಕರಾ ೪

ಪಾತಕ ಪರಿಹಾರಾನಾಥರಕ್ಷಕ ಭಾವಿ
ಧಾತಾ ನಿನ್ನಯ ಪಾದವೋ ಹೇ ತಾತಾ

ದಾತಾ ಗುರುಜಗನ್ನಾಥ ವಿಠಲ ನಿಜ
ದೂತನ ಶುಭಪಾದವ್ಕೋ ಮನ್ನಾಥಾ ೫

## ೮೭

ರಾಜರ ನೋಡಿರ್‍ಯೆ ಇನತತಿತೇಜರ ಪಾಡಿರ್‍ಯೆ ಪ

ರಾಜಿಪ ಶಿರಿವರ ವಾಜಿವದನ ಪದ
ಪೂಜಕರಾ ಸುರಸನ್ನುತರ ಅ.ಪ

ತರುಣಾರುಣ ಸಮ ಚರಣಾಂಗುಲಿ
ನಖರಗಳೋ ವಜ್ರದ ಶಕಲಗಳೋ
ವರ ಪಾರ್ಷ್ಣಿದ್ವಯ ಪರದಲಿ ಶೋಭಿಪ
ಗುಲ್ಫಗಳೋ ಮಾಣಿಕಯುಗಳೋ
ಕರಿವದನೋರ್ಧ್ವಗ ವರದಂತೋಪಮ
ಜಂಘಗಳೋ ಮೀನ್ಗಳಯುಗಳೋ
ಪರತಮಯತಿವರ ಗುರುರಾಯರ ಯುಗ
ಜಾನುಗಳೋ ಶಶಿಬಿಂಬಗಳೋ ೧

ಶಂಭುಮುಖರ ಕದಂಬವಂದ್ಯನ
ಊರುಗಳೋ ಮೋಚಾವೃಕ್ಷಗಳೋ
ಕುಂಭೀಶ್ವರ ವರಕುಂಭೋಪಮ
ಕಟಿತಟವೋ ಕೇಸರಿ ನಡುವೋ
ಜೃಂಭಿತ ಊರು ಅರುಣಾಂಬರ
ಶೋಭಿತ ರೂಪಾ ಹಾಕಿದ ಕೈಪಾ
ತುಂಬಿದ ಕರುಣನ ಗುಂಭಸುನಾಭೀ –
ತಾವರೆಯೋ ಗಂಗಾಸುಳಿಯೋ ೨

ಸುಂದರ ಕುಕ್ಷಿ ಸುಚಂದನ ಚರ್ಚಿತ
ಹೃನ್ಮಂಡಲವೋ ಹರಿಮಂದಿರವೋ

ಕುಂದದ ತುಳಸ್ಯರವಿಂದ
ಸುಮಾಲಾವಳಿಯೋ ಗಂಗಾಹೊಳೆಯೋ
ಮಂದಜಾಕ್ಷೀಮಣಿಯಿಂದ ಶೋಭಿಪ
ಕಂಧರವೋ ಕಂಬುವರವೋ
ಛಂದಸುಗಾತ್ರನ ದ್ವಂದ್ವಬಾಹು
ದಂಡಗಳೋ ಕರಿ ಶುಂಡಗಳೋ ೩

ಯತಿಕುಲವರ್ಯನ ಸ್ಮಿತಯುತ ವಕ್ತ್ರ
ಸುವರ್ತುಲವೋ ಅರಳಾಂಬುಜವೋ
ಅತಿಮಹಿಮನ ವರಶಿತಕರ
ದಂತಾವಳಿಯೋ ಮಲ್ಲಿಗಿ ಮುಗುಳೋ
ಕ್ಷಿತಿಸುರ ವಂದ್ಯನ ಅತಿ ಸುಂದರ –
ನಾಸಿಕವೋ ತಿಲಸುಕುಸುಮ ವೋ
ಗತಿಸೂನ್ಯಗೆ ಸದ್ಗತಿದಾತನ
ನಯನಗಳೋ ನೈದಲಿಯುಗಳೋ ೪

ಭೂತಾಧಿಪನಭಾತಕಪೋಲ
ದ್ವಯವೋ ದರ್ಪಣಯುಗವೋ
ವೀತಭಯನ ಸುಖವ್ರಾತದ
ಭ್ರೂಯುಗಳೋ ಕಾರ್ಮುಕಯುಗಳೋ
ಪಾತಕಹರ ಹರಿಗಾಥವ ಕೇಳುವ
ಕರ್ಣಗಳೋ ಸೂಪರ್ಣಗಳೋ
ಪೀತತಿಲಕದಿಂದೀತೆರ ಶೋಭಿಪ
ಫಣೆಯೋ ಅಕ್ಷತಮಣಿಯೋ ೫

ಮಂದಿರವೆನಿಸುವ ವೃಂದಾವನ ಶುಭ
ಪಂಚಕವೋ ನಂದನವನವೋ
ವೃಂದಾರಕ ಘನ ವೃಂದದಿ ರಾಜಿಪ
ಭೂಪಾ ಅಪ್ರತಿರೂಪಾ
ಮಂದಜನಕೆ ಸ್ವಾನಂದದ ನೆನಿಸಿದ

ದಾತಾ ಜಗದೊಳು ಖ್ಯಾತಾ
ಇಂದಿರಧವನನ ಛಂದದಿ ಒಲಿಸಿದ
ನೀತಾ ಭಾವಿ ವಿಧಾತಾ ೬

ಸೃಷ್ಟಿಗೆ ಮೀರಿದ ಶ್ರೇಷ್ಠನ ಶುಭತಮ
ಪಾದಾ ವಂದಿಸಿ ಮೋದಾ
ಎಷ್ಟೀತನ ಉತ್ಕೃಷ್ಟ ಪ್ರತಾಪದ
ಕೊನಿಯಾ ಸುರರಜ್ಞೇಯಾ
ಘಟ್ಟೀತನ ಮನ ಮುಟ್ಟಿಭಜಿಸಲು
ದುರಿತವ ತಡೆವಾ ಕಾಮಿತ ಕೊಡುವಾ
ಶಿಷ್ಟರ ಸುಮನೋಭೀಷ್ಟದ ಗುರುಜಗ -
ನ್ನಾಥವಿಠಲ ದೂತಾ ೭

## ೮೮

ಶರಣು ಶರಣಯ್ಯಾ ಪ

ಶರಣು ಶ್ರೀ ಗುರುವಾದಿರಾಜಗೆ
ಶರಣು ಸುರಗಣ ಮಾನ್ಯಗೆ
ಶರಣು ಶರಣರ ಪೊರೆವ ಕರುಣಿಗೆ
ಶರಣು ಹರಿಗುಣ ಲೋಲಗೆ ಅ.ಪ

ಮಧ್ವಮತಶುಭವಾರ್ದಿಚಂದ್ರಗೆ
ಸಿದ್ಧಸಾಧನ ಮೂರ್ತಿಗೆ
ಬದ್ಧ ಶ್ರೀಹರಿ ದ್ವೇಷಿಮಾಯಿಗಳ
ಗೆದ್ದಹಯಮುಖ ದಾಸಗೆ ೧

ನಿತ್ಯ ನಿರ್ಮಲ ನಿಗಮ ಸ್ತೋತ್ರಗೆ
ಭೃತ್ಯಪಾಲಕ ಸುಗುಣ ಗಾತ್ರಗೆ

ಸತ್ಯಲೋಕಕೆ ಮುಖ್ಯಪಾತ್ರಗೆ
ಸ್ತುತ್ಯಯತಿವರ ಸುಜನ ಮಿತ್ರಗೆ ೨

ಮೋದದಾಯಕ ಭೇದಸಾಧಕ
ಸ್ವಾದಿಕ್ಷೇತ್ರಕಧೀಶಗೆ
ವೇದವೇದ್ಯಯತೀಶ ತಾತಗೆ
ಆದಿ ಗುರುಜಗನ್ನಾಥವಿಠಲಗೆ ೩

೮೯

ವಾದಿರಾಜ ಸುರರಾಜ ತಾನಾದರೆ
ಮೇದಿನಿಯೊಳಗಿಹನ್ಯಾಕೆ ? ಪ

ಮೇದಿನಿ ಸುರರಿಗೆ ಮೋದ ಕೊಡೋದಕೆ
ಸ್ವಾದಿಯೊಳಗೆ ನಿಂತಿಹನದಕೇ ಅ.ಪ

ಋಜುಗುಣದೊಡೆಯನು ತ್ರಿಜಗಾಧೀಶನು
ಭುಜಗಾಂಚಿತನಾದ್ಯಾಕೆ ?
ಭಜಿಸುವ ಜನ ಭೂಭುಜ ತಾನೆನಿಸಿ
ಅಜನ ಪದ ತಾ ಸೇರೋದಕೆ ೧

ಸುರತತಿ ಸನ್ನುತ ಸರಸಿಜಭವ ಪದ -
ಕರಹನು ನರನ್ಯಾಕಾದಾ ?
ಧರೆಸುರರಿಗೆ ತನ್ನ ಕರುಹನು ತಿಳಿಸೀ
ಪರಿಪರಿ ಮಹಿಮೆಯ ತೋರಿಸಿದ ೨

ವೀತಭಯನು ತಾನೀತೆರ ಜಗದಿ
ಯಾತಕೆ ಯತಿಯಾದ ?
ದಾತ ಗುರುಜಗನ್ನಾಥ ವಿಠಲ ಗುಣ
ಖ್ಯಾತಿಯ ತಾಮಾಡಿದ ೩

## ೯೦

ಸೋದಾಪುರದಲಿ ನಿಂತ ಸುಯತಿವರನ್ಯಾರೇ ಪೇಳಮ್ಮಯ್ಯಾ ಪ

ಭೂಧರ ಹಯಮುಖ ಪಾದವ ಭಜಿಸುವ
ವಾದಿಗಜಕೆ ಮೃಗರಾಜ ಕಾಣಮ್ಮ ಅ.ಪ

ಅಂಚೆವಾಹನ ಪ್ರಪಂಚದಿ ಪೊಳೆವ ವಿ –
ರಿಂಚಿಗೆ ಸಮನೇನೆ ಪೇಳಮ್ಮಯ್ಯಾ
ಸಂಚಿತ ಕರ್ಮವ ಕುಂಚಿಸಿ ಭಕ್ತರ
ಚಂಚಲ ಬಿಡಿಸುವನ್ಯಾರೇ ಪೇಳಮ್ಮಯ್ಯಾ
ಮಿಂಚುರಾಶಿಗೆ ಸಮ ಪಂಚವೃಂದಾವನ
ಲಾಂಛಿತನಾಗಿಹನ್ಯಾರೆ ಪೇಳಮ್ಮಯ್ಯಾ
ಚಂಚಲಾಕ್ಷಿ ತಿಳಿ ಪಂಚರೂಪಾತ್ಮಕ
ಮುಂಚಿಗೆ ಪ್ರಾಣ ವಿರಿಂಚಿ ಕಾಣಮ್ಮಾ ೧

ಮಂದಹಾಸಮುಖಕುಂದಕಟ್ಮಲರದ
ದಿಂದ ಶೋಭಿಪನ್ಯಾರೇ ಪೇಳಮ್ಮಯ್ಯಾ
ವಂದಿಪ ಜನರಘ ವೃಂದ ಕಳೆದು ಆ
ನಂದವ ನೀಡುವನ್ಯಾರೇ ಪೇಳಮ್ಮಯ್ಯಾ
ಬೃಂದಾರಕ ಪ್ರತಿ ಸುಂದರ ಯತಿವರ
ರಿಂದ ಪೂಜಿತನ್ಯಾರೇ ಪೇಳಮ್ಮಯ್ಯಾ
ಇಂದು ಮುಖಿಯೆ ಈತ ಗಂಧವಾಹನನಾಗಿ
ಮಂದಜಾಸನ ಪದವೈದುವ ನಮ್ಮಾ ೨

ಖ್ಯಾತಮಹಿಮ ಮಾಯಿವ್ರಾತ ವಿ –
ಘಾತವ ಮಾಡಿಹನ್ಯಾರೇ ಪೇಳಮ್ಮಯ್ಯಾ
ಆತುರ ಜನರಿಗೆ ಮಾತಾ ಪಿತರಂತೆ
ನೀತಪಾಲಿಸುವನ್ಯಾರೇ ಪೇಳಮ್ಮಯ್ಯಾ

ದಾತ ಗುರುಜಗನ್ನಾಥವಿಠಲನ
ಪ್ರೀತಿಯ ಪಡೆದಿಹನ್ಯಾರೇ ಪೇಳಮ್ಮಯ್ಯಾ
ವೀತಭಯ ಪುರುಹೂತ ಪ್ರಮುಖ ನುತ
ಭೂತನಾಥನ ಪಿತ ಮಾತರಿಶ್ವನಮ್ಮಾ ೩

## ೯೧

ಕರುಣಾರ್ಣವ ಶ್ರೀ ಗುರುವರ
ಕರುಣಿಸೊ ನೀ ಎನ್ನ
ಕರುಣಾಗತ ರಕ್ಷಾಮಣಿ ತವ
ಚರಣಾಂಬುಜ ತೋರಿನ್ನ ಪ

ಆನತಜನತತಿಜ್ಞಾನದ ಎನ್ನ –
ಜ್ಞಾನವ ಕಳೆದಿನ್ನ
ಜ್ಞಾನ ಭಕುತಿ ಸುವಿರಕುತಿ(ಯ)ನಿತ್ತು
ಮಾನದಿ ಸಲಹೆನ್ನಾ ೧

ಕಾಮಿತ ಫಲಪ್ರದ ಕಾಮ್ಯಾರ್ಥವನೂ
ಕಾಮಿಪ ಜನಕಿನ್ನ
ಪ್ರೇಮದಿ ಅವರಭಿಕಾಮವ ಪೂರ್ತಿಸಿ
ಕಾಮಧೇನುತೆರ ತೋರುವಿ ಘನ್ನ ೨

ಶಿಷ್ಟೇಷ್ಟ ಪ್ರದನಿಷ್ಟಘ್ನನೆ ನೀ
ಕಷ್ಟವ ಪರಿಹರಿಸಿನ್ನಾ
ಎಷ್ಟೆಂಥೇಳಲಿ ಸೃಷ್ಟಿ ಯೊಳಗೆ ನಿನ್ನ
ಶ್ರೇಷ್ಠ ಮಹಿಮೆಗಳನ್ನಾ ೩

ಶಿಷ್ಟನೆ ನೀ ಪರಮೇಷ್ಟಿಯ ಸತ್ವದಾ –
ಧಿಷ್ಟತನೆಂದಿನ್ನಾ
ಪ್ರೇಷ್ಟನೆ ಎನ್ನಯಭೀಷ್ಟೆಯ ನಿತ್ತು
ಶ್ರೇಷ್ಠನ ಮಾಡಿನ್ನಾ ೪

ಪಾತಕವನಕುಲ ವಿತಿಹೋತ್ರ ಸುಖ
ದಾತನೆ ನೀ ಇನ್ನಾ
ಈತೆರ ಮಾಡದೆ ನೀತ ಗುರುಜಗ –
ನ್ನಾಥವಿಠಲ ಪ್ರಪನ್ನಾ ೫

## ೯೨

ನೀನೇ ಘನ್ನ ಪಾವನ್ನ ಗುರುವರ ಪ

ನೀನೇ ಘನ್ನ ಪಾವನ್ನ ಗುರುವರ
ನಾನು ಬೇಡಿದೆ ಸಾನುರಾಗದಿ
ದಾನಿ ಅದಕನುಮಾನ ಮಾಡದೆ
ನಾನಭೀಷ್ಟೆಯ ನೀನು ಕೊಡೋದಕೆ ಅ.ಪ

ನಿನ್ನ ನಂಬಿದೆ ನಾನು ಯತಿಕುಲಾಗ್ರಣಿ
ರನ್ನ ಪಾಲಿಸೊ ನೀನು
ಎನ್ನ ನುಡಿಗಳ ಮನ್ನಿಸೀ ಪೊರಿ
ಅನ್ಯನಲ್ಲವೊ ನಿನ್ನ ತನುಜನು
ಧನ್ಯನಾಗುವದನ್ನು ಸಲಿಸೋ
ಘನ್ನ ಮಹಿಮಾಪನ್ನ ಪಾಲಕ ೧

ಆರ್ತಜನಮಂದಾರಾ ಮೋಕ್ಷಾದಿ ಸತ್ಪುರು –
ಷಾರ್ಥ ಮಹದಾತಾರ
ತೀರ್ಥಪದಯುಗ ಪಾರ್ಥಸೂತಗೆ
ವಾರ್ತೆ ತಿಳಿಸಿ ಆರ್ತಸತಿಯಾ
ಅರ್ತಿ ಕಳೆದಿಹ ಕೀರ್ತಿ ಕೇಳಿ
ಪ್ರಾರ್ಥಿಪೆನೊ ಕೃತಾರ್ಥನೆನಿಸೋ ೨

ಮಾತಾ ಪಿತ ಗುರುದೂತಾ ಎನಗೆ ಭಾವಿ ವಿ –
ಧಾತಾ ಭ್ರಾತ ಸುಪೋತ

ಭೂತಪತಿ ಸುರಯೂಥ ವಂದ್ಯನೆ
ದಾತ ಗುರುಜಗನ್ನಾಥ ವಿಠಲನ
ದೂತ ಮನ್ಮನೋಜಾತ ಕಾಮಿತ
ದಾತಭೀಷ್ಟೆಯ ವ್ರಾತ ಸಲಿಸೋ ೩

೯೩

ಶರಣು ಪೊಕ್ಕೆ ಪೊರೆಯ ಕೇಳೊ ಪರಮ
ಕರುಣನಿಲಯ ನಿನ್ನ
ಚರಣ ಕಮಲಯುಗಕೆ ನಮಿಪೆ ಕರುಣಿಸೆನ್ನನು ಪ

ವಾದಿರಾಜ ಗುರುವೆ ನಿನ್ನ ಪಾದಯುಗಳದಲ್ಲಿ ನಿತ್ಯ
ಆದರಾತಿಶಯವನಿತ್ತು ಮೋದ ಬಿಡಿಸಯ್ಯಾ
ಸ್ವಾದಿನಿಲಯ ಮನದ ವಿಷಾದ ಕಳೆದು ಮೋಹಭವದ
ಖೇದ ಕೊಡುವ ಮಹತ್ತಾದ ಭಾಧೆ ಬಿಡಿಸಯ್ಯಾ ೧

ದೇವ ಸ್ತೋಮ ವಂದ್ಯ ನಿನ್ನ ಸೇವೆಗಾಗಿ ಬಂದ ಎನ್ನ
ಭಾವ ತಿಳಿದು ಶೀಘ್ರ ಫಲವ ಭಾವಿಸುವುದು ಕೋವಿದಾಢ್ಯ
ದೇವ ದೇವ ನಿನ್ನ ಬಿಟ್ಟು ಆವ ದಾತನಿಲ್ಲವೆಂದು
ಭಾವದಿಂದ ಭಜಿಪೆನಯ್ಯ ಭಾವಿಧಾತನೇ ೨

ಸೀತರಮಣಗುರು ಜಗನ್ನಾಥ ವಿಠಲ ಪಾದಪದುಮ
ದೂತನೆನಿಸೆ ಖ್ಯಾತನಾಗಿ ಮಾತೆ ಜನಕರಂತೆ ನಿತ್ಯ
ದೂತಜನರ ಪೊರೆವೊ ಗುರುವೆ ಪ್ರೀತನಾಗಲೊಲ್ಯಾ ಸ್ವಾಮಿ
ದೂತ ನಾನು ನಿನಗೆ ಎನ್ನ ಮಾತು ಲಾಲಿಸೋ ೩

೯೪

ಶರಣು ಪೊಕ್ಕೆನೋ ನಿನ್ನ ಕರುಣಾಸಾಗರಾ ಪ

ಶರಣು ಪೊಕ್ಕ ಚರಣ ಯುಗಕೆ ಕರುಣಿಸೆನ್ನ ಶರಣನೆಂದು
ಗುರವೇ ತ್ವರದಿ ಪೊರೆಯೊ ಸ್ವಾದಿ –
ಧ್ವರಿಯೆ ಕರವ ಪಿಡಿದು ನಿರುತ ಅ.ಪ

ಎನ್ನ ಬಿನ್ನಪ ಕೇಳೋ ಅಪನ್ನಪಾಲಕಾ
ಘನ್ನ ಮಹಿಮ ನಿನ್ನ ಬಿಟ್ಟರನ್ನ ಪಾಲಕರಿನ್ನು ಇಲ್ಲ
ಘನ್ನ ಜ್ಞಾನವಿತ್ತು ಮುನ್ನ ಮನ್ನಿಸೋ ಯತಿರನ್ನನೇ ೧

ತಾತನೆಂದೆನೋ ಎನ್ನ ಮಾತು ಲಾಲಿಸೋ
ದಾತ ನಿನ್ನ ಪೋತ ನಾನು ಮಾತು ಕೇಳನಾಥ ಪೇಳ್ವೆ
ಪ್ರೀತ ಮನದಿ ಭೀತಿ ಬಿಡಿಸಿ ದೂತನೆನಿಸೊ
ಖ್ಯಾತ ಮಹಿಮನೆ ೨

ಪರಮ ! ಕರುಣಿಸೋ ನಿನ್ನ – ಶಿರದಿ ನಮಿಸುವೆ
ಸರಸಪಾದಸರಸಿರುಹಕೆ ಎರಗಿ ಅರಿಕೆ ಮಾಡಿದ್ಯನ್ನ
ಪರಿಯ ತಿಳಿದು ಪೊರೆಯೋ ಸ್ವಾಮಿ
ಸರಸ ಗುರುಜಗನ್ನಾಥ ವಿಠಲ ದೂತ ೩

## ೯೫

ವಾದಿರಾಜಾ ಪಾಲಿಸು ಎನ್ನ ಪ

ವಾದಿರಾಜ ತವ ಪಾದಸರೋಜಾ
ಮೋದಪರಾಗವ ಸಾದರ ನೀಡಿ ಅ.ಪ

ಮೋದತೀರ್ಥಸುಮತೋದದಧಿಚಂದಿರ
ಪಾದವ ನಂಬಿದೆ ನೀ ದಯದಲಿ ೧

ಅರ್ತಜನರ ಮನದಾರ್ತಿಯ ಕಳೆದಿಹ
ವಾರ್ತದಿ ಬಂದವನಾರ್ತಿಯ ಬಿಡಿಸೋ ೨

ಎಲ್ಲರಂತೆ ನೀನಲ್ಲವೊ ಜಗದೊಳು
ಬಲ್ಲಿದನೆಂಬೊದು ಬಲ್ಲೆ ಬಲ್ಲೆನು ೩

ಕುರ್ತುಮಕರ್ತುಸಮರ್ಥನೆ ಎನ್ನನು
ಮರ್ತರೆ ಅನ್ಯ ಸಮರ್ಥರ ಕಾಣೆ ೪

ಕಾಮಧೇನು ಸಮ ಭೂಮಿಯ ತಳದಿ
ಕಾಮಿತನೀಡ್ವೆ ಸುರತರುವೇ ೫

ಮೋಕ್ಷದ ಕರುಣ ಕಟಾಕ್ಷದಿ ಎನ್ನಾ
ವೀಕ್ಷಿಸಿ ಮನದಾಪೇಕ್ಷವ ಸಲಿಸೋ ೬

ಯಾತಕೆ ಎನ್ನನು ಈತೆರ ಮಾಡಿದೇ
ನೀತ ಗುರುಜಗನ್ನಾಥವಿಠಲ ದೂತ ೭

## ಶ್ರೀ ರಾಘವೇಂದ್ರರು

### ೯೬

ಅರಿಯಾರೊ ಅಂದಿಗಂದಿಗನ್ಯ – ಈ
ಧರೆಯೊಳಿವರ ಮಹಿಮೆ ಘನ್ನ ಪ

ಮರುತಾವೇಶಯುತ – ಉರಗಾಂಶರನ್ನ ಅ.ಪ

ಪ್ರಲ್ಹಾದ ಲಕ್ಷ್ಮಣ ಬಾಹ್ಲೀಕ ವ್ಯಾಸನು
ಇಲ್ಲೀಗ ರಾಘವೇಂದ್ರ ಉಲ್ಲಾಸ ಬಡುವನು ೧

ಇನ್ನೂರ ನಾಲ್ವತ್ತು ಮುನ್ನೀಗ ಪೋದದ್ದು
ನನ್ನೂರ ಅರವತ್ತು ಇನ್ನು ಉಳಿದಿಹದು ೨

ಎಲ್ಲೀ ನೋಡಲಿವರಿಲ್ಲದ ಸ್ಥಳವಿಲ್ಲ
ಬಲ್ಲಾ ಭಕುತಗೆ – ಅಲ್ಲಲ್ಲೆ ತೋರುವದು ೩

ಖುಲ್ಲ ನರರಿಗೆ – ಎಲ್ಲೆಲ್ಲಿ ಇಲ್ಲವೊ
ಸಲ್ಲೋದು ನಿಶ್ಚಯ – ಸುಳ್ಳಲ್ಲ ಈ ಮಾತು ೪

ದುಷ್ಟ ಜನರಿಗೆ ಇಷ್ಟಾರ್ಥ ಕೊಡುವೊನೊಮ್ಮೆ
ಶಿಷ್ಟಾ ಜನರಿಗ ಭೀಷ್ಠಾವ ಕೊಡುವದು ೫

ಇವರ ಪೂಜಿಪ ಜನ – ದಿವಿಜರು ನಿಶ್ಚಯ
ಭುವನದೊಳಗೆ ಇನ್ನು ಇವರಿಗೆ ಸರಿಯುಂಟೆ ೬

ಇವರನ ಒಲಿಸಲು ಪವನಾನು ಒಲಿವನು
ದಿವಿಜಾರುತ್ತಮ ಮಾಧವ ತಾನೆ ಒಲಿವನು ೭

ಅಮಿತ ಮಹಿಮರೆಂದು ಪ್ರಮಿತರು ಪೇಳೋರು
ಸುಮತಿಗಳ ಮನಕೆ ಗಮಿಸಿ ತಿಳಿಸುವದು ೮

ದಾತಾ ಗುರು ಜಗನ್ನಾಥಾ ವಿಠಲ ಬಹು
ಪ್ರೀತಿಯಿಂದಲಿ ಇವರ ಖ್ಯಾತಿಯ ಮಾಡೊದು ೯

## ೯೭

**ರಾಗ : ಶಂಕರಾಭರಣ, ತಾಳ–ಏಕ**

ಆದಿಯುಗದಿ ಮಹ ಆದಿದೈತೇಯನೊಬ್ಬ
ಮೇದಿನಿಯೊಳ್ ಸ್ವರ್ಣಕಶ್ಯಪು ನಾಮದಿ
ಸಾಧಿಸಿ ಬಂದವಗೊಬ್ಬ ಸೋದರ ಸ್ವರ್ಣಾಂಬಕನೆನಿಸಿ
ಮೇದಿನಿ ಚೋರನಾಗಿ ಹತನಾದನು
ಆದಿಶೇಷನೆ ವಿಷ್ವಕ್ಸೇನ ತಾ–
ನಾದ ಪ್ರಹ್ಲಾದ ಪ್ರಾಣಾವೇಶದಿಂದ
ಸೋದರ ಜೀವಾಂಶಾಪಾನಾವಿಷ್ಟ ಸ–
ಲ್ಹಾದನಾಮಕ ಮಿತ್ರನಾದ ಕ
ಹ್ಲಾದ ವ್ಯಾನಾವೇಶದಿಂದ
ಮೋದದಿ ಸೋಮಾಂಶೋದಾನಾಯುತ ನು–
ಹ್ಲಾದ ನಾಮಕ ಸಂಭೂತನಾದ

ಆದಿ ಗಣಪ ಸಮಾನಾವೇಶದಿಂದ
ಆದರೈವರಾದ್ಯೈತ್ಯಗೆ ಪುತ್ರರು
ಮೇದಿನಿ ಸುರರುದ್ಧಾರಗೋಸುಗ
ಆದಿದೈವ ನಾರೇಯಣ ತಾ
ನಾದಿಕಾರಣ ವಿಶ್ವಕರ್ತಾ
ಮೋದಾನಂದ ಮೂರುತಿ ಸುಗುಣ
ಭೋಧಪೂರ್ಣ ಸರ್ವಜ್ಞ ಸ್ವಾತಂತ್ರ
ವೇದಪುರುಷಾದಿ ಜಡಾದಿ ಜಗಕೆ
ಆಧಾರ ಹರಿ ಎಂಬ ಜ್ಞಾನವ
ಭೋದಿಸಿ ಬೊಮ್ಮಮುಖರು ಹರಿ
ಪಾದಸೇವಕರೆನುತ ನಿತ್ಯ
ವಾದದಿ ವಾದಿಗಳ ಜಯಸಿದರವರ
ಪಾದಸೇವಿಸಿ ಕರುಣಾಪಡೆದು
ಆದಿ ಗುರು ಜಗನ್ನಾಥವಿಠಲನ್ನ
ಆದರದಲಿ ಭಜಿಪೆ ಪರಮ ಸುಖ

**ರಾಗ : ಕಲ್ಯಾಣಿ**

ಅಸುರರ ಜನ್ಮದಿ ಪುಟ್ಟಿದ ಇವರಿಗೆ
ಶ್ವಸನನ ಆವೇಶ ಸುರರಾವೇಶ ಬಲದಿ
ಅಸಮಜ್ಞಾನ ಭಕುತಿ ವಿರಾಗವು
ವಸುಧಿಯ ತಳದಿ ದಿನದಿನದಲ್ಲಿ
ಪಸರಿಪ ಸೂರ್ಯನ ಪ್ರಭೆಯಂದದಲಿ
ಮಿಸುಪದಕಿದೇ ಕಾರಣ ಉಂಟು
ಬಿಸಜಾಂಬಕ ಹರಿಪೇಳಿದ ಇವರಿಗೆ
ಅಸುರೇಶ ಹಿರಣ್ಯಕಶಿಪುವಿನಲ್ಲಿ
ಶಿಶುಭಾವದಿಂದ ಜನಿಸಲು ಪೋಗಿರಿ
ಪುಸಿಯಲ್ಲ ಮಚ್ಛಾಪ

ಅಸುರಭಾವ ಪ್ರಲ್ಹಾದಾದ್ಯ
ರಸಮಮಹಿಮರಾಗೀ ಜನಿಸಿರೆಂದು
ಉಸುರಿದ ವಾಕ್ಯವು ಪ್ರಮಾಣ ಸಿದ್ಧವೆನ್ನಿ
ವ್ಯಸನದಲ್ಯೆವರು ಹರಿಯನೆ ಮತ್ತೆ
ಬೆಸಗೊಂಡರೀಪರಿ ಪರಿಯಾ
ಅಸುರನ ಪತ್ನಿಯ ಬಸಿರೊಳು ಪುಟ್ಟುವುದು
ವಶವಲ್ಲವೋ ಸ್ವಾಮಿ
ಕುಸುಮನಾಭನೆ ನಿನ್ನ
ಅಸಮಲೋಕದ ಸುಖ ವಸುಧಿತಳಾದಲ್ಲಿ
ಎಸಗದು ಎಸಗದು ಎಂದಿನಕಾಲಕ್ಕೂ
ಮುಸುಕುವದಜ್ಞಾನ ದುಃಖದ ಭವದಲ್ಲಿ
ಕಸವಿಸಿಗೊಳುತಾ ಜ್ಞಾನವನೀಗಿ
ಬಿಸನಿಲಯನೆ ನಿನ್ನ ದರುಶನವಿಲ್ಲದೆ
ಅಸುನಿಲ್ಲುವ ಬಗೆ ಯಾವುದು ಪೇಳೋ
ಶಶಿಧರವಂದ್ಯ ಗುರುಜಗನ್ನಾಥ ವಿಠಲ ನಮ್ಮ
ವ್ಯಸನವನು ಕಳೆದು ಸುಖವನು ಸಲಿಸೋ

**ರಾಗ – ಕಾಂಭೋದಿ ತಾಳ – ತ್ರಿವಿಡಿ**

ಭಕುತವಾಕ್ಯವ ಲಾಲಿಸಿ ತಾನಾಗ
ಲಕುಮಿರಮಣನು ಈ ಪರಿ ನುಡಿದನು
ವಿಕಳ ಪೊಂದದೆ ನೀವು ತ್ವರಿತಾದಿ ಧರೆಯೊಳು
ಸಕಲರು ಜನಿಸಲು ಮುಸಕದಜ್ಞಾನ
ಲಕುಮಿ ಭೂಮಿಯ ಸಹಿತ ಇರುವೆನು ನಿಮ್ಮೊಳು
ವ್ಯಕುತನೆನಿಸಿ ನಿತ್ಯ ಪರಿಪರಿ ಮಹಿಮವ
ಪ್ರಕಟಮಾಡುವೆ ಮುಖ್ಯಪ್ರಾಣನಿಪ್ಪನು ಸತತ
ಕಕುಲಾತಿ ಯಾಕಿನ್ನು ನಡಿರೆಂದು ಹರಿಯೆಂದ
ಉಕುತ ವಾಕ್ಯದಲಿಂದ ದಿತಿಜನಲ್ಲಿ
ಸುಕೃತಿಗಳ್ಯೆವರು ಉದಯವ್ಯೆದಿದರಾಗ

ಮುಕುತಿದಾಯಕ ಗುರುಜಗನ್ನಾಥ ವಿಠಲನೆಂಬ
ಭಕುತಿ ಪೂರ್ವಕ ಜ್ಞಾನವೃದ್ಧಿಯೈದಿದರು

**ರಾಗ – ಆರಭಿ ತಾಳ – ಅಟ್ಟ**

ಪಿರಿಯ ಪ್ರಲ್ಹಾದನ್ನ – ಕರದು ತೊಡೆಯ ಮೇಲೆ
ಇರಿಸಿ ಪ್ರೇಮದಿ ನಿಮ್ಮ – ಗುರುವೇನು ಪೇಳ್ಯಾನೆ
ಮರಿಯಾದೆ ಎನಮುಂದೆ – ಅರಹು ಎನಲು ಬಾಲ
ಕಿರಿನಗೆ ಮುಖದಿಂದ – ಹರಿಯೆ ಸರ್ವೋತ್ತಮ
ಹರಬೊಮ್ಮ ಮುಖರೆಲ್ಲ – ಪರಿವಾರಭೂತರು
ಅರಿದಿಪ್ಪೆ ಎನ್ನಯ್ಯ ಸರಸಿಜಜಾಂಡಕ್ಕೆ
ಅರಸು ತಾನಾಗಿದ್ದು ಇರುವಾದಿ ಚೇತನ
ತರುವಾದಿ ಜಡಮಯ ಸರ್ವಸ್ಥಳದಲ್ಲಿ
ನಿರುತದಿ ವ್ಯಾಪಿಸಿ ಇರುತಿಹ ಹರಿ ಎಂದು
ಅರಿತ ಮಾನವನಿಗೆ ದೊರೆವೋನು ನಿಶ್ಚಯ
ಅರಿತು ಪೇಳಿದ ತನ್ನ ತರಳಾನ ನುಡಿಕೇಳಿ
ಭರದಿಂದ ಕಂಬವ ಕರದಿಂದ ಬಡಿಯಾಲು
ನರಮೃಗಾಕಾರದಿ ಹೊರಗೆ ಬಂದಾದೈತ್ಯನು
ದರವ ಬಗೆದು ಕರುಳಮಾಲೆಯತಾ
ಕೊರಳೊಳು ಧರಿಸಿದ ಚರಜನ ಪರಿಪಾಲ
ಬಿರುದು ಬೀರಿದ ನಮ್ಮ ಗುರುಜಗನ್ನಾಥವಿಠಲ
ಶರಣರ ಮರೆಯನೋ ಧರಿತಳದೊಳಗೆ

**ರಾಗ : ಇಚ್ಛಾ : ತಾಳ – ಆದಿ**

ಈ ತೆರ ಪ್ರಹ್ಲಾದ ಹರಿಪಾದವ ಭಜಿಸಿ
ಪ್ರೀತಿಯ ಪಡೆದು ಭೂಸುರಗಣಕೆ
ಭೂತಳದೊಳಗೆ ಯತಿಗಳ ಕುಲಕೆ
ನಾಥನು ವ್ಯಾಸಮುನಿ ಎನಿಸಿ ಮರಳಿ
ಖ್ಯಾತ ಶ್ರೀ ರಾಘವೇಂದ್ರನೆಂದೆನಿಸಿ
ಪ್ರೀತಿಯಿಂದಲಿ ಭಕ್ತರ ಪೊರೆಯಲು

ನೀತಿ ಭಾವದಲಿ ಯತಿಯಾಶ್ರಮ ಪೊಂದಿ
ಸೀತಾಪತಿರಾಮ ಯದುನಾಯಕ ಕೃಷ್ಣ
ಭೀತಿಹರ ನರಸಿಂಹ ವ್ಯಾಸರ ಭಜಿಸಿ
ದೂತರ ಮನೋರಥ ಪೂರ್ತಿಸಿ ಪೊರೆವನು
ದಾತಗುರುಜಗನ್ನಾಥ ವಿಠಲನ್ನ
ನೀತ ವಿಭೂತಿಯ ಪಡೆದು ನಿರ್ಭೀತನಾಗಿಹನು

## ಜತೆ

ದೂತಜನರ ಮಹಾಪಾತಕ ಹರನೆನ್ನಿ
ಪ್ರೀತಗುರುಜಗನ್ನಾಥವಿಠಲನೊಲಿವ

## ೯೮

ಆರಾಯರ ಪದ – ನೀರಜ ಯುಗ ಮನೋ –
ವಾರಿಜದಲಿ ನಾ ಭಜಿಸುವೆನು ಪ

ಸಾರಿದ ಜನರಘದೂರದಿ ಓಡಿಸಿ
ಧಾರುಣಿಯೊಳು ಸುರಸೌರಭಿ ಎನಿಸಿಹ ಅ.ಪ

ಅವರ ಪದಜಲ ಈ ಭುವನತ್ರಯ
ಪಾವನ ತರವೆಂದೆನಿಸುವದೋ
ಅವರ ಪದಯುಗ ಕೋವಿದಜನರು
ಭಾವದಿ ದಿನದಿನ ಸೇವಿಪರೋ
ಅವರ ಹೃದಯದಿ ನಾರಾಯಣ ಚ –
ಕ್ರಾವತಾರವ ಧರಿಸಿಹನೊ
ಶ್ರೀವರ ಹರಿ ಕರುಣಾವಲೋಕನದಿ
ದೇವಸ್ವಭಾವವ ನೈದಿಹರೋ ೧

ಆವ ಮಾನವನಿವರಚರಣ ಸೇವಕತೆರನೆಂದೆನಿಸುವನ್ನೋ
ಭಾವಿಪರವನೀತಳದೊಳು ಮತ್ತೆ

ಕೋವಿದ ಜನರೆಲ್ಲರು ಆವನ
ಧೀವರನಾಗುವ ಅವನೇ ಅವನೀ
ದೇವೋತ್ತುಮನೆಂದೆನಿಸುವನು
ಪಾವನಿ ಮುಖ ದೇವೋತ್ತುಮರೆಲ್ಲರು
ಈ ವಿಧ ಮಹಿಮೆಯ ತೀವ್ರದಿ ತೋರುವ ೨

ಅವರು ಅವನೀ ದೇವತೆಗಳಿಗೆ
ಜೀವನವಿತ್ತು ಪೊರೆದಿಹರೋ
ಪಾವಕಘಾಕಿದ ಹಾರವ ಮತ್ತೆ
ಭೂವರನಿಗೆ ತಂದಿತ್ತಿಹರೋ
ಮಾವಿನ ರಸದಲಿ ಬಿದ್ದಿಹ ಶಿಶುವಿಗೆ
ಜೀವನವಿತ್ತು ಕಾಯ್ದಿಹರೋ
ಶೈವನ ನಿಜಶೈವವ ಬಿಡಿಸೀ ತಮ್ಮ
ಸೇವೆಯನಿತ್ತು ಕಾಯ್ದಿಹರೋ ೩

ಸಲಿಲವ ತಂದಿರುತಿಹ ನರನಿಗೆ
ಸುಲಲಿತ ಮುಕ್ತಿಯನಿತ್ತಿಹರೋ
ಚಲುವ ತನಯನಾ ಪುಲಿನದಿ ಪಡೆದಿಹ
ಲಲನೆಯ ಚೈಲದಿ ಕಾದಿಹರೋ
ಸಲಿಲವು ಇಲ್ಲದೆ ಬಳಲಿದ ಜನಕೆ
ಸಲಿಲವನಿತ್ತು ಸಲಹಿದರೋ
ಇಳೆಯೊಳು ಯತಿಕುಲತಿಲಕರೆಂದೆನಿಸಿ
ಸಲಿದಂಥದು ತಾವು ಸಲಿಸಿಹರೋ ೪

ಅನುದಿನದಲಿ ತಮ್ಮ ಪದಕಮಲವನು
ಮನದಲಿ ಬಿಡದೆ ಭಜಿಸುವರಾ
ಜನರಿಗೆ ನಿಜಘನಸುಖವನು ಕೊಟ್ಟವ –
ರನುಸರಿಸೀ ಇರುತಿಹರಾ
ಮನೋ ವಾಕ್ಕಾಯದಿ ನಂಬಿದ ಜನಕೆ

ಜನುಮವನ್ನುನೀಡರು ಇವರ
ಘನಗುಣ ನಿಧಿ ಗುರುಜಗನ್ನಾಥ ವಿಠಲ –
ನಣುಗಾಗ್ರೇಸರರೆನಿಸಿಹರಾ ೫

೯೯

ಆವನ ಭಯ ತನಭಾವದಿ ಗುರುಪದ ಸೇವಕನಾದವಗೆ ಪ

ಕೋವಿದ ಕುಲ ಸಂಭಾವಿತ ಗುರುವರ
ಕಾವನೆನುತ ಮನೋಭಾವದಲಿರುವವಗೆ
ಧಾರುಣಿಪತಿ ತನ್ನ ಸೇರದೆ ಪರಿಪರಿ
ಗಾರುಮಾಡಿದರೇನೂ
ಕ್ರೂರತನದಲಧಿಕಾರಿ ಜನಂಗಳು
ದೂರ ನೋಡಲೇನು
ನಾರಿ ತನುಜ ಪರಿವಾರದ ಜನರೂ
ಮೋರೆಗಾಣದಿರಲೇನೂ
ಘೋರ ಭಯ ಪರಿಹಾರಕ ನಮ್ಮ
ಧೀರ ಗುರುಪದ ಸೇರಿದ ನರನಿಗೆ ೧

ಕಾಮಿತ ಫಲಪ್ರದ ಈ ಮಹಮಹಿಮನ
ನೇಮದಿ ಭಜಿಸುವಗೆ
ಆಮುಷ್ಮಿಕ ಸುಖ ಪ್ರೇಮದಿ ನೀಡುವ
ಕಾಮಧೇನು ನಂಬಿದಗೆ
ಧೀಮಂತರ ಮಹಸ್ತೋಮದಿ ನಮಿತನ
ನಾಮವ ಜಪಿಸುವಗೆ
ಈ ಮಹ ಸಾರ್ವಭೌಮನ ಪದಯುಗ
ತಾಮರಸವೆ ಹೃದ್ವ್ಯೋಮದಿ ನೆನೆವಗೆ ೨

ಭೂತಲ ಮಧ್ಯದಿ ಖ್ಯಾತಿಯ ಪಡೆದ್ಯತಿ
ನಾಥನ ಸ್ಮರಿಸುವಗೆ

ಭೂತ ಪ್ರೇತಭಯ ಘಾತಿಸಿ ನಿಜಸುಖ
ದಾತನ ಮೊರೆಪೊಕ್ಕವಗೆ
ಕಾತರ ಪಡುವ ಅನಾಥರ ಪೊರೆವನ
ದೂತನಾದ ನರಗೆ
ದಾತ ಗುರುಜಗನ್ನಾಥ ವಿಠಲನ
ಪ್ರೀತಿಯಪಡೆದ್ಯತಿನಾಥನ ಭಜಿಪಗೆ ೩

## ೧೦೦

ಇಂಥಾ ಗುರುಗಳ ಕಾಣೆನೋ ಈ ಜಗದೊಳು ನಾ ಪ

ಇಂಥಾ ಗುರುಗಳನೆಂದು ಕಾಣೆನಾ
ನಂತ ಚೇತನರಂತರ ಬಹಿರದಿ
ನಿಂತು ಕರ್ಮವವರಂತೆ ಮಾಳ್ಪಾ –
ನಂತ ಮಹಿಮಾನಂತನಾಂಶಜರಿಂಥಾ ಅ.ಪ

ತುಂಗಾತೀರದಿ ನಿವಾಸಾ ಮಂತ್ರಾಲಯಕೀಶ
ತುಂಗ ವಿಕ್ರಮ ಜಗದೀಶಾ ಶ್ರೀಹರಿ ದಾಸಾ
ಮಂಗಲ್ಮಾತಕ ವೃಂದಾವನ ದೇಶಾ ಸಾರಿದ ಪ್ರತೀಶಾ
ಮಂಗಲ ಮಹಿಮ ರಂಗನ ಕರುಣಾಪಾಂಗ ಪಡೆದ ಕೃ –
ಪಾಂಗ ಯತಿಕುಲೋತ್ತುಂಗ ಮಾಯಿ ಮಾ –
ತಂಗ ಸಂಘಕೆ ಸಿಂಗ ದುಷ್ಟ ಭು –
ಜಂಗ ಗಣ ವಿಹಂಗ ಸ್ವಮತೋ –
ತ್ತುಂಗ ವಾರಿಜ ಭೃಂಗ ಮನ್ಮನೋ –
ರಂಗ ಬಿಂಬನ ಇಂಗಿತಜ್ಞರ ಸಂಗ ನೀಡಿ
ಕಂಗಳಿಗೆ ತಾವು ಕಂಗೊಳಿಪರಿಂಥಾ ೧

ಮೇದಿನಿ ತಳದಲಿ ಜನಿಸೀ ಸುಖತೀರ್ಥರ ಭಜಿಸೀ
ಭೇಧಮತವನೆ ಸಾಧಿಸೀ ವಾದದಿ ಜೈಸಿ
ಮಾಧವನೆ ಸರ್ವೋತ್ತಮನೆನಿಸಿ ಸ್ವಮತವ ಸ್ಥಾಪಿಸಿ

ಭೋಧಿಸಿ ತತ್ವವ ಭೇಧಿಸಿ ಪರಮತ
ಛೇಧಿಸಿ ಕುಮತಿಯ ಶೋಧಿಸಿ ತತ್ವದ
ಹಾದಿಯ ಹಿಡಿಸಿ – ಮೋದಕೊಡುವ ಪಂಚ
ಭೇದವ ತಿಳಿಸೀ ಸಾದರ ತನ್ನಯ ಪಾದಸೇವೆಯ
ಮೋದವ ನೀಡುವ ಮೇದಿನೀ ದಿವಿಜಾರಾಧಿತ ಪದಯುಗ
ಶೋಧಿಸಿ ಜನಮನೋ ಖೇದಗೊಳಿಪ ಭ –
ವೋಧಧಿ ದಾಟಿಸಿ ಶ್ರೀದನ ತೆರದಲಿ
ಮೇದಿನಿಯಾಳುವರಿಂಥಾ ೨

ಧಿಟ್ಟ ಗುರು ಜಗನ್ನಾಥ ವಿಠಲದೂತಾ
ಸೃಷ್ಟಯೊಳಗತಿ ವಿಖ್ಯಾತಾನೆನಿಸಿದ ಯತಿನಾಥಾ
ಕುಷ್ಟಾದಿ ರೋಗದ ಘಾತಾ ಮಾಡುವೊದಾತಾ
ಇಷ್ಟಾರ್ಥವಾ ತಾ ಸೃಷ್ಟಿಗೆ ಬೀರುವ
ಶಿಷ್ಟಜನರನುತ್ಕೃಷ್ಟದಿ ಪಾಲಿಪ
ಎಷ್ಟು ಪೇಳುವುದೋ ಉತ್ಕೃಷ್ಟನ ಗುಣಗಳ
ಭ್ರಷ್ಟರರಿಯರೆಲೆ ಶಿಷ್ಟರು ಬಲ್ಲರು
ಇಷ್ಟೇ ಅಲ್ಲವೀತನ ವಿಶಿಷ್ಟ ಮಹಿಮೆಗ –
ಳೆಷ್ಟು ಪೇಳಲವಶಿಷ್ಟವೆನಿಪವೋ
ದೃಷ್ಟಿಹೀನರಿಗೆ ದೃಷ್ಟಿ ನೀಡುವ
ದೃಷ್ಟಿ ಮಾತ್ರದಿ ತುಷ್ಟಿಬಡಿಸುವೊರಿಂಥಾ ೩

## ೧೦೧

ಇಂದು ನೋಡಿದೆ ನಂದಕರ ಯೋ–
ಗೀಂದ್ರ ವಂದಿತ ಚರಣನಾ ಪ

ವಂದನೀಯ ಶುಭೋರು ಗುಣ ಗಣ
ಸಾಂದ್ರಗುರುರಾಘವೇಂದ್ರನಾ ಅ.ಪ

ವೇದತತಿ ಶತಮೋದಗಿತ್ತ(ನ) – ಆದಿ ಮತ್ಸ್ಯನ ತೆರದಲಿ
ವೇದವಾದವ ಶೋಧಮಾಡಿ ಮೇದಿನೀಸುರಗಿತ್ತನಾ ೧

ಕಮಠರೂಪದಲಮರ – ತತಿಗೆ
ಅಮೃತ ನೀಡಿದ – ತೆರದಲಿ
ಸ್ವಮತ ಸುಧೆಯನು ಪ್ರಮಿತಗಿತ್ತಿಹ
ಅಮಿತ ಸುಮಹಾಮಹಿಮನ ೨

ಧರಣಿಮಂಡಲ ಧುರುದಿ ದಾಡಿಲಿ
ಧರಿಸಿ ತಂದನ ತೆರದಲಿ
ಧರಣಿ – ಜನರಿಗೆ ಧರೆಯ ಮೊದಲಾದ
ಪರಮಭೀಷ್ಟೆಯನಿತ್ತು ಪೊರೆವನ ೩

ದುರುಳದಿತಿಜನ ತರಿದು ನಿಜಪದ –
ತರುಳಪಾಲನ ತೆರದಲಿ
ದುರಿತರಾಶಿಯ ತರಿದು ತನ್ನಯ ಶರಣಜನಪರಿಪಾಲನ ೪

ಬಲಿಯ ಯಜ್ಞದ ಸ್ಥಳದಿ ಭೂಮಿಯ ನಳೆದರೂಪನತೆರದಲಿ
ಖಳರ ವಂಚಕ ತನ್ನ ತಿಳಿವಗೆ ಸುಲಭದಿಂದಲಿ ಒಲಿವನ ೫

ದುಷ್ಟಕ್ಷಿತ್ರಿಯರಷ್ಟು ಕುಲವನು ಸುಟ್ಟು ಬಿಟ್ಟನತೆರದಲಿ
ಕೆಟ್ಟರೋಗವು ಶ್ರೇಷ್ಠಭೂತದ ಅಟ್ಟುಳಿಯನೆ ಕಳೆವನ ೬

ಜನಕನಾಜ್ಞದಿ ವನವ ಚರಿಸಿದ
ಇನಕುಲೇಶನ ತೆರದಲಿ
ಜನರಿಗೀಪ್ಸಿತ ತನಯ ಮೊದಲಾದ
ಮನದಪೇಕ್ಷೆಯ ನೀಡೊನ ೭

ಕನಲಿ ದ್ರೌಪದಿ ನೆನೆಸಲಾಕೆಯ
ಕ್ಷಣಕೆ ಬಂದನ ತೆರದಲಿ

ಮನದಿ ತನ್ನನು ನೆನೆವ ಜನರನು
ಜನುಮ ಜನುಮದಿ ಪೊರೆವನ ೮

ಮುದ್ದು ಸತಿಯರ ಬುದ್ಧಿ ಕೆಡಿಸಿ(ದ)
ಗೆದ್ದು – ಬಂದನ ತೆರದಲಿ
ಮದ್ದು ಮತಿಯನು ತಿದ್ದಿ ಭಕುತಗೆ
ಶುದ್ಧ ಜ್ಞಾನವ ನೀಡೊನ ೯

ಕಲಹ ಕಂಟಕ ಕಲಿಯವೈರಿ
ಕಲಿಕಿರೂಪನ ತೆರದಲಿ
ಹುಳುಕು ಮನವನು ಕಳೆದು ತನ್ನಲಿ
ಹೊಳೆವ ಮನವನು ಕೊಡುವನಾ ೧೦

ನೀತ ಗುರುಜಗನ್ನಾಥ ವಿಠಲ ಭೂತಳಕ್ಕಧಿನಾಥನು
ಆತನಂತ್ಯತಿನಾಥ ಜಗಕೆ ಪ್ರೀತಿಶುಭಫಲದಾತನ ೧೧

## ೧೦೨

repeated in 207 page.

ಇನ್ನೇನು ಭಯವಿಲ್ಲನಿನಗೆ
ಘನ್ನಗುರುವರ ಪಾದ ಭಜಿಸೊ ಮನದೊಳಗೆ ಪ

ಬನ್ನಗೊಳಿಸುವಾ ವ್ಯಾಧಿ
ಮುನ್ನೆ ಬಾರದೋ ಮಗುವೇ ಅ.ಪ

ಆವ ಜನ್ಮದ ಕರ್ಮ ಶೇಷದಲಿಂದ
ಈ ವಿಧದ ವ್ಯಾಧಿ ಸಂಭವಿಸಿತಲ್ಲಾ
ಕೋವಿದೋತ್ತಮರ ಪಾದ ಸೇವೆ ಸತ್ಕಾರದಿಂದಲೇ
ತಾವಕನು ನೀನೆಂದು ಗುರುರಾಯ ಪೊರೆವಾ ೧

ಏನು ಕರುಣವೊ ಗುರುವರಗೆ ನಿನ್ನಲಿ
ನೀನೇನು ಧನ್ಯನೋ ಈ ಲೋಕದಲ್ಲೀ

ದೀನಭಾವವನೋಡಿ ದೀನವತ್ಸಲಬಂದು
ತಾನೆ ಕರುಣದಿ ಪೊರೆದಮೇಲೇ ೨

ಅರಿಯದಿಹ ನರರಿಗಾಶ್ಚರ್ಯ ತೋರಲೋಸುಗದಿ
ಮರೆಯದಂತೆ ಮನಕೆ ಕುರುಹು ಮಾಡಿ
ಧರೆಯೊಳಗೀ ಗುರುವರಗೆ ಸರಿಯಿಲ್ಲ
ಗುರುಜಗನ್ನಾಥ ವಿಠಲ ತಾನೇ ಬಲ್ಲಾ ೩

## ೧೦೩

ಎಂತು ಬಣ್ಣಿಸಲಮ್ಮಯ್ಯಾ ಈ ಗುರುವರರ ಪ

ಎಂತು ಬಣ್ಣಿಪೆ ನಾ ನಂತನಾಂಶ ಜಗ –
ದಂತರದೊಳಗಾ – ನಂತ ಮಹಿಮರ ಅ.ಪ

ಸುರವರನಗರಸಮ – ವರಮಂತ್ರಸದನ ಜರಿದು
ಸ್ಥಿರವಾಗೀ ಪುರದಲ್ಲಿ ಮೆರೆಯುತಲಿಹರನ್ನ ೧

ಪೂರ್ವಯುಗದೊಳು ಸಾರ್ವಭೌಮನೆನಿಸಿ
ಪಾರ್ವರ ಪೊರೆವದಕ್ಕ ಪೂರ್ವ ಯತಿ ಎನಿಸಿಹರನ್ನ ೨

ದಿನ ದಿನದಲ್ಲಿ ಮಹ ಕನಕಾಭೀಷೇಕ ಮಾಳ್ಪ
ಧನಿಕರ ತೆಜಿಸಿ ನಿ – ರ್ಧನಿಕ ಗೊಲಿದಿಹರನ್ನ ೩

ಕ್ಷೀರಶೇಚನ ನಿತ್ಯ–ಸಾರ ಪಂಚಾಮೃತ ಬಿಟ್ಟು
ಕೀರುತಿ ಮಾಳ್ಪಜನರ ಸೇರಿ ಕೊಂಡಿಹರನ್ನ ೪

ದಾತರೆನಿಸಿ ಜಗದಿ – ಖ್ಯಾತರಾಗಿ ಗುರುಜಗ
ನಾಥ ವಿಠಲನೊಲಿಸಿ ದೂತಜನರ ಪೊರೆವೊರನ್ನ ೫

## ೧೦೪

ಎಂಥಾತ ಗುರುರಾಯನು ಜಗ – ದಂತರ್ನಿಯಾಮಕನು ಪ

ಸಂತೋಷದಿಂದಲಿ ಅಂತೇವಾಸಿಗಳ
ನಿಂತು ಪಾಲಿಸುತಿಹನು ಅ.ಪ

ಚಿಂತೆಯು ಯಾಕೆಂದನು ನಿ – ಶ್ಚಿಂತಿ ಮಾರ್ಗವಿದೆಂದನು
ಅಂತರದೊಳು ಶಿರಿಕಾಂತನ ಪದವೇಕಾಂತದಿ ಭಜಿಸೆಂದನು ೧

ಯಾತಕೆ ಶ್ರಮವೆಂದನು ನಿನಗೆ ಪಾತಕವಿಲ್ಲೆಂದನು
ದೂತಾನೆ ಎನ್ನೊಳಿಪ್ಪ ಮಾತರಿಶ್ವಗೆ
ಶಿರಿ ನಾಥನ ಭಜಿಸೆಂದನು ೨

ಪೋತಾನೆ ಕೇಳೆಂದನು ಎನ್ನ –

ಮಾತು ಮೀರದಿರೆಂದಾನು
ಪಾಥೋಜ ಗುರುಜಗನ್ನಾಥ ವಿಠಲ ನಿನ್ನ
ಮಾತು ಲಾಲಿಪನೆಂದನು ೩

## ೧೦೫

ಎಂಥಾದಯವಂತನೋ ಸಂತಾರನಾಥನೋ ಪ

ಕಂತೂ ಜನಕಾನ ಪ್ರಿಯ್ಯಾನೋ ಆ –
ನಂತಾ ನಂತಾ ಮಹಿಮನೋ ಅ.ಪ

ರಮ್ಯಾ ಗುಣಾ ಪೂರ್ಣನೋ – ಆ –
ಗಮ್ಯಾ ಸಚ್ಚರಿತಾನೋ
ನಮ್ಯಾನತರಾ ಪೊರೆವಾನೋ – ಈತ
ನಮ್ಮೆಲ್ಲಾರ ಸಲಹೋನೋ ೧

ಪ್ರಾಣಾವೇಶಾಯುತನೋ - ಜಗ -
ತ್ರಾಣಾ ತಾನಾಗಿಹನೋ
ಕ್ಷೋಣೀಯೋಳ್ವಿಖ್ಯಾತಾನೋ - ಎನ್ನ
ಪ್ರಾಣಾಗಳಿಗೆ ನಾಥನೋ ೨

ಕರುಣಾಶಾಲಿ ಎನಿಪಾನೋ - ತನ್ನ
ಚರಣಾ ಸೇವಾ ನೀಡುವನೋ
ಶರಣಾಬ್ಜ - ತರಣೀ ಸಮನೋ - ಅಂತಃ
ಕರಣಾದಲ್ಲಿರುವಾನೋ ೩

ಜನನೀ ಜನಕಾರೆನಿಪನೋ - ಸಕಲ
ಜನರೀಗೆ ಸಮ್ಮತನೋ
ಜನುಮಾ ಜನುಮದಲೀತನೋ - ನಿಶ್ಚಯ
ಎನಗೆ ತಾತನೋ ೪

ಭೂತಾಳದೊಳು ವಿಖ್ಯಾತನೋ ನಿಜ -
ದಾತಾ ಜನರಿಗೆ ಪ್ರೀತನೋ
ನೀತಾ ಗುರು ಜಗನ್ನಾಥಾ ವಿಠಲ -
ಪ್ರೀತಿಯ ತಾಪೊಂದಿಹನೋ ೫

## ೧೦೬

ಎದ್ದು ಬರುತಾರೆ ನೋಡೆ ತಾ -
ವೆದ್ದು ಬರುತಾರೆ ನೋಡೆ ಪ
ಮುದ್ದು ಬೃಂದಾವನ ಮಧ್ಯದೊಳಗಿದ್ದು
ತಿದ್ದಿ ಹಚ್ಚಿದ ನಾಮ - ಮುದ್ರೆಗಳೊಪ್ಪುತೀಗ ಅ.ಪ

ಗಳದೊಳು ಶ್ರೀ ತುಳಸಿ ನಳಿನಾಕ್ಷಿ ಮಾಲೆಯು
ಚಲುವ ಮುಖದೊಳು ಪೊಳೆವೊ ದಂತಗಳಿಂದ ೧

ಹೃದಯ ಸದನದಲ್ಲಿ ಪದುಮನಾಭನ ಭಜಿಸಿ
ಮುದಮನದಿಂದ ನಿತ್ಯ ಸದಮಲ ರೂಪತಾಳಿ ೨

ದಾತ ಗುರು ಜಗನ್ನಾಥವಿಠಲನ್ನ
ಪ್ರೀತಿಯ ಬಡಿಸುತ ದೂತರ ಪೊರೆಯುತ ೩

## ೧೦೭

ಏಳಯ್ಯ ಗುರುವೆ ಬೆಳಗಾಯಿತು
ಏಳಯ್ಯ ಗುರುರಾಯ ಏಳಯ್ಯ ಶುಭಕಾಯ
ಏಳು ಮಹರಾಯ ಏಳು ಎನ ಜೀಯಾ ಪ

ಶೀಲ ನಿನ್ನ ಭಕ್ತರು ಸಾಲು ಸಾಲಾಗಿ ನಿಂತಿಹರೋ ಅ.ಪ

ಉದಯಾದ್ರಿ ಶೃಂಗದಲಿ ಉದಿಸಿದನು ಭಾಸ್ಕರನು
ಸದಮಲ ಬುಧರೆಲ್ಲ ಮುದದಿಂದಲೀ ಎದ್ದು
ನದಿಯ ಸ್ನಾನವ ಮಾಡಿ ಉದಕ ಪುಷ್ಪಗಳಿಂದ
ಸದನಕ್ಕೆ ತಾವ್ ಬಂದು ಪದುಮನಾಭನ ಭಜಿಸಿ
ಪಾದೋದಕವನೇ ಧರಿಸಿ ಸದಯ ನಿನ್ನ ಪಾದ –
ಸಂದರುಶನಕೆ ಬಂದಿಹರೋ ೧

ನಿತ್ಯ ಭಜಿಸುವ ಜನರೆಲ್ಲ ಹೊತ್ತು ಮೀರಿತು ಎಂದು
ಚಿತ್ತ ಶುದ್ಧಿಯಲಿಂದ ಉತ್ತುಮಾರ್ಹಣೆಗಳಾ ತಮ್ಮ
ನೆತ್ತಿಯಿಂದಾ ಪೊತ್ತು ಜತ್ತಾಯುತಾಗಿ ನಿಂತಿಹರೋ
ಉತ್ತಮಾ ನಿನ ನಿದ್ರೆ ಹೊತ್ತು ಮೀರ್ಯಾಯಿತೊ
ತೊತ್ತಿಗಾರೆಲ್ಲರೂ ಪಾದ ಒತ್ತಿ ಬೋಧಿಸುತಿಹರೋ
ಚಿತ್ತಕ್ಕೆ ತಂದು ತ್ವರಿತದಿ ಏಳೋ ೨

ವಿಮತಾದ್ರಿ ಕುಲಿಶನೇ
ವಿಮಲ ಗಾತ್ರನೇ ಏಳೋ
ನಮಿಪ ಜನರಾರ್ಥ ದಾತ ದಿವಿಜದ್ರುಮನೆ
ಪ್ರೇಮ ವಾರಿಧಿ ಎಳೋ
ತಾಮರಸಾಂಬಕನೆ ಏಳೋ
ಆಮಯ ಧ್ವಂಸಕ ನೀನೇಳೋ
ಗೋಮತೀ ಕುಮುದ
ಸೋಮ ಸಾಂದ್ರನೆ ಏಳೋ – ಶ್ರೀ
ರಾಮ ಪಾದ ಭೃಂಗನೇ ಏಳೋ
ಯಾಮ ಮೀರಿತು ವಿಶ್ವನಿಯಾಮಕ ದೂತನೇ
ಸಾಮಗಾಯನ ಲೋಲ
ರಮಾ ವಲ್ಲಭಪ್ರೀಯ ಗುರುರಾಜವರ್ಯ ೩

ಮೌನಿ ಕುಲರನ್ನ ಮಾನ ನಿಧಿಯೇ
ಎನ್ನ ಬಿನ್ನಪವ ಕೇಳಯ್ಯ ಜೀಯಾ
ನಿನ್ನ ಭೋಧಿಪಕನ್ಯ ಜನರುಂಟೆ
ನಿನ್ನಿಂದ ನೀ ಚನ್ನಾಗಿ ಏಳೋ
ಮುನ್ನೆ ಮಹ ಕಾರ್ಯಂಗಳೂ
ಘನ್ನವಾಗಿರುತಿಹವು
ನಿನ್ಹೊರತು ಇನ್ನಾರು ಮಾಳ್ವರು
ಎನ್ನ ನುಡಿ ಈಗ
ಚನ್ನಾಗಿ ಮನದಿ ತಂದು
ಮನ್ನಿಸೀ ಪೊರೆಯೊ ಧ್ವರಿಯೇ ೪

ದಾತ ಈ ಜನ ಜಾತಿ ಸಾಕಲಾರದೆ –
ಸೋತು ಮಲಗಿದೆಯಾ
ಪಾತಕಾಂಬುಧಿ ಪೋತನೇ ಮಾತರಿಶ್ವನ ತಾತ
ಸೀತಾನಾಥನ ಪಾದ – ಪಾಥ ಭವ –

ಯುಗ್ಮದಲಿ ಸಂ -
ಜಾತವಾಗಿಹ ಸುಧಾ - ಪೀತ ಕಾರಣ ಮದಾ ಸಂ -
ಭೂತದಿಂದ ಮಲಗಿದೆಯಾ ಭೂತನಾಥನ ಗುರು ಜಗ -
ನ್ನಾಥ ವಿಠಲನ ದೂತ ನಾನೆಂಬ ಗರುವಿಂದ ಮಲಗಿದೆಯಾ ೫

## ೧೦೮

ಕಂಡೆ ಗುರುರಾಯನಾ ಸುರಮನೋಪ್ರಿಯನಾ ಪ

ತೊಂಡವತ್ಸಲ ಧರ - ದಂಡ ಕಮಂಡಲ
ಪಂಡಿತಾಗ್ರಣಿಗಳೊಳು - ದ್ದಂಡ ಮಹಿಮನ ಅ.ಪ

ಯತಿಕುಲಾಧಿಪನ ಸುಫಾಲವ ಶರಾ -
ಕ್ಷತಜಾಕ್ಷತಿ - ಮಣಿ ವಿಭವಾ
ವ್ರತತಿಜೋಪಮ ಯುಗನಯನ ಸಂಪಿಗಿನಾಸವಾ
ಗಂಡಯುಗಲ ವಿಕಾಸವಾ ಕಪೋಲ ಯುಗ ಭಾಸವಾ
ವದನಾಬ್ಜದೊಳೊಪ್ಪುವ ಕಿರಿಹಾಸವಾ ಹಾ-ಹಾ- ಹಾ ೧

ಕುಂದ - ಕುಟ್ಮಿಲ - ದಂತ ಪಂಕ್ತಿಯಾ ಅರುಣ
ಪೊಂದಿ ಪೊಳೆವೊದದರ ಛವಿಯಾ
ಸುಂದರ ದರೋಪಮ ಕಂಧರಾಂಕಿತ ಬಾಹುದಂಡವಾ
ಭುಜದಳೊಪ್ಪುವ ಮುದ್ರನಾಮವ
ಹೃದಯ - ಮಂಡಲ ಮುದ್ರನಾಮವ ಹಾ-ಹಾ-ಹಾ ೨

ಲಲಿತ ಶ್ರೀತುಳಸೀ ಜಲಜಾಕ್ಷಿಯಾ ಮಾಲಾ
ವಳಿಯ ವಕ್ಷದ ರೋಮಾವಳಿಯಾ
ಚಲುವ ಸುಳಿನಾಭೀ ಪುಳಿನ ಪೋಲುವೊ ನಿತಂಬವಾ
ಊರು ಕದಳಿ ಸ್ತಂಭವಾ
ಜಾನುಗಾಳು ಮುಕುರಬಿಂಬವ
ಮಾಡುವ ಚರ್ಯ ವಿಡಂಬವಾ ಹಾ - ಹಾ - ಹಾ ೩

ಕರಿರದೋಪಮ ಜಂಘೆಗಳಾ – ಗುಲ್ಫ
ವರರತ್ನ ಪಾದಾಂಗುಲಿ ಸಂಘಗಳ
ಸ್ಮರಿಸುವೊ ಜನರಿಗೆ ಸುರವರತರು ಪೋಲುವಾ
ತರಿವೋನು ದುರಿತ ಸಂಘವಾ
ನಿರುತ ನೀಡುವೋ ನಭೀಷ್ಟವಾ
ಭಕುತರೊಳಗೆ ತಾನಾಡುವಾ ಹಾ – ಹಾ – ಹಾ ೪

ನೀತ ಗುರುಜಗನ್ನಾಥಾ ವಿಠಲಪಾದ
ಪ್ರೀತಿಪೂರ್ವಕ ಭಜಿಸುತ
ಭೂತ ಪ್ರೇತದ ಭಾಧೆಗಳನೆಲ್ಲ ಕಳೆಯುವಾ
ಸಕಲ ಸೌಖ್ಯನೀಡುವಾ
ನಂಬಿದರೀತ ಪೊರೆಯುವಾ
ತೋರಿಪನಾಗಯ್ಯ ಮಹಿಮವಾ ಹಾ – ಹಾ – ಹಾ ೫

## ೧೦೯

ಕರವಪಿಡಿದು ಕಾಯೊ ಎನ್ನಾ
ಶ್ರೀ ಯತಿವರ ಗುರುರಾಘವೇಂದ್ರರನ್ನಾ ಪ

ಶರಣ–ಜನ–ಸುರ–ಪಾದಪನೆ ತವ
ಚರಣಯುಗಳತೆ ಮೊರೆಯ ಪೊಕ್ಕೆನೊ

ಕರುಣಿಸೆನ್ನನು ದೂರ ನೋಡದೆ
ಕರುಣಸಾಗರನೆ ನೀ ಅ.ಪ

ಆರು ಕಾಯ್ವರೊ ಪೇಳೋ ಎನ್ನ – ನೀ
ದೂರ ನೋಡುವದೇನು ಘನ್ನ
ಸಾರಿದವರಿಗಿಷ್ಟವನ್ನ – ಬೀರುವನೆಂಬೋ
ಬಿರುದು ಪೋಗಿಹದೋ ನಿನ್ನ
ಸಾರುವೆನೊ ತವ ಪಾದ – ಪದುಮ

ಸೌರಭ ಸ್ವೀಕರಿಪ ಜನರೊಳು
ಸೇರಿಸೆನ್ನನು ದೂರ ನೋಡದೆ
ಭೂರಿ ಕರುಣಾಕರನೆ ನೀ ೧

ದುರುಳು ಭವಾಂಬುಧಿ ಬಾಧಾ - ಎನ್ನ
ಮೀರಿ ಪೋಗಿಹ್ಯದು ಅಗಾಧಾ
ಘೋರ ಮದನ - ಶರ - ಬಂಧಾ - ದಿಂದ
ದೂರಾಗಿಹದೋ ನಿನ್ನ ಸಂಭಂಧ
ಪರಮ ಪಾಮರನಾದ ಎನ್ನಯ
ಮರುಳು ಮತಿಯನು ಬಿಡಿಸಿ ನಿನ್ನ -
ವರೊಡನೆ ಸೇರಿಸೊ ಪರಮ ಕರುಣಿಯೆ
ಚಾರತರನಾದ ಎನ್ನಾ ೨

ದುಷ್ಟಜನ್ನರ ಸಂಗದಿಂದ ನಿನ್ನಯ ಪಾದ
ಮುಟ್ಟ ಭಜಿಸದರಿಂದ
ಸೃಷ್ಟಿಯೊಳಗೆ ಮತಿಮಂದಾ ನಾಗೀ
ಪುಟ್ಟಿ ಬಂದೆನೊ ವೇಗದಿಂದಾ
ಕಷ್ಟಹರ ಗುರು ಜಗನ್ನಾಥ
ವಿಠಲನ ನಿಜ ಪಾದ ಪದುಮಕೆ
ಘಟ್ಟದೋಪಮ ನೆನಿಸಿ ಎನ್ನಾ
ಪುಟ್ಟಿ ಬರದಂತೆ ಮಾಡೊ ನೀ ೩

## ೧೧೦

ಕಾಯೋ - ಕಾಯೋ ಪ

ಕಾಯೋ ಕಾಯೋ ಗುರು - ರಾಯನೆ ತವ ಪದ
ತೋಯಜ ಯುಗ ಎನ್ನ ಕಾಯದಲಿಟ್ಟು ಅ.ಪ

ಕ್ಷುಲ್ಲಕ ಮನುಜರ – ಸೊಲ್ಲನೆ ನೀಗಿಸಿ
ಹಲ್ಲನೆ ಮುರಿಯುವ – ಬಲ್ಲಿದ ನೀನೇ ೧

ಕ್ಷುದ್ರ ಮನುಜರೋ – ಪದ್ರವ ಕಳೆದು
ಭದ್ರ ಭಕುತಿಯ – ಉದ್ರೇಕವಿತ್ತು ೨

ತ್ವತ್ಸೇವಾ ಜನರಲಿ – ಮತ್ಸರ ಮಾಡುವ
ಕುತ್ಸಿತ ಜನತತಿ – ವಿಚ್ಛೇದ ಮಾಡುವ ೩

ನಿನ್ನಯ ಜನರನ – ಮನ್ನಣೆ ಮಾಡದೆ
ಬನ್ನವ ಬಡಿಪರ – ಖಿನ್ನರ ಮಾಡೀ ೪

ದೂತರ ನಿಚಯಕೆ – ಈ ತೆರ ಚಿಂತೆಯು
ಯಾತಕೆ ಗುರು ಜಗನ್ನಾಥ ವಿಠಲ ದೂತಾ ೫

## ೧೧೧

ಕೃಪಿಗಳೊಳು ನಿನಗುಪಮೆ ಕಾಣೆನೊ ಸದಾ
ಕೃಪಣವತ್ಸಲ ರಾಘವೇಂದ್ರಾ
ಅಪರಿಮಿತ ಪಾಪೌಘ ಸಪದಿ ಪೋಗಾಡಿಸಿ ನೀ
ಕೃಪಣ ಕಾಮಿತ ದಾತಾ – ಮನ್ನಾಥಾ ಪ

ಮೋದತೀರ್ಥ ಮತೋದಧಿ ಸಂಜಾತಾ –
ಮೋದ ಸಂಯುಕ್ತ ಸುಧಾ
ಭೋಧಿಸಿ ಚಂದ್ರಿಕ ಭುಧಜನ ವೃಂದಕೆ
ಉದಧಿನಂದನನಂತಿರುವೇ – ನಂದಕರ ಗುರುವೆ ೧

ಕ್ಷಿತಿ ತಳದೊಳು ವರ ಯತಿಯ ರೂಪವ ಧರಿಸಿ
ಪತಿತ ಪಾವನನೆನಿಸೀ

ಸತತ ಸುಜನರ ಅತಿಹಿತದಲಿ ಪೊರೆವೊ
ಮತಿವಂತ ಮನದಲೀಗ ಭಜಿಪೆ ತ್ವಚ್ಚರಣ ೨

ಧಿಟ ಗುರು ಜಗನ್ನಾಥ ವಿಠಲಪಾದ ಹೃತ್ಸಂ -
ಪುಟದಿ ಭಜಿಸುತಲೀ
ಶಿಷ್ಟಜನರ ಮನದಿಷ್ಟಾರ್ಥ ಸಲಿಸುವ ವಂ -
ದ್ಯೇಷ್ಟದಾನದಿ ದಕ್ಷಾ - ಕಾಮಿತ ಕಲ್ಪವೃಕ್ಷಾ ೩

## ೧೧೨

ಕೊಡು ಬ್ಯಾಗಭೀಷ್ಟವ ತ್ವರದೀ - ನೀ ಸನ್ಮನದೀ ಪ

ಕೊಡುವೊದೆನುತ ನಿನ್ನಡಿಯನು ಭಜಿಸುವ
ಬಡವನ ಕರವನು ಪಿಡಿದೀ ಕಾಲದೀ ಅ.ಪ

ವಡೆಯ ನೀನೆನುತತಿ ಹರುಷದಲಿ ನಂಬಿದೆ ನಿನ್ನಾ
ಬಿಡದಲೆ ಪೊರೆ ಎನ್ನ ಕರುಣದಲಿ ಎನ್ನಯ ಕರವ
ಪಿಡಿದು ಭವಶ್ರಮ ಕಳಿಯುತಲಿ - ಬಹು ತೋಷದಲೀ
ನುಡಿದ ವಚನವ ಚಿತ್ತಕೆ ತಂದು
ಪೊಡವಿ ಪತಿ ಗುರುರಾಯನೆ ನೀ ೧

ನಮಿಪ ಜನರಿಗೆ ಸುರಧೇನು ಭಜಿಸುವ ಜನಕೆ
ಸುಮನಸೋತ್ತಮ ವರತರು ನೀನು - ಚಿಂತಿಪ ಜನಕೆ
ಅಮರೋತ್ತಮ ರತುನವು ನೀನು - ಎನುತಲಿ ನಾನು
ಅಮಿತ ಮಹಿಮವ ತೋರುತಲೀಗ
ಶ್ರಮವ ಕಳೆದು ಸುಖಸುರಿಸುತ ನೀ ೨

ಭೂತಳ ಮಧ್ಯದಲತಿ ಖ್ಯಾತ - ನೆನಿಸಿದ ನಾಥ
ಪಾತಕ ಕುಲವನ ನಿರ್ಧೂತಾ - ಮಾಡುತ ನಿಜಪದ
ದೂತಜನ ತತಿಮನೋರಥ - ಪೂರ್ತಿಪ ದಾತಾ

ವಾತ ಗುರುಜಗನ್ನಾಥ ವಿಠಲಗತಿ
ಪ್ರೀತಿಪಾತ್ರ ಸುಚರಿತ್ರ ಸುರಮಿತ್ರ ೩

## ೧೧೩

ಗುರೋ ರಾಘವೇಂದ್ರ ಭೋ
ಸಾರ್ವಭೌಮ ಸದಾ ಪಾಲಿಸೆನ್ನ ಪ

ಪರಾವರೋ ಹರಿಚರಾಗ್ರೇಸರಾ
ಪರೀಸರಾ ನಮಿಪೆ ನಿನ್ನಾ ಅ.ಪ

ಧರಾತಳದಿ ಧೇನು ವರಾನಂದದೀ
ಚರಾಜನರ ಕಾಮಾ
ಪರೀಪೂರ್ತಿಸಿ ದುರಾಳ ಸಂಗವ
ತ್ವರಾ ಕಳಿವೊ ಭೀಮಾ ೧

ಭಯಾಹರನೆ ಸದ್ದಯಾಕರನೆ ಆ –
ಮಯಾದೂರ ನಿನ್ನ
ಜಯಾ ಪಾಲಿಸೋ ಧಿಯಾ ಬೇಡುವೆನು
ನಯಾ ಮತೀತ್ಯನ್ನಾ ೨

ನೀತಾ ಗುರು ಜಗನ್ನಾಥಾ ವಿಠಲ ಪಾದ
ಪಾಥೋಜಯುಗವನ್ನಾ
ನೀತಾ – ಸುಖಮಯ – ವ್ರಾತ ಪಾಲಿಸೊ ನಿಜ –
ದೂತಾ ಜನಾರನ್ನಾ ೩

## ೧೧೪

ಗುರುರಾಜಾ – ಗುರುರಾಜಾ ಪ

ಧರಣಿಸುರರ – ಸುರಭೂಜಾ ಅ.ಪ

ಜ್ಞಾನಿಗಳರಸನೆ – ಧ್ಯಾನಿಪಜನರಿಗೆ
ಜ್ಞಾನವು ಪಾಲಿಸೊ – ಜ್ಞಾನಿಜನನಾಥ ೧

ಜ್ಞಾನಿಲ್ಲದೆ ಭವ – ಕಾನನ ಚರಿಸುವೆ
ಮಾನಸದಲಿ ತವ – ಧ್ಯಾನವ ಸಲಿಸೈ ೨

ಅನ್ಯರ ಭಜಿಸದೆ – ನಿನ್ನನೆ ನಿತ್ಯದಿ

ಮನ್ನದಿ ಭಜಿಸುವ ಉನ್ನತ ಮತಿ ನೀಡೈ ೩

ನೀಚರ ಮನಿಯಲಿ – ಯಾಚಿಪಗೋಸುಗ
ಯೋಚಿಪ ಮನವನು ಮೋಚನೆ ಮಾಡೈ ೪

ಯಾತಕೆ ಭವದಲಿ – ಈತೆರ ಬಳಲಿಪಿ
ದಾತನೆ ಗುರುಜಗ – ನ್ನಾಥ ವಿಠಲದೂತಾ ೫

೧೧೫

ಗುರುರಾಜಾ ಗುರು ಸಾರ್ವಭೌಮ ಪ

ಗುರುರಾಜಾ ಗುರಸಾರ್ವಭೌಮ ನಿನ್ನಯ ಪಾದ
ಸರಸಿಜಯುಗಕಭಿ ನಮಿಸುವೇ ಅ.ಪ

ಕರುಣ ಸಾಗರನೆಂದು ಚರಣವ ನಂಬಿದೆ
ಶರಣನ ಪಾಲಿಸು ಕರುಣಿಯೇ ೧

ಅನ್ಯರ ಭಜಿಸದೆ ನಿನ್ನನ್ನೆ ಭಜಿಸುವೆ
ಎನ್ನ ಮರೆವೊದಿದು ನ್ಯಾಯವೇ ೨

ಪರಮ ಪುರುಷನೆ ನಿನ್ನನು ಚರನೆನಿಸಿ ಧರೆಯೋಳು
ನರರನ್ನ ಬೇಡೊದು ಘನತೆಯೆ ೩

ಸುರನು ಮನೆಯಲ್ಲಿ ಸ್ಥಿರವಾಗಿ ಇರಲಿನ್ನು
ತಿರಕ ತಕ್ರಕೆ ಬಾಯಿ ತೆರೆವೋರೇ ೪

ಬೇಡಿದ ಮನೋರಥ ನೀಡುವ - ನೀನಿರೆ
ಬೇಡೆನೆ ನರರನ್ನ ನೀಡೆಂದೂ ೫

ಸಂತತ ಎನ ಕಾರ್ಯ ವಂತರಿಲ್ಲದೆ ನೀ -
ನಿಂತು ಮಾಡುವದು ಪುಶಿಯಲ್ಲ ೬

ಕಾಲಕ್ಕೆ ಸುಖದುಃಖ - ಮೇಲಾಗಿ ಬರುತಿರೆ
ಪೇಳಿ ಎನ್ನನು ನೀ ಪಾಲಿಸುವಿ ೭

ನಿನ್ನ ಸೇವಿಪರಿಗೆ ಇನ್ನುಂಟೆ ಭಯ ಶೋಕ
ಉನ್ನತ ಸುಖದೊಳಗಿರುವರೋ ೮

ನಿನ್ನ ಸೇವಿಸಿ ಭವ - ಬನ್ನ ಬಡುವದಿದು
ಎನ್ನಪರಾಧವದೇನಯ್ಯಾ ೯

ಕುಚ್ಛಿತ ಜನರನ್ನ - ತುಚ್ಛ ಮಾಡದಲವರ
ಇಚ್ಛೆಕಾರ್ಯವ ಮಾಡಿ ಸಲಿಸುವಿ ೧೦

ಜನನಿ ಪುತ್ರಗೆ ವಿಷ - ವಿನಯದಿ ನೀಡಲು
ಜನಕ ತನಯನ ತಾ ಮಾರಲು ೧೧

ವಸುಧೀಶ ವೃತ್ತಿಯ - ಕಸಕೊಂಡ ವಾರ್ತೆಯ
ವ್ಯಸನದಿ ಆರಿಗೆ ಉಸರೋದೋ ೧೨

ಇದರಂತೆ ನೀ ಮಾಡು - ವದು ಏನು ನ್ಯಾಯವೊ
ಪದುಮನಾಭನ ಪ್ರಿಯ ಗುರುರಾಯ ೧೩

ಮೂಕ ಬಧಿರ ಕುರುಡಾ – ನೇಕ ಜನಕೆ ಕಾರ್ಯವಿ –
ವೇಕ ಮಾಡಿ ನೀ ಸಲಹಿದಿ ೧೪

ಬಂದು ಬೇಡಿದ – ಮಹ – ವಂಧ್ಯಜನರಿಗೆ ಸು –
ಕಂದರ ನೀನಿತ್ತು ಸಲಹುವೀ ೧೫

ಭೂತಾದಿ ಬಾಧವ – ನೀತರಿದು ಸುಖಗಳ
ವ್ರಾತವ ಸಲಿಸೀ ಪಾಲಿಸುವಿ ೧೬

ಹಿಂದಿನ ಮಹಿಮ – ದಿಂದೇನು ಎನಗಯ್ಯ
ಇಂದು ಮಹಾ ಮಹಿಮೆ – ತೋರಿಸೋ ೧೭

ನಾಥನು ನೀನಲ್ಲೆ ದೂತನು ನಾನಲ್ಲೆ
ಯಾತಕೆ ಈ ತೆರ ಮಾಡಿದೀ ೧೮

ಎಲ್ಲೆಲ್ಲಿ ನಾ ಪೋದ – ರಲ್ಲಲ್ಲೆ ನೀ ಬಂದು
ಎಲ್ಲ ಕಾರ್ಯಗಳನ್ನು ಮಾಡಿದೀ ೧೯

ಇತರರಿಗಸಾಧ್ಯ ಅತಿಶಯ ಚರ್ಯವ
ಯತನಿಲ್ಲದಲೆ ನೀ ಮಾಡಿದಿ ೨೦

ಪೇಳಲೆನ್ನೋಶವಲ್ಲ ಭಾಳ – ನಿನ್ನಯ ಚರ್ಯ
ಕೇಳುಮಾನವ ನಾ ಬಲ್ಲೇನೆ ೨೧

ಜ್ಞಾನಿಗಳರಸನೆ ಮೌನಿ ಶಿರೋಮಣಿ
ಧ್ಯಾನವ ಸಂತತ ನೀಡಯ್ಯಾ ೨೨

ಸಂತತ ಎನ ಮನೊ – ಅಂತರದಲಿ ನೀ
ನಿಂತು ಪಾಲಿಸೊ ಎನ್ನ ಮಹರಾಯಾ ೨೩

ಎಂತೆಂಥ ಭಯ - ಬರೆ - ನಿಂತು ತಳೆದ್ಯೊ ದಯ -
ವಂತ ನಿನಗೆಣೆಗಾಣೆನಯ್ಯಾ ೨೪

ನಿನ್ನಲ್ಲಿ ಹರಿ ದಯ - ಉನ್ನತ ಇರಲಿನ್ನು
ಎನ್ನಲ್ಲಿ ನಿನ ದಯ ಇರಲಯ್ಯ ೨೫

ದಾತಗುರು ಜಗನ್ನಾಥ ವಿಠಲ ನಿನ್ನ
ಮಾತು ಲಾಲಿಸಿದಂತೆ ಪೊರೆ ಎನ್ನಾ ೨೬

## ೧೧೬

ಗುರುರಾಜ ಗುರುಸಾರ್ವಭೌಮ ಪ

ಗುರುರಾಜ ತವ ಪಾದ
ಸರಸಿಜಯುಗಲಕ್ಕೆ
ಮೊರೆಪೊಕ್ಕ ಜನರನ್ನ
ಪೊರೆ ಎಂದೇ ಅ.ಪ

ಶರಣ ಪಾಲಕನೆಂಬೊ - ಬಿರುದು ಬೀರುತಲಿದೆ
ಶರಣರ ಮರೆವೊದು ಥರವೇನೋ ೧

ಸಾರಿದಜನರಘ ದೂರಮಾಡುವೆನೆಂಬೊ
ಧೀರರ ವಚನವು ಸಾರುತಿದೆ ೨

ದೂರದೇಶದಿ ಜನ - ಸಾರಿ ಬಂದರೆ ವಿ -
ಚಾರಿಸಿ ಹರಕೆ ಪೊರೈಸುವೀ ೩

ಕುಷ್ಟಾದಿ ಮಹರೋಗ ನಷ್ಟಮಾಡುತಲ -
ಭಿಷ್ಟೇಯ ಪೂರ್ತಿಪ ಮಹ ಶ್ರೇಷ್ಠನೆ ೪

ಆದಿವ್ಯಾಧಿ ಉ-ಪಾಧಿ ಸಂಘಗಳನ್ನು
ಛೇದಿಸಿ ಜನರಿಗಾ ಮೋದ ಸಲಿಸುವಿ ೫

ಸತಿಜನರಿಗೆ ಅತಿ ಹಿತದಿಂದ ಸುತರನ್ನ
ಸತತ ನೀಡುವಿ ಯತಿ ಕುಲನಾಥ ೬

ಮತಿ ಹೀನ ಅತಿ ಮೂರ್ಖ ತತಿನಿನ್ನ ಭಜಿಸಲು
ವಿತತ ಭಕುತಿ ಜ್ಞಾನ ನೀಡುವೀ ೭

ಮೂಕ – ಬಧಿರ – ಪಂಗು – ಏಕೋಭಾವದಿ ಸೇವೆ
ಏಕಮನದಿ ಮಾಡೆ ರಕ್ಷೀಪಿ ೮

ಅವರ ಮನೋ ಬಯಕೆ ಹವಣಿಸಿ – ನೀಡುತ
ಅವನಿಯೊಳಗೆ ನೀ ಮೆರೆಯುವೀ ೯

ಅಂಧಜನಕೆ ಚಕ್ಷು – ವಂಧ್ಯಜನಕೆ ಸುತರು
ಬಂದ ಬಂದವರರ್ಥ ಪೂರೈಸುವೀ ೧೦

ಪರಮಂತ್ರ ಪರಯಂತ್ರ ಪರಕೃತ್ಯಪರಮಾಹಿ
ಪರಿಪರಿ ವ್ಯಥೆಗಳ ಹರಿಸುವೀ ೧೧

ದುರುಳಜನರ ಬಾಧೆ ಮೊರಳುಮಾಯದ ಮೊದ್ದು
ಕಿರಳುಪದ್ರಗಳೆಲ್ಲ ಕಳೆಯುವೀ ೧೨

ಕಾಮಿತ ಫಲಗಳ – ಕಾಮಿಪ ಜನರಿಗೆ
ಪ್ರೇಮದಿ ನೀಡುವೊ ಧ್ವರಿ ನೀನೇ ೧೩

ಅನ್ನ ವಸನ ಧನ – ಧಾನ್ಯ ಹೀನರಗಿನ್ನು
ಮನ್ನಿಸಿ ನೀನಿತ್ತು ಸಲಹುವೀ ೧೪

ಅಧಿಕಾರ ಕಳಕೊಂಡು
ಬದಕಲಾರದ ಜನ
ವದಗಿ ನಿನ್ನನು ಭಜಿಸೆ ಕರುಣಿಪೀ ೧೫

ಆವ ಮಾನವ ನಿನ್ನ
ಸೇವೆ ಮಾಡುವನವ
ಕೋವಿದನಾಗುವ ನಿಶ್ಚಯಾ ೧೬

ಇನಿತೆ ಮೊದಲಾದ
ಘನತರ ಮಹಿಮವು
ಜನರಿಗೆ ಶಕ್ಯವೆ ಗುರುರಾಯಾ ೧೭

ಸುರತರು ಸುರಧೇನು
ವರಚಿಂತಾಮಣಿ ನೀನೆ
ಶರಣವತ್ಸಲ ಬಹು ಕರುಣೀಯೇ ೧೮

ದಿನ ದಿನ ಮಹಿಮವು
ಘನ ಘನ ತೋರೋದು
ಬಿನಗು ಮಾನವರಿಗೆ ತಿಳಿಯಾದೋ ೧೯

ಕರುಣಾನಿಧಿಯೆ ನೀನು
ಶರಣ ಮಂದಾರನೆ
ಶರಣ ವತ್ಸಲ ನಿನಗೆ ಶರಣೆಂಬೆ ೨೦

ವಸುಧಿತಳದಿ ನೀನೆ
ವಶನಾಗೆ ಜನರಿಗೆ
ವ್ಯಸನಗಳುಂಟೇನೊ ಪೇಳಯ್ಯಾ ೨೧

ದುರಿತ ದುಷ್ಕೃತವೆಲ್ಲ
ದೂರದಲೋಡೋವು
ಕರಿಯು ಸಿಂಹನ ಕಂಡತೆರನಂತೆ ೨೨

ನಿನ್ನ ನಾಮದ ಸ್ಮರಣೆ
ಘನ್ನ ರೋಗಗಳನ್ನು
ಚೆನ್ನಾಗಿ ನಾಶನ ಮಾಳ್ಪೋದೋ ೨೩

ರಾಘವೇಂದ್ರ ಗುರು
ಯೋಗಿಕುಲಾಗ್ರಣಿ
ವೇಗಾದಿ ಪೊರೆದೆನ್ನ ಪಾಲಿಪೆ ೨೪

ಜನನಿ ಜನಕರು ತಮ್ಮ
ತನಯರ ಪೊರೆದಂತೆ
ದಿನದಿನ ನೀನೇವೆ ಸಲಹೂವಿ ೨೫

ಅನಿಮಿತ್ತ ಬಾಂಧವ
ಅನುಗಾಲ ನೀನಿರೆ
ಜನರು ಮಾಡುವ ಬಾಧೆ ಎನಗೇನೋ ೨೬

ಮನಸಿನೊಳಗೆ ನಿತ್ಯ
ನೆನೆಯುತ ತವ ಪಾದ
ವನಜ ಯುಗಳ ಮೊರೆ ಪೊಂದಿದೆ ೨೭

ನಿನ್ನ ಮಹಿಮ ಶ್ರವಣ
ನಿನ್ನ ಗುಣಕೀರ್ತನ
ನಿನ್ನ ಮೂರ್ತಿಧ್ಯಾನ ನೀಡೈಯ್ಯಾ ೨೮

ನಿನ್ನ ಉಪಾಸನ
ನಿನ್ನ ದಾಸತ್ವವ
ಚನ್ನಾಗಿ ಎನಗಿತ್ತು ಸಲಹೈಯ್ಯಾ ೨೯

ನಿನ್ನನುಳಿದು ಈಗ
ಮನ್ನಿಸಿ ಪೊರೆವಂಥ
ಘನ್ನ ಮಹಿಮರನ್ನ ಕಾಣೆನೋ ೩೦

ದಾತ ಗುರು ಜಗ
ನ್ನಾಥ ವಿಠಲಗತಿ
ಪ್ರೀತಿ ಪಾತ್ರನು ನೀನೆ ನಿಜವಯ್ಯೊ ೩೧

## ೧೧೭

ಗುರುರಾಯ – ಗುರುರಾಯ ಪ

ನಿರುತದಿ ನಿನ್ನನು ಸ್ಮರಿಸುವೆ – ಶುಭಕಾಯಾ ಅ.ಪ

ಕುಧರರದನಜ – ನದಿಯ ತೀರದಿ ನಿಜ
ಸದನನೆ ಹರಿಪದ – ಮಧುಕರ ಸೈ ಸೈ ೧

ಮಾಗಧರಿಪು ಮತ ಸಾಗರ ಝಷಸಮಾ –
ಮೋಘ ಮಹಿಮ ಎನ್ನ – ಬ್ಯಾಗನೆ ಪೊರಿಯ್ಯೆ ೨

ಕಾಮಿತ ಫಲಪ್ರದ – ಪ್ರೇಮದಿ ನಿನ್ನಯ
ನಾಮವ ನೆನಿವಂತೆ – ನೇಮವ ಸಲಿಸೈ ೩

ಆನತ ಸುಜನ ಸ –ನ್ಮಾನದ ಎನ್ನನು
ಮಾನದಿ ಪಾಲಿಸೊ – ಮಾನಿಜನಪ್ರಿಯ ೪

ದಾತಗುರು ಜಗನ್ನಾಥವಿಠಲ ಸಂ –
ಪ್ರೀತಿ ಪಾತ್ರ ನಿಜ – ದೂತನ ಪಾಲಿಸೊ ೫

## ೧೧೮

ಗುರುರಾಯ ನೀನೆ ಧ್ವರೀ ! ಧ್ವರೀ ! ಪ

ಪರಮ ಭಾಗವತರ ನೀ ಮರೆಯದೆ ಪೊರೆವಂಥ ಅ.ಪ

ಪರಮ ಭಕ್ತರು ನಿನ್ನ ಕರೆಯಲಾಕ್ಷಣ ಬಂದು
ಪರಿಪರಿ ಸುಖಗಳ ಮರೆಯದೆ ಕೊಡುವಂಥ ೧

ಶರಣ ಜನರಪ – ಮರಣ ಕಳೆದು ಸ್ಥೂಲ
ಹರಣರಕ್ಷಿಸಿ ಸುಖ – ಅರಣದಲ್ಲಿಡುವಂಥ ೨

ಅನ್ಯರಿಗಳವಡದ – ಘನ್ನ ಮಹಿಮನೆ ನಿನ್ನ
ಮನ್ನದಿ ಭಜಿಪ ಜನರ – ಚನ್ನವಾಗಿ ಪೊರೆವಂಥ ೩

ರಾಜ ಚೋರ ವ್ಯಾಘ್ರ – ರಾಜ ವೃಶ್ಚಿಕ ಸರ್ಪ
ರಾಜಿ ನಕ್ರದ ಭಯ – ಮಾಜಿಸಿ ಪೊರೆವೊನಿಂಥಾ ೪

ಭೂತಳದೊಳಗತಿ – ಖ್ಯಾತನಾಗಿ ಸದಾ
ದಾತ ಗುರು ಜಗನ್ನಾಥ ವಿಠಲ ನೊಲಿಸಿದಂಥ ೫

## ೧೧೯

ತುತಿಸಲೆನ್ನೊಶವೆ ನಿನ್ನ ಶ್ರೀ ಗುರುರನ್ನ ಪ

ತುತಿಸಲೆನ್ನೊಶವೆ ನಿ –ನ್ನತುಳ ಮಹಿಮ ಮಹಾ
ಮತಿವಂತ ಜನರು ಸು – ಮತಿಗೆ ಸಿಲ್ಕದ ನಿನ್ನ ಅ.ಪ

ಸ್ಮರಿಪ ಜನರ ಸುರ ತರು ಪಾಪಕಾಂತಾರ
ನರ ಸಮ ಸಜ್ಜನ । ಶರಜನಿಚಯ ದಿನ
ಕರಪೋಲುವ ಪಾದ । ಸರಸಿಜ ಭಜಿಸುವ
ಪರಮ ಭಕ್ತರ ಕುಮುದ । ವರ ನಿಚಯಕೆ ಸುಧಾ –
ಕರನಂತೆ ಧರೆಯೊಳು ಧುರದಿ ಮೆರೆವೊ ನಿನ್ನ
ಪರಮ ಕರುಣಿಯು ಎಂದು ನಿನ್ನಯ ಪಾದ
ಮೊರೆಯ ಪೊಕ್ಕೇನೊ ನಾನಿಂದು ನೀನೆ ಎನ್ನ
ಮೊರೆಯ ಲಾಲಿಸು ಎಂದು ಬಿನ್ನೈಸಿದೆ
ಪರಮಕೃಪಾಕರ ಪೊರೆಯೊ ಅನಾಥ ಬಂಧೂ ೧

ದಯಕರ ನಿಜ – ಭಕ್ತಾ । ಮಯ ಹರ ಸುಖಸಾರಾ
ಶ್ರಯವಾಗಿ ಸಂತತ । ನಯದಿಂದ ನಿಜಜನ
ಭಯಕರ ಭವಹರ । ಜಯ ಜಯ ಜಯದಾತ
ಜಯ ವಿಜಯಾತ್ಮಜ । ಜಯಕುಲ ದಿಗ್ವಿಜಯ
ಜಯ ಕಾಲದಲಿ ನಿಜ । ಹಯಗ್ರೀವಮೂರ್ತಿಯ
ದಯದಿಳೆಯೊಳು ಜನಿಸೀ । ಜನ್ಮದಿ ಮೂರ್ತಿ
ತ್ರಯ ಪಾದವನೆ ಭಜಿಸಿ – ಧರಿಯೊಳು ಕ್ಷ –
ತ್ರಿಯ ಕುಲದೊಳು ಜನಿಸಿ ಯುಧಿ ಭೀಮ –
ಶಯನನಿಂದ ಹತನಾಗ್ಯಭಯ ಸ್ಥಾನವನೆ ಬಯಸಿ ೨

ಭೂಸುರ ವರನಾಗಿ । ಕಾಶ್ಯಪಿ ಸ್ಥಳದಲ್ಲಿ
ವಾಸಮಾಡಿ ಶಿರಿ ವ್ಯಾಸ ಕೃಷ್ಣ ಪಾದೋ –
ಪಾಸನ ಮಾಡುತ । ವ್ಯಾಸಮುನಿ ಆಗಿ
ದೇಶದೇಶದಿ ಭಾರ । ತೀಶ ಪ್ರತೀಕವ
ವಾಸವಾಸರ ಸ್ಥಾ – ಪಿಸಿ ಯಂತ್ರೋದ್ಧಾರಾ
ಶ್ರೀಶ ಮಧ್ವಮುನಿಯಾ – ಸ್ಥಾಪಿಸಿ ಅಲ್ಲಿ
ವಾಸವ ಮಾಡಿ ತಾನೂ – ಪುರಂದರ
ದಾಸರಾಯರಿಗೆ ಇನ್ನು – ಸುಮಂತ್ರೋಪ –
ದೇಶಿಸಿ ಅನುದಿನ ವಾಸಮಾಡಿದಿ ನೀನು ೩

ಕ್ಷೋಣಿತಳದಿ ಕುಂಭ । ಕೋಣನಗರದಲ್ಲಿ
ಕ್ಷೋಣಿದೆವೋತ್ತುಮ । ವೀಣವೆಂಕಟನಾಮಾ –
ಕ್ಷೀಣಬಲ ಜ್ಞಾನ ತಾಣ । ಗೊಡದೆ ನಿನ್ನ
ಜಾಣತನದಿ ನರ । ಮಾಣವಕನಂತೆ
ಪಾಣಿ ಭಿಕ್ಷಾನ್ನವಾ । ಟಾಣಿ ಮಾಡುತ ನೀನು
ಕ್ಷೋಣಿಪ ಮನಿಗೆ ಬಾರೇ – ನಿನ್ನ ವೀ –
ಕ್ಷಣ ಗೈದು ತೋರೆ – ಶುಭ ಲ –
ಕ್ಷಣ ಬ್ಯಾರೆ ಬ್ಯಾರೇ ಇರಲು ನಿನ್ನ
ಕ್ಷಣ ಬಿಡದಲೆ ಜನ ಮಣಿದು ನಮಿಸುತಿರೆ ೪

ಜನಪ ನಿನ್ನಯ ಮಹ । ಘನ ಚರ್ಯವನೆ ನೋಡಿ
ದಿನದಿನದಲಿ ಬಹು । ವಿನಯಪೂರ್ವಕ ಪಾದ
ವನಜ ಸೇವಕನಾಗಿ ।ತನು ಮನ ಧನ ಧಾನ್ಯ
ಘನ ನಿನಗರ್ಪಿಸಿ । ನಿನ ಸಂಗವಾಗಲೂ
ಜನುಮ ಇಲ್ಲೆಂಬುವ । ಘನ ಜ್ಞಾನ ಭಕುತಿಯ
ಮನದಲ್ಲಿ ಯ್ಯೆದುತಲೆ – ತಾನು ನಿತ್ಯ
ಅನುಮಾನ ಮಾಡದಲೆ – ಇರಲು ಅವನ
ಘನಸುಖ ರೂಪದಲ್ಲೆ – ಇರುವಂತೆ
ಮನಪೂರ್ತಿ ಕರುಣಸಿದ್ಯನುಪಮ ಚರಿತಲ್ಲೆ ೫

ಸತ್ಯನಾಮಕ ಸುತ । ಮೃತ್ಯುನಿಂದಲಿ ತಾನು
ಸತ್ತುಪೋದ ವಾರ್ತೆ । ಬಿತ್ತರಿಸೆ ಲೋಕದಿ
ಉತ್ತುಮ ನೀನಾಗ । ಸತ್ಯ ಸಂಕಲ್ಪವ
ಗೊತ್ತು ತಿಳಿದು ಅವನ । ಮತ್ತೆ ಈ ಲೋಕಕ್ಕೆ
ತತ್ಕಾಲದಲಿ ತಂದು । ಉತ್ತುಮ ಭಾರ್ಯಳ
ಜತ್ತು ಮಾಡಿದ ವಾರ್ತೆಯಾ – ಕೇಳೀ ಶೈವ –
ರುತ್ತುಮನಾತ್ಮಜನಾ – ಇವಾನಂತೆ
ಸತ್ತನೆಂದು ಕರಿಯೇ – ಅದನು ನೀನು
ಸತ್ಯವೆಂದು ಪೇಳಿ ಮತ್ತೆ ಪೊರೆದ್ಯೊ ಜೀಯಾ ೬

ಇನತೆ ಮೊದಲಾದ । ಘನತರ ನಿನ ಮಹಿಮೆ
ಎನಗೆ ವಶವೆ ನಿತ್ಯ । ಅನಿಮಿಷ ಮುನಿಜನ
ಮನಕೆ ಸಿಲ್ಕದೆ ವೃಂದಾ – ।ವನದಲಿ ನೀ ನಿಂತು
ವನುತೆ ಸುತ ಧನ । ಧಾನ್ಯ ಮೊದಲಾದ
ಅನುಪಮ ಇಷ್ಟಾರ್ಥ । ಅನುದಿನ ಸಲಿಸುತ್ತ
ಜನರ ಪಾಲಿಸೊಗೋಸುಗಾ – ಹರಿಯು ನಿನಗೆ
ಜನುಮಾವನಿತ್ತನೀಗ – ಅದಕೆ ನಿನ್ನ
ಜನರು ಭಜಿಸೊವೋರೀಗ – ಅದಕೆ ನಾನು
ಅನುದಿನ ತವಪಾದ ವನಜ ನಂಬಿದೆ ವೇಗ ೭

ರಕ್ಷಿಸೋ ನೀ ಎನ್ನ । ಲಕ್ಷ್ಮೀರಮಣ ದೂತ
ಮೋಕ್ಷಾದಿ ಪುರುಷಾರ್ಥ – । ಪೇಕ್ಷ ಪ್ರದಾಯಕ
ಲಕ್ಷ ಜನರೊಳೆನ್ನ । ವೀಕ್ಷಿಸಿ ಪರಜನಾ –
ಪೇಕ್ಷಾ ಮಾಡದಂತೆ । ಲಕ್ಷ್ಮೀಶ ನಾತ್ಮಜ
ಭಿಕ್ಷಾನ್ನ ಬೇಡೋದು । ಲಕ್ಷಣವೇನಿದು –
ಪೇಕ್ಷಾ ಮಾಡದೆ ನೀ ಎನ್ನಾ – ಕಾಯಲಿಬೇಕು
ವಿಕ್ಷೀಸಿ ಜ್ಞಾನವನ್ನಾ – ಭಕುತಿ ಇತ್ತು –
ರಕ್ಷಿಸು ಎಂದೆ ನಿನ್ನಾ ಇದೆ ಒಂದಾ
ಪೇಕ್ಷೆ ಪೂರ್ತಿಸೊ ಕಲ್ಪವೃಕ್ಷ ನೀ ಎನಗೆ ಇನ್ನ ೮

ಕಿಟಿಜ ಸರಿದ್ವರ । ತಟ ಕೃತ ಮಂದಿರ
ಚಟುಲ ಮಧ್ವಮುನಿ । ಪಟು ಶಾಸ್ತ್ರದಿಂದಲಿ
ಕುಟಿಲ ದುರ್ವಾದಿಗ । ಛ್ಥಟನೆ ಮುರಿದು ನಿಜ
ಚಟುಲ ಸಿದ್ಧಾಂತವ । ಭಟ ಜನರಿಗೆ ಸದಾ
ಘಟನೆ ಮಾಡಿ ಪ್ರತಿ । ಭಟರಿಲ್ಲದಲೆ ನೀನು
ಧಿಟನಾಗಿ ತ್ರಿಜಗದಿ – ಮೆರೆಯುತ
ಶಠಜನರನು ತ್ವರದಿ – ಮರಿದು ಜ್ಞಾನಿ
ಕಟಕ ಸುಪಾಲನದಿ ಪಟೋ ಎನಿಸಿ
ಧಿಟಗುರು ಜಗನ್ನಾಥ ವಿಠಲನ್ನ ಭಜಿಸಿದೆ ೯

## ೧೨೦

ತೂಗಿರೆ ರಾಯರ ತೂಗಿರೆ ಗುರುಗಳ
ತೂಗಿರೆ ಯತಿಕುಲ ತಿಲಕರ ಪ

ತೂಗಿರೆ ಯೋಗೀಂದ್ರ ಕರಕಮಲ ಪೂಜ್ಯರ
ತೂಗಿರೆ ಗುರುರಾಘವೇಂದ್ರರ ಅ.ಪ

ಕುಂದಣಮಯವಾದ ಛಂದ ತೊಟ್ಟಿಲೊಳು
ನಂದದಿ ಮಲಿಗ್ಯಾರ ತೂಗಿರೆ

ನಂದನಂದನ ಗೋವಿಂದ ಮುಕುಂದನ
ನಂದದಿ ಭಜಿಪರ ತೂಗಿರೆ ೧

ಯೋಗನಿದ್ರೆಯನ್ನು ಬೇಗನೆಮಾಡುವ
ಯೋಗೀಶ ವಂದ್ಯರ ತೂಗಿರೆ
ಭೋಗಿಶಯನನಪಾದ ಯೋಗದಿ ಭಜಿಪರ
ಭಾಗವತರನ ತೂಗಿರೆ ೨

ನೇಮದಿ ತಮ್ಮನು ಕಾಮಿಪಜನರಿಗೆ
ಕಾಮಿತ ಕೊಡುವರ ತೂಗಿರೆ
ಪ್ರೇಮದಿ ನಿಜಜನರ ಆಮಯವನಕುಲ –
ಧೂಮಕೇತೆನಿಪರ ತೂಗಿರೆ ೩

ಅದ್ವೈತಮತದ ವಿಧ್ವಂಸನ ನಿಜ ಗುರು
ಮಧ್ವಮತೋದ್ಧರರ ತೂಗಿರೆ
ಶುದ್ಧ ಸಂಕಲ್ಪದಿ ಬದ್ಧ ನಿಜಭಕ್ತರ
ಉದ್ಧಾರಮಾಳ್ಪರ ತೂಗಿರೆ ೪

ಭಜಕಜನರ ಭವ ತ್ಯಜನೆ ಮಾಡಿಸಿ ಅವರ
ನಿಜಗತಿ ಇಪ್ಪರ ತೂಗಿರೆ
ನಿಜಗುರು ಜಗನ್ನಾಥವಿಠಲನ್ನ ಪದಕಂಜ
ಭಜನೆಯ ಮಾಳ್ಪರ ತೂಗಿರೆ ೫

## ೧೨೧

ದಯಮಾಡೋ ದಯಮಾಡೋ ಪ

ಭಯಕರ ಸುಮಹ –ದ್ಭಯಹರ ಯತಿವರ ಅ.ಪ

ಮೋಕ್ಷದ ಕರುಣ – ಕಟಾಕ್ಷದಿ ಎನ್ನನು
ವೀಕ್ಷಿಸಿ ನಿನ್ನ ನಿರೀಕ್ಷಿಸುವಂತೆ ೧

ಲಕ್ಷ್ಯಾಧೀಶರ ಲಕ್ಷಿಲ್ಲದೆ ಜ್ಞಾ –
ನಾಕ್ಷದಿ ತವಪದ ಲಕ್ಷಿಸುವಂತೆ ೨

ಸತ್ಯಾಭಿದ – ನಪ – ಮೃತ್ಯುಪರಿಸಿ ಮುದ
ವಿತ್ತು ಪಾಲಿಸಿದ – ಉತ್ತಮ ಎನಗೇ ೩

ಬಲ್ಲಿದತರ ಮಹ – ಪ್ರಲ್ಹಾದ ನಿನ್ನೊಳು
ನಿಲ್ಲಿಸು ಎನಮನ – ಎಲ್ಲಿ ಚಲಿಸದಂತೆ ೪

ದಾತಗುರು ಜಗನ್ನಾಥ ವಿಠಲನ
ದೂತಾಗ್ರಣಿ ಸು – ಖೇತರ ಕಳೆದು ೫

## ೧೨೨

ದಯಾನಿಧೇ ಶ್ರೀ ರಾಘವೇಂದ್ರ ಗುರುವೇ
ಕಾಮಿತ ಸುರತರುವೇ ಪ

ದಯಾಕರನೆ ಭವ – ಭಯಾ ಹರಿಸಿ ತವ
ಜಯಾಕರ ಪಾದ – ಪಯೋಜ ಯುಗ ತೋರೋ ಅ.ಪ

ಧರಾತಳದಿ ಸುರ – ತರೂ ಸುರಭಿವರ
ತೆರಾದಿ ಕಾಮಿತ – ಕರಾದು ಮೆರೆಯೋ ೧

ಗಡಾನೆ ತವ ಪದ – ಜಡಾಜ ಭಜಿಸುವ
ಧೃಡಾವೆ ಕೊಡೊ ಎ – ನ್ನೊಡೇಯ ನೀನೇ ೨

ಎಷ್ಟೂ ಪೇಳಲಿ ಎನ್ನ – ಕಷ್ಟರಾಶಿಗಳ್ಯತಿ –
ಶ್ರೇಷ್ಠಾನೆ ಕಳಿಯೊ ಉ – ತ್ಕಷ್ಠಾ ಮಹಿಮ ಗುರೋ ೩

ಮೋಕ್ಷಾದ ಎನ್ನನು – ವೀಕ್ಷಿಸಿ ಈಗಲೆ
ಸುಕ್ಷೇಮ ನೀಡುತ್ತಾ – ಪೇಕ್ಷಾಪೂರ್ತಿಸೊ ಗುರೋ ೪

ದಾತಾನೆ ಎನ್ನಯ – ಮಾತಾನು ಲಾಲಿಸೊ
ನೀತಾ ಗುರು ಜಗ –ನ್ನಾಥಾ ವಿಠಲ ಪ್ರಿಯ ೫

## ೧೨೩

ದಯಾನಿಧೆ ಶ್ರೀ ರಾಘವೇಂದ್ರ ಗುರುವೆ
ಕಾಮಿತ ಸುರತರುವೆ ಪ

ಧರಾತಳದಿ ಸುರತರೂವರೋಪಮ
ತ್ವರಾದಿ ಎನ್ನನು ಪೊರೇಯೊ ಗುರುವರ ೧

ಗಡಾನೆ ತವ ಪದ ಜಡಾಜ ಯುಗಲದಿ
ಧಢಾ ಮನವ ಕೊಡೊ ಒಡೇಯ ಗುರುವರ ೨

ಎಷ್ಟೊ ಪೇಳಲೆನ್ನ ಕಷ್ಟಾ ರಾಸಿಗಳನ್ನು
ಸುಟ್ಟುಬಿಡೊ ಸರ್ವೋತ್ಕೃಷ್ಟಾ – ಮಹಿಮ ಗುರು ೩

ಮೋಕ್ಷಾದಾಯಕ ಎನ್ನ ವೀಕ್ಷೀಸಿ ಮನೋಗತಾ –
ಪೇಕ್ಷಾವ ಪೂರೈಸೊ ತ್ರ್ಯಕ್ಷಾದಿಸುರ ಪ್ರೀತ ೪

ದಾತಾನೆ ನೀ ಎನ್ನ ಮಾತೂ ಲಾಲಿಸೊ ನಿತ್ಯ
ನೀತಾ – ಗುರು ಜಗನ್ನಾಥ ವಿಠಲ ಪ್ರಿಯ ೫

## ೧೨೪

ದಾತನೀತ ಯತಿನಾಥ ನಿಜಪದ
ದೂತಜನರ ಪೊರೆವಾ ಪ

ಧಾತನಾಂಡದೊಳತಿ ಖ್ಯಾತನಾಗಿ ಶಿರಿ
ನಾಥ ನೊಲಿಸಿ ಮೆರೆವಾ
ನೀತಮನದಿ ತನ ಮಾತು ಮೀರಿದಿಹ –

ಗೀತೆರದಿ ತಾನೆ ಒಲಿವಾ
ತಾತನೆ ಮನೋಗತ ಭೀತಿಯ ಬಿಡಿಸೆನೆ
ಪ್ರೀತಿ ಮನದಿ ತಾ ಬರುವಾ ಅ.ಪ

ರಾಮ ಕೃಷ್ಣ ನರಹರ್ಯಂಘ್ರಿಯ
ಪ್ರೇಮಮನದಿ ಭಜಿಪಾ
ನೇಮದಿ ತನ್ನನು ಕಾಮಿಪ ಜನರಿಗೆ
ಕಾಮಿತ ಫಲರೂಪಾ
ಈ ಮಹಾ ಮಹಿಮೆಯ ನೇಮದಿ ತೋರುವ
ಭೂವಿ ಸುರರ ಭೂಪಾ
ತಾಮಸ ಮತಿ ನಿರ್ಧೂಮ ಗೈಸುವ
ಧೂಮಕೇತುನೆನಿಪಾ ೧

ಮಂದ ಜನರಿಗೆ ಎಂದಿಗಲಭ್ಯನ –
ಮಂದ ಜನರ ಪ್ರೀಯಾ
ಪೊಂದಿದ ಜನರಾ ಕುಂದೆಣಿಸದೆ ತಾ
ನಂದ ಕೊಡವೊ ಮಹಾರಾಯಾ
ವಂದಿಪ ಜನರಘ – ವೃಂದವ ದರುಶನ –
ದಿಂದ ತರಿವೊ ಜೀಯಾ
ಸುಂದರತರ ವೃಂದಾವನ ನಿಜ
ಮಂದಿರ ಗತ ಧ್ಯೇಯಾ ೨

ದಾತಗುರು ಜಗನ್ನಾಥ ವಿಠಲನತಿ
ಪ್ರೀತಿಯಿಂದ ಭಜಿಪಾ
ದೂತ ಜನರು ಬಲು ಆತುರದಲಿ ಕರಿಯೆ
ಪ್ರೀತ ಮನದಿ ತಾ ಬಪ್ಪ
ಮಾತೆಯತೆರ ನಿಜ ದೂತರ ಮನಸಿನ
ಮಾತು ನಡೆಸುವ ನೀಭೂಪಾ

ಈತಗೆ ಸರಿಯತಿನಾಥ ಕಾಣೆನೊ
ಭೂತಳೇಶರಧಿಪಾ ೩

೧೨೫

ದಾತ ಸನ್ಮುನಿಗಣ -
ನಾಥ ಕಾಮಿತ ಕಲ್ಪವೃಕ್ಷಾ - ಕಲ್ಪವೃಕ್ಷಾ ಆಶ್ರಿತಜನದಕ್ಷಾ ಪ

ಧಾತ ಮುಖ ಸುರಮುನಿಯ ಸಂತತಿ
ಪ್ರೀತಿ ಪೂರ್ವಕದಿಪ್ಪ ಕಾರಣ
ಜೋತಿ ವೃಂದಾವನದಿ ತಾ ನಿ -
ರ್ಭೀತ ಮಹಿಮೆಯ ತೋರ್ಪಜಗದಿ ಅ.ಪ

ಬಿಕ್ಷುನಾಯಕ ಸರ್ವಾಪೇಕ್ಷದಾಯಕನೆಂಬ ಬಿರಿದು
ನೆಂಬ ಬಿರಿದು ಪೊತ್ತಿಹ ಪಾಪ ತರಿದು
ಲಕ್ಷ್ಮೀರಮಣನ ಪಾದ ಪದುಮವ
ವಕ್ಷೋಮಂದಿರದೊಳಗೆ ತಾನಪ -
ರೋಕ್ಷಕರಿಸೀ ಸರ್ವಜನರಾ -
ಪೇಕ್ಷ ಪೂರ್ತಿಸಿ ಮೆರೆವ ಗುರುವರ ೧

ದಂಡಕಾಷಾಯ ಕ - ಮಂಡುಲಧರ ಹಂಸರೂಪಾ
ಹಂಸರೂಪ ಅಮಿತ ಪ್ರತಾಪ
ತೊಂಡ ಜಲಜೋತ್ಫುಲ್ಲ ಕರ ಮಾ -
ರ್ತಾಂಡ ಸನ್ನಿ ಭವನೆನಿಪ, ತ್ರಿಜಗ -
ನ್ಮಂಡಲಾನತನ, ಸುಜನ ಮನ್ಮನೋ -
ಪುಂಡರೀಕ ನಿವಾಸ ನಿರ್ಮಲ ೨

ಕಿಟಜ ಸರಿದ್ವರ - ತಟವಾಸ ಗುರುಜಗನ್ನಾಥ
ಜಗನ್ನಾಥ ವಿಠಲ ಗುಣಗಾಥ

ತಟನಿ ಲಹರೀ ಮಧ್ಯ ತನ ಹೃ
ತ್ಪುಟ ಸುನಾವಿಯ ಮಾಡಿ ಸಂತತ
ಅಟನಗೈಯುತ ಜಗದಿರಾಜಿಪ
ಚಟುಲ ವಿಕ್ರಮ ಕರುಣಸಾಗರ ೩

## ೧೨೬

ಧಣೀ ಧಣೀ ಧಣೀ ಧಣೀ
ಗುರುರಾಯ ನೀನೆ ಧಣೀ ಧಣೀ ಪ

ಮನದಿ ನಿನ್ನನೆ ನಿತ್ಯ ನೆನೆವರ ಪೊರೆವಂಥ ಅ.ಪ

ಆದಿಯುಗದಿ ಪ್ರಹ್ಲಾದರಾಯನೆನಿಸಿ
ಮಾಧವನುತ್ತಮನೆಂದು ಸಾಧಿಸಿದಂಥಾ ೧

ತ್ರೇತಾಯುಗದಿ ರಘುನಾಥನನುಜನೆನಿಸಿ
ಸೀತಾಪತಿಯ ಪಾದ ಈತೆರ ಭಜಿಸಿದಂಥ ೨

ದ್ವಾಪರ ಯುಗದಲ್ಲಿ ಭೂಪ ಬಾಹ್ಲೀಕನೆನಿಸಿ
ಶ್ರೀ ಪನಾಜ್ಞ ದಿಂದಲೀಪರಿ ಜನಿಸಿದಂಥ ೩

ಕಲಿಯುಗದಲ್ಲಿ ನೀ ಚಲುವ ವ್ಯಾಸನೆನಿಸಿ
ಇಳೆಯೊಳು ಗ್ರಂಥರಚಿಸಿ ಜಲಜನಾಭನೊಲಿಸಿದಂಥ ೪

ಎರಡನೆ ಜನುಮದಿ ಗುರುರಾಘವೇಂದ್ರನಾಗಿ !
ಗುರುಜಗನ್ನಾಥ ವಿಠಲ ಚರಣ ಕಮಲ ಭಜಿಸಿದಂಥ ೫

## ೧೨೭

ನಂಬಿ ಕೆಟ್ಟವರಿಲ್ಲವೋ ರಾಯರ ಪಾದಾ
ನಂಬದೆ ಕೆಡುವುರುಂಟೋ ಪ

ನಂಬಿದ ಜನರಿಗೆ – ಬೆಂಬಲ ತಾನಾಗಿ
ಹಂಬಲಿಸಿದ ಫಲ – ತುಂಬಿ ಕೊಡುವರನ್ನ ಅ.ಪ

ಜಲಧರ ದ್ವಿಜವರಗೆ ತಾನೇ ಒಲಿದು
ಸುಲಭದಿ ಮುಕುತಿಯನಿತ್ತ
ಚಲುವ ಸುತನ ಪಡೆದಲಲನೆಗೆ ತ್ವರದಿಂದ
ಪುಲಿನ ಗರ್ತದಿ ದಿವ್ಯ – ಜಲವ ನಿತ್ತವರನ್ನ ೧

ಮೃತ್ಯುದೂತರು ತನ್ನನು ಪೊಂದಿದ ನಿಜ
ಭೃತ್ಯನ ಕರೆದೊಯ್ಯಲು
ಸತ್ತ ದ್ವಿಜನ ತಾನು – ಮತ್ತು ಧರೆಗೆ ತಂದು
ಮೃತ್ಯು ಬಿಡಿಸಿ ಸುಖ – ವಿತ್ತು ಪೊರೆದಿಹರನ್ನಾ ೨

ಧಿಟ ಗುರುಜಗನ್ನಾಥ ವಿಠಲನೊಲಿಮೆ
ಘಟನವಾದುದರಿಂದ
ಘಟನಾಘಟನ ಕಾರ್ಯ – ಘಟನಾ ಮಾಡುವ ನಮ್ಮ
ಪಟು ಗುರುವರ ಹೃ – ತ್ಪುಟ ದಿರುವೋರನ್ನ ೩

## ೧೨೮

ನಂಬಿ ತುತಿಸಿರೋ ರಾಘವೇಂದ್ರ ಧ್ವರಿಯಾ
ಸನ್ಮುನಿ ಕುಲವರಿಯಾ ಪ

ಅಂಬುಜನಾಭನಿಗತಿ ಪ್ರೀಯಾ
ಸಜ್ಜನರಿಗೆ ಸಹಾಯ ಅ.ಪ

ಕನಕಶಯ್ಯನ ತನುಜನಾಗಿ ಜನಿಸಿ
ನರಹರಿಯನ್ನೆ ಒಲಿಸಿ
ಅನುಜರಿಗನುದಿನ ತತ್ವವ ತಾಕಲಿಸಿ

ಪರಮತವನು ಜೈಸಿ
ಮನದಲಿ ಶ್ರೀಹರಿ ಪದವನ್ನೇ ಭಜಿಸಿ
ವರ ಕರುಣವನೇ ಸಲಿಸಿ
ವನಜಭವಾಂಡದಿ ಬಹು ಬಲ್ಲಿದನೆನಿಪ
ನತಜನರಿಗೆ ಸುರ ೧

ಕಾಮಧೇನು ಸುರತರುವಿಗೆ ಸಮನೀತ
ಕಾಮಿತ ಫಲ ದಾತಾ
ರಾಮ ನರಹರಿ ಕೃಷ್ಣರ ಪದ ದೂತ
ಲೋಕದಿ ಬಹು ಖ್ಯಾತ
ಕಾಮಿನಿ ಸುತ ಧನ ಧಾನ್ಯದ ವ್ರಾತ
ನೀಡುವೊನತಿ ಪ್ರೀತ
ಪ್ರೇಮದಿ ನಿಜಜನಸ್ತೋಮಕೆ ಬಹು ದಾತ
ಯತಿವರ ಕುಲನಾಥ ೨

ಪಾತಕವನಕುಲ ವೀತಿಹೋತ್ರನೆನಿಸಿ
ಸುಖವನ್ನು ಸುರಿಸೀ
ಭೂತಪ್ರೇತ ಮಹ ಭೀತಿಯನೇ ಬಿಡಿಸಿ
ರೋಗವಪರಿಹರಿಸಿ
ಮಾತಪಿತರ ತೆರ ದೂತರ ರಕ್ಷಿಸಿ
ಮನೋಚಿಂತೆಯನೆ ಬಿಡಿಸಿ
ದಾತಗುರುಜಗನ್ನಾಥವಿಠಲ ಪದದೂತ
ನತಜನರಿಗೆ ದಾತ ೩

## ೧೨೯

ನೀ ಪಾಲಿಸೋ ಗುರುರಾಯ ಎನ್ನ
ಕಾಪಾಡೀಗ ಮಹರಾಯ ಪ

ಭೂಪತಿ ನೀ ಎನ್ನ ಆಪದ್ಬಾಂಧವ
ಶ್ರೀ – ಪತಿ – ಪದ – ಪ್ರಿಯ ಈ ಪರಿ ಮಾಡದೆ ಅ.ಪ

ಪಾಪಿಗಳೊಳಗೆ ಹಿರಿಯನು ನಾ
ನಿಷ್ಪಾಪಿಗಳರಸೆ ಗುರುರಾಯ
ಅಪಾರ – ಜನುಮದಿ ಬಂದಿಹ
ತಾಪತ್ರಯವ ಕಳಿ ಮಹರಾಯಾ ೧

ನೀಚರ ಒಳಗೆ ನೀಚನೊ ಪಾಪ –
ಮೋಚನೆ ಮಾಡೋ ಗುರುರಾಯ
ಯೊಚನೆ ಇಲ್ಲದೆ ಅನ್ಯರ ಅನುದಿನ
ಯಾಚಿಸಿ ಕೆಟ್ಟೆನೊ ಮಹರಾಯಾ ೨

ದೀನರ ಒಳಗೆ ದೀನನು ನಾನೈ
ದಾನಿಗಳರಸೇ ಗುರುರಾಯ
ಜ್ಞಾನವು ಇಲ್ಲದೆ ನಾನು ನನ್ನದೆಂದು
ಹೀನ ಮತ್ತ್ಯಾದೆನೊ ಗುರುರಾಯ ೩

ಅನ್ನವು ಇಲ್ಲದೆ ಅನ್ಯರ ಮನೆಯಲಿ
ಕುನ್ನಿಯಾದೆನೋ ಗುರುರಾಯ
ನಿನ್ನನೆ ನಂಬಿ ಅನ್ಯರ ಬೇಡೊದು
ಘನ್ನತಿ ನಿನಗೆ ಮಹರಾಯಾ ೪

ದಾತನೆ ನಿನ್ನಾ ಪೋತನು ನಾನೀ –
ರೀತಿಯ ಮಾಳ್ಪರೆ ಗುರುರಾಯ
ನೀತ ಗುರು ಜಗನ್ನಾಥ ವಿಠಲ ಪದ
ದೂತನು ನೀನೆ ಮಹರಾಯಾ ೫

## ೧೩೦

ನೀ ಎನ್ನ ಕಾಯಲಿ ಬೇಕೊ – ಘನ್ನ ಮಹಿಮಾ ಪ

ಎನ್ನ ನೀಪರಿಪರಿ ಬನ್ನ ಬಡಿಸುವದು
ಅನ್ಯಾಯ ನಿನಗಿದಾಪನ್ನಪಾಲ ಅ.ಪ

ಘನ್ನ ಮಹಿಮೆಯತೋರಿ – ಎನ್ನ ಕಾಯಲಿ ಬೇಕು
ನಿನ್ನೊರತು ಗತಿ ಎನಗೆ – ಮುನ್ನಾರು ಗುರುವೆ ೧

ಎನ್ನ ಮಾತನು ನೀನು – ಚನ್ನಾಗಿ ಚಿತ್ತೈಸಿ
ಅನ್ಯಜನರಾಬಾಧೆ – ಮುನ್ನ ಕಳೆಯ ಬೇಕೊ ೨

ಘನ್ನ ಶಿರಿ ಕೃಷ್ಣನು ತನ್ನ ಸಖನಿಗೆ ಮಹಾ
ಉನ್ನ ತೈಶ್ವರ್ಯವಿತ್ತವ – ನನ್ನ ಕಾಯ್ದು ತೆರದಿ ೩

ಇನ್ನು ಪೇಳುವುದೇನೊ ಗುರು – ರನ್ನ ಭವದಾಶ್ರಮವು
ಇನ್ನು ತಿಳಿಯದೆ ನಿನಗೆ –ಘನ್ನ ಸರ್ವಜ್ಞರಾಯಾ ೪

ಸನ್ನುತಜನಪ್ರೀಯ – ನಿನಗೆ ಮೊರೆಯಿಡುವೆ
ಘನ್ನ ಗುರು ಜಗನ್ನಾಥ ವಿಠಲ ದೂತಾ ದಾತಾ ೫

## ೧೩೧

ನೋಡಿದೆ ಗುರುರಾಯರನ್ನ ಈ
ರೂಢಿಯೊಳಗೆ ಮೆರೆವೊ ಸಾರ್ವಭೌಮನ್ನ ಪ

ಥಳಥಳಿಸುವ ಬೃಂದಾವನದಿ – ತಾನು
ಕುಳಿತು ಭಕ್ತರಿಗೀವ ವರವನು ತ್ವರದಿ
ನಳಿನನಾಭನ ಕೃಪಾಬಲದಿ – ಇದೆ
ನಳಿನಜಾಂಡದಿ ಸರಿಗಾಣೆ ಮಹಿಮಾದಿ ೧

ಪೊಳೆವೊ ವಕ್ಷಸ್ಥಳದವನ – ಎಳೆ
ತುಳಸಿ ಮಾಲಾಂಕಿತ ಕಂಧರಯುತನಾ
ನಳಿನಾಕ್ಷಮಾಲೆ ಶೋಭಿತನ – ಉರ
ಚಲುವ ದ್ವಾದಶಪುಂಡ್ರ –ಮುದ್ರಚಿಹ್ನಿತನಾ ೨

ಕೃಷ್ಣವರ್ಣದಿ ಶೋಭೀಪನಾ – ಮಹಾ
ವೈಷ್ಣವ ಕುಮುದ – ನಿಕರಕೆ ಚಂದಿರನಾ
ವಿಷ್ಣು ಭಕ್ತಾಗ್ರೇಸರನಾ – ಬಾಲ
ಕೃಷ್ಣಮೂರುತಿ ಪದಯುಗ ಸರೋಜ ಇನಾ ೩

ದಿನನಾಥ – ದೀಪ್ತಿ – ಭಾಸಕನ – ಭವ
ವನಧಿ – ಸಂತರಣ – ಸುಪೋತಕೋಪಮನಾ
ಮುನಿಜನ ಕುಲದಿ ಶೋಭಿಪನ – ಸ್ವೀಯ
ಜನರ ಪಾಲಕ ಮಹಾರಾಯನೆನಿಪನಾ ೪

ಗುರುಜಗನ್ನಾಥ ವಿಠಲನ – ಪಾದ
ಸರಸಿಜ ಯುಗಳಕಾರಡಿ ಎನಿಪನಾ
ಪೆರಿವೋನು ತನ್ನ ಜನರನಾ – ಎಂದು
ಶಿರಸದಿ ನಮಿಸಿ ಬೇಡಿದೆ ಗುರುವರನಾ ೫

## ೧೩೨

ನೋಡಿದ್ಯಾ ಗುರುರಾಯರ ನೋಡಿದ್ಯಾ ಪ

ನೋಡಿದ್ಯಾ ಮನವೆ ನೀನಿಂದು – ಕೊಂ –
ಡಾಡಿದ್ಯ ಪುರದಲ್ಲಿ ನಿಂದು – ಆಹಾ
ಮಾಡಿದ್ಯ ವಂದನೆ ಬೇಡಿದ್ಯ ವರಗಳ
ಈಡು ಇಲ್ಲದೆ ವರ ನೀಡುವೊ ಗುರುಗಳ ಅ.ಪ

ಸುಂದರ ತಮ ವೃಂದಾವನದಿ ತಾನು
ನಿಂದು ಪೂಜೆಯ ಕೊಂಬ ಮುದದಿ – ಭಕ್ತನೀ
ನಂದ ನೀಡುವೆನೆಂದು ತ್ವರದಿ ಇಲ್ಲಿ
ಬಂದು ನಿಂತಿಹನು ಪ್ರಮೋದಿ ಆಹಾ
ಹಿಂದಿನ ಮಹಿಮವು ಒಂದೊಂದೆ ತೋರುವಾ
ಮಂದಜನರ ಹೃ – ನ್ಮಂದಿರಗತರನ್ನ ೧

ದೂರದಿಂದಲಿ ಬಂದ ಜನರ – ಮಹ
ಘೋರ ವಿಪತ್ಪರಿಹಾರಾ – ಮಾಡಿ
ಸಾರಿದಭಿಷ್ಟವು ಪೂರಾ – ನೀಡಿ
ಪಾರುಮಾಡುವ ತನ್ನ ಜನರಾ – ಆಹಾ
ಆರಾಧಿಸುವರ ಸಂ –ಸಾರವಾರಿಧಿಯಿಂದ
ದೂರಯ್ಯೈದಿಸಿ ಸುಖ ಸೂರಿ ಕೊಡುವೊರನ್ನ ೨

ನಿತ್ಯನೇಮದಿ ತನ್ನ ಪಾದ – ಯುಗ
ಸತ್ಯಪೂರ್ವಕದಿ ನಂಬೀದ – ನಿಜ
ಭೃತ್ಯನಪೇಕ್ಷಮಾಡೀದ – ಕಾರ್ಯ
ಸತ್ಯಮಾಡುವ ಪೂಜ್ಯಪಾದ – ಆಹಾ
ಮರ್ತ್ಯಾದಿ ಸುರರೊಳು – ಎತ್ತ ನೋಡಿತಗಿನ್ನು
ಉತ್ತುಮರಾರಯ್ಯ – ಭತ್ಯವತ್ಸಲರನ್ನ ೩

ಅಂತರದಲಿ ತಾನು ನಿಂತು ಜನ
ಸಂತತ ಕಾರ್ಯಗಳಿಂತು – ಮಾಡಿ
ಕಂತುಪಿತಗೆ ಅರ್ಪಿಸ್ಯಂತು ತಿಳಿಸ
ದಂತೆ ಎಮ್ಮೊಳಗಿರೊವೊ ತಂತು – ಆಹಾ
ಸಂತತ ಕರ್ಮಗಳಂತು ಮಾಡುತ ಜೀವ
ರಂತೆ ಗತಿಯು ತಾ ಪ್ರಾಂತಕ್ಕೆ – ನೀಡುವರ ೪

ಅಗಣಿತ ಮಹಿಮವಗಾಧಾ – ಬಹು
ಸುಗುಣನಿಧಿ ಮಹಾ ಭೋಧ – ನಾನು
ಪೊಗಳುವದೇನು ಸಮ್ಮೋದ – ತೀರ್ಥ
ಮೊದಲಾದ ಸುರರ ಪ್ರಮೋದ – ಆಹಾ
ಮೊಗದಿಂದ ಶ್ರೀಗುರು ಜಗನ್ನಾಥ ವಿಠಲ ಸಂ
ಮೊಗನಾದ ಕಾರಣ ಜಗದಿ ಮೆರೆವೊರನ್ನ ೫

## ೧೩೩

ಪಾಲಿಸೋ ಶ್ರೀ ಗುರುರಾಯಾ ಪ

ಪಾಲಿಸೋ ಪಾವನ್ನ ಕಾಯ – ಭವ
ಜಾಲ ತಪ್ಪಿಸೊ ಮಹರಾಯ – ಆಹಾ
ಪಾಲಗು ಜನರ ಸು – ಪಾಲಕ ಹರಿಪಾದ
ಲೋಲ ಶ್ರೀಕರ ಭವ – ತೂಲಕಾನಲನೆ ಅ.ಪ

ಶೇಷಾಂಶ ಪ್ರಹ್ಲಾದ ವ್ಯಾಸಾ – ಮುನಿ
ವೇಷ ತಾಳಿದೆಯೊ ಯತೀಶಾ – ಜಾಗು
ಪೋಷಣೆ ಗೈಯ್ಯೊ ಮನೀಷಾ – ಎನ್ನಾ –
ಶೇಷ ಕ್ಲೇಶವಳಿದೀಶಾ – ಆಹಾ
ಶೋಷದ ಭವ ನಿ –
ಸ್ಸೇಷ ಮಾಡಿ ಎನ್ನ
ಪೋಷಿಸೊ ನಿರುತ ಧೃ –
ತಾಷಾಢ ಗುರುವರ ೧

ಕಾಮಧೇನು ಕಲ್ಪವೃಕ್ಷಾ – ನಿನ್ನ
ಈ ಮಹಮಹಿಮೆ ನಿರೀಕ್ಷಾ – ಮಾಡಿ
ಈ ಮಹಿ ಯಾಕೆಂದುಪೇಕ್ಷಾ – ಮಾಡಿ
ಧಾಮ ಸೇರಿದವೊ ಭಕ್ತಪಕ್ಷಾ – ಆಹಾ
ಸಾಮಜನಾಥನ
ಪ್ರೇಮ ಪಾತ್ರನೆ ನಿನ್ನ
ಈ ಮಹ ಮಹಿಮೆಗೆ
ನಾಮಾಳ್ಪೆ ನಮೊ ನಮೊ ೨

ಆಸೇತು ಹಿಮಾದ್ರಿ ತನಕಾ – ನಿನ್ನ
ಆಸೆಯ ಮಾಳ್ಪರನೇಕಾ – ಅಂಥ

ದಾಸಜನರಿಗೆ ಅನೇಕಾ - ಫಲ
ರಾಶಿಯ ಕೊಡುವಿ ಮಜ್ಜನಕಾ - ಆಹಾ
ಹೇಸಿ ಮಾನವ ಜನ್ಮ
ಈಸೆ ಸಾಕೆಲೊ ಸ್ವಾಮಿ
ಎಸು ಪೇಳಲಿ ನಿನ್ನ
ದಾಸರ ದಾಸನೋ ೨

ಎಲ್ಲಿ ಪೋದರು ಕಾಯ್ವರಿಲ್ಲ - ಜಗ -
ದ್ವಲ್ಲಭ ಬಲ್ಲಿ ನಿನೆಲ್ಲಾ - ಬಹು
ಬಲ್ಲಿದನೆಂಬುವರೆಲ್ಲಾ - ಜನ
ಸೊಲ್ಲು ಕೇಳಿಬಂದೆನಲ್ಲಾ - ಆಹಾ
ಪುಲ್ಲಲೋಚನ ನೀ -
ನಲ್ಲದೆ ಎನ ಭವ
ಕ್ಷಲ್ಲ ಮಾತ್ರವು ಕಳೆಯೊ -
ರಿಲ್ಲವೊ ಎನ್ನಜೀಯಾ ೪

ನಾಥ ನಿನ್ನೊಳು ಜಗಕೆಲ್ಲ - ಮಹ
ಪ್ರೀತಿಯು ಇರುತಿಹುದಲ್ಲ - ಸದ -
ತಾತ ನೀನಾಗಿ ಜಗಕೆಲ್ಲಾ - ಮತ್ತೆ
ಪೂತ ಫಲ ಕೊಡುವಿಯಲ್ಲಾ - ಆಹಾ
ವಾತದೇವನ ಸಹ - ದಾತ ಗುರುಜಗ -
ನ್ನಾಥವಿಠಲ ಸದಾ ಪ್ರೀತಿಂದ ಇರುವೊನು ೫

## ೧೨೪

ಬಂದ ಶಿರಿ ರಾಘವೇಂದ್ರಮೂರುತಿ ಮನ
ಮಂದಿರದೊಳಗೆ ಸರಸದಿ ಪ

ಬಂದನು ಭಕುತನ ಬಂಧನ ಬಿಡಿಸ್ಯಾ -
ನಂದನೀಡುತ ಮುದದಿಂದಲಿ ಭರದಿಂದ ಅ.ಪ

ಮುದದಲಿ ಶೋಭಿಪ ವದನದೊಳೊಪ್ಪುವ
ರದನದಿ ಶೋಭಿತನು
ಉದಿಸಿದ ಎನ್ನಯ ಹೃದಯಾಂಬರದೊಳು
ಸದಯ ಮೂರುತಿ ಧರನು
ಆಗಾಡಿದ ಮೃದು ನುಡಿಯಾ ಅತಿ ಭಿಡಿಯಾ
ತೋರುತಾ – ಬೀರುತಾ –
ಪದಸಕಿತ – ಸುಖನೀಡುತ
ಇದು ಮೊದಲಾ ಗಿಹ – ಅದ್ಭುತ ಮಹಿಮೆಯ
ಪದದಲಿ ತೋರುತ ಸದಮಲ ಮನದೊಳು ೧

ಕುಣಿದಾಡುತ ಗುಣಗಳ ಗಣಿಸುವ ಭಕ್ತರ
ದಣಿಸೆನೊ ಭವದೊಳಗೆ
ಗಣಿಸುವೆ ದಾಸರ ಗಣದೊಳಗವನಿಗೆ
ಉಣಿಸುವೆ ಪರಸುಖ ಕೊನಿಗೆ
ಬೇಡಿದ ಇಷ್ಟವ ಕೊಡುವೆ ದುರಿತವ ತಡಿವೆ
ಪೊರೆಯುತಾ ಬೆರೆಯುತಾ ಮಣಿಸುತಾ ತಿಳಿಸುತಾ
ಕ್ಷಣ ಕ್ಷಣದಲಿ ವೀಕ್ಷಣದಿಂದಲಿ ಶ್ರಮ
ತೃಣ ಸಮವೋ ಧಣಿ ನಾ ನಿನಗೆಂದು ೨

ಧಿಟಜ್ಞಾನ – ಭಕುತಿಯ ಥಟನೆ ಕೊಡುವೊ
ಉತ್ಕಟ ಮಹಿಮನೋ ನಾನು
ಪಟುತರ ಎನಪದ ಚಟುಲ ನಳಿನಯುಗ
ಷಟ್ಪದ ಸಮ ನೀನೋ
ನಾನಾಡಿದ ನುಡಿ ಖರೆಯಾ – ಮರೆಯಾ
ಬೇಡಲೋ – ನೋಡಲೋ –
ಕೊಂಡಾಡಲೋ ನೀಡಲೋ
ಘಟಿಸುವೆ ಸಮಯಕೆ – ಧಿಟ ಗುರುಜಗನ್ನಾಥ
ವಿಠಲನ ಹೃತ್ಯಂ – ಪುಟದಿ ತೋರುವೆನೆಂದು ೩

## ೧೩೫

ಬ್ಯಾಗ ಬಾರೋ ಗುರುರಾಘವೇಂದ್ರರಾಯಾ
ಬಾಗಿ ನಮಿಪೆ ಮಹರಾಯಾ ಪ

ಯೋಗಿ ಮಧ್ವಮತದಾಗಮದಿಂದಲಿ
ಭಾಗವತರು ಶಿರಬಾಗಿ ಪಾಡುವರೋ ಅ.ಪ

ಕುಂದಣಮಣಿಮಯ ಸ್ಯಂದನದೊಳತಿ
ಸುಂದರ ಶುಭತರ ರೂಪ –
ದಿಂದಲಿ ರಾಜಿಪಾಮಂದಬೋಧ ನಿಜ
ನಂದದಾಯಕ ಯತಿಕುಲ ದೀಪ
ಛಂದದಿ ಭಕುತ(ರ) ಕುಂದನಿಚಯಕೆ ನಿಜ
ಚಂದಿರ ಸಮ ಭೂಪಾ –
ವೃಂದವಂದಿತ ಪಾದ ದ್ವಂದ್ವವು ನಿಜರಿಗೆ
ನಂದ ನೀಡುವ ಪ್ರತಾಪಾ
ವಂದಿಸಿ ಗುಣಗಳ ವೃಂದ ಪೊಗಳುವ
ಮಂದ – ಜನರು ಬಲು – ಸುಂದರ ಶುಭಗುಣ
ದಿಂದ ಶೋಭಿಪ ಜನ – ಸಂದಣಿಯೊಳು ನಿನ್ನ
ಸುಂದರ ಮೂರುತಿ – ಛಂದದಿ ನೋಳ್ಪರೊ ೧

ಕನಕ ಮಣಿಮಯ ಘನಸುಕೊಡೆಗಳು
ಮಿನುಗುವ ಚಾಮರ ಚೋದ್ಯವೋ
ಅನುಗ – ಕರಗತ ಮಣಿಮಯ ಛಡಿಗಳ
ಅನುಪಮ ಭಾರವೋ
ಮುನಿಜನ ಶಿರಮಣಿಸಿ ಗುಣ ಗಣ
ಎಣಿಸುವ ಗಂಭೀರವೋ
ತನು – ಮನ – ಮನಿ – ಧನ ವನುತೆರ ನಿನಗನು –
ಮಾನಮಾಡದೆ ನೀಡುವಗಾಧವೋ

ಘನ ಸಂತೋಷದಿ – ಮನದೊಳು ನಲಿಯುತ
ಕುಣಿದಾಡುತ – ದಣಿಯದೆ ಕರಚಪ್ಪಳಿ ।
ಕ್ಷಣ ಕ್ಷಣದಲಿ ತ್ಮಮ – ತನು ಮರೆದೀಪರಿ
ಜನರೊಳು ನಮ್ಮ ಜನುಮ ಸಫಲವೆಂಬುವರೋ ೨

ಪಟುತರ ಭಟರಾರ್ಭಟಿಸುವ ಮಹ
ಚಟ – ಚಟ – ಚಾಟ ಶಬ್ಧವೋ
ಕುಟಿಲ ವಿಮತ ಘನ ಪಟಲ ವಿದಾರಣ
ಚಟುಲ ಸ್ವಮತ ಸಿದ್ಧಾಂತವೋ
ಕುಟಿಲಾಳಕಿಯರ ಕುಣಿಯುವ ಪದದಿ ಸಂ –
ಘಟಿತ ಗೆಜ್ಜೆಗಳ ಶಬ್ಧವೋ
ಪಟು ಗುರುಜಗನ್ನಾಥವಿಠಲರ ದಾಸರ
ಧಿಟ ಪದ ಸಂಗೀತವೋ
ಧಿಟಗುರುರಾಯನೆ – ಭಟರುಗಳ ಮಹಸು –
ಕಟಕದಿ ಮೋದೋ – ತ್ಕಟದಲಿ ಇಷ್ಟವ
ಥಟನೆ ಬೀರುತ ಬಲು ಪುಟಿದಾಡುತ ಹರಿ
ಭಟ ಜಲಜೋತ್ಕಟ ದಿವಾಕರ ೩

## ೧೩೬

ಭೂಮಿಸುರರ ಘನ । ಸ್ತೋಮವಂದಿತ ಮಹಾ ಮಹಿಮಾ
ಮಹಾಮಹಿಮ ಸಜ್ಜನ – ತತಿ – ಪ್ರೇಮಾ ಪ

ಕಾಮಧೇನು ಸುಕಲ್ಪತರು ಚಿಂ –
ತಾಮಣಿಯು ತಾನೆನಿಸಿ ಸರ್ವದ
ಕಾಮಿತಾರ್ಥವನಿತ್ತು ಮೆರೆವನು
ಈ ಮಹಿಯೊಳು ಸಾರ್ವಭೌಮನು ಅ.ಪ

ಪ್ರಾಣತನಯ ವಿಷ್ವಕ್ಸೇನ ಶ್ರೀಹರಿ ಶಾಪದಿಂದ
ಶಾಪದಿಂದ ಭೂತಳದಲಿ ಬಂದಾ

ಮಾಣವಕ ಪ್ರಹ್ಲಾದನೆನಿಸಿ –
ಪ್ರಾಣದೇವಾವೇಶ ಶೇಷನು
ಕ್ಷೋಣಿಯೊಳು ಶಿರಿವ್ಯಾಸನೆನಿಸೀ
ಮಾಣದಲೆ ಗುರುರಾಘವೇಂದ್ರನು ೧

ಅಲವಬೋಧರ ಮತ – ಜಲಧಿಚಂದಿರನೆನಿಪನೀತಾ
ನೆನಿಪನೀತ ಲೋಕದಿ ಬಹು ಖ್ಯಾತಾ
ಲಲಿತ ವೃಂದಾವನದಿ ನಿಂತು
ಹಲವು ಭಕುತರಭೀಷ್ಟಕಾರ್ಯವ
ಸಲಿಸಿ ಸುಜನರ ಸಲಹೊಗೋಸುಗ
ಸುಲಭತರನಾಗಿರುವ ಗುರುವರ ೨

ಕಿಟಜಸರಿದ್ವರ – ತಟದಿ ಸಂತತ ತಾನಿರುವ
ತಾನಿರುವ ಭಕ್ತರು ಕರೆಯೆ ಬರುವಾ
ಧಿಟ ಸುಭಕ್ತರ ಬಿಡದೆ ತಾನು ಪ್ರ –
ಕಟನಾಗಿ ಮಹಿಮೆ ತೋರುವ
ಧಿಟ ಗುರು ಜಗನ್ನಾಥ ವಿಠಲನ
ಭಟಜನಾಗ್ರಣಿ ಎನಿಸಿ ಮೆರೆವ ೩

## ೧೩೭

ಮಂಗಳಂ ಜಯ ಮಂಗಳಂ
ಮಂಗಳಂ ಗುರಾಘವೇಂದ್ರಗೆ ಪ

ಮಂಗಳಂ ಗುಣಸಾಂದ್ರಗೆ
ಮಂಗಳಂ ಯತಿಸಾರ್ವಭೌಮಗೆ
ಮಂಗಳಂ ಶುಭಕಾಯಗೇ ಅ.ಪ

ಅಲವಭೋಧಮತಾಬ್ಧಿ ಚಂದ್ರಗೆ
ಲಲಿತರೂಪದ ಸಾಂದ್ರಗೆ

ಸುಲಭವಾಗಿಹ ಸಂಯಮೀಂದ್ರಗೆ
ಜಲಜನಯನ ಸುರೇಂದ್ರಗೇ ೧

ಸುಜನ ವಾರಿಜ ನಿಕರ ಸೂರ್ಯಗೆ
ಕುಜನ ಕಾನನ ಕೃಷ್ಣವರ್ತ್ಮಗೆ
ಭಜಕ ಜನಸುರ ಕಾಮಧೇನುಗೆ
ವಿಜಯದಾಯಕ ವೀತಭಯಗೆ ೨

ಕಂಬು ಚಕ್ರ ಸುಲಕ್ಷಣಾಂಕಗೆ
ಬಿಂಬ ಮೂರುತಿ ಪಾದಭಜಕಗೆ
ಕುಂಭಿಣೀತಲ ಸಾರ್ವಭೌಮಗೆ
ನಂಬಿ ಭಜಿಪರ ಪೊರೆವೊ ಕರುಣಿಗೆ ೩

ವಾಯುದೇವಾವೇಶ ಶೇಷನು
ಮಾಯಾರಮಣನ ಶಾಪದಿಂದಲಿ
ತೋಯನಿಧಿ ಪರಿವಸನ ತಳದಿ
ರಾಯನಾಗೀಪರಿಯ ಮೆರೆವಗೆ ೪

ಮೊದಲು ತಾ ಪ್ರಹ್ಲಾದನೆನಿಸಿದ
ನದರ ಹಿಂದಲೆ ವ್ಯಾಸರಾಯನು
ಇದರ ಹಿಂದಲೆ ರಾಘವೇಂದ್ರನು
ಪದುಮನಾಭನ ಮುದದಿ ಭಜಿಪಗೆ ೫

ಮೂರುಜನುಮದಿ ಹರಿಯ ಶುಭತಮ
ಮೂರುಮೂರುತಿ ಪಾದ ಭಜಿಸೀ
ಧಾರುಣೀ ಜನ ತತಿಗಭೀಷ್ಟೆಯ
ಸೂರಿ ಕೊಡುತಲೆ ಮೆರೆವ ಧೀರಗೆ ೬

ಧಾತನಾಂಡಕೆ ನಾಥನೆನಿಪ ವಿ –
ಧಾತ ಜನಕನ ಸಾರ ಮನದಲಿ

ಪ್ರೀತಿಯಿಂದಲಿ ಭಜಿಪ ಗುರುಜಗ
ನ್ನಾಥವಿಠಲ ದೂತರಾಗ್ರಣಿಗೆ ೭

## ೧೩೮

ಮಾಮವ ಯತಿಕುಲೋತ್ತುಂಗ ಪ

ಶ್ರೀಮನೋಹರ ರಘು – ರಾಮ ಪದದ್ವಯ

ತಾಮರಸ – ಯುಗ – ಭೃಂಗ ಅ.ಪ

ನಿರ್ಜಿತ ಷಡ್ವರ್ಗಾರ್ಜಿತ ಹರಿಪದ
ಭರ್ಜಿತ ದೋಷ ತರಂಗ ೧

ಸಾಧಿತ ಹರಿಮತ – ಭೇದಿತಪರಮತ
ಛೇದಿತ – ಮಾಯಿ – ಪತಂಗ ೨

ತೋಷಿತಯದುವರ – ಪೋಷಿತದ್ವಿಜಕುಲ
ದೂಷಿತ – ದುರ್ಜನ – ಸಂಘ ೩

ಮೋದಿತಸುಜನಾ – ರಾಧಿತ ಸುರಗಣಾ –
ಸಾದಿತ ಶ್ರೀಹರಿಯಂಗ ೪

ದಾತ ಗುರುಜಗ – ನ್ನಾಥವಿಠಲಪದ
ಪಾಥೋದ್ಭವ ಯುಗ ಸಂಗಾ ೫

## ೧೩೯

ಯಾಕೆ ಮೂಕನಾದೆಲೋ ಗುರುವೆ ನೀ –
ನ್ಯಾಕೆ ಮೂಕನಾದ್ಯೋ ಪ

ಯಾಕೆ ಮೂಕನಾದ್ಯೋ ಲೋಕಪಾಲಕ ಎನ್ನ
ಸಾಕುವೊರಾರಯ್ಯಾ ಶ್ರೀಕರ ರಾಘವೇಂದ್ರ ಅ.ಪ

ಹಿಂದಕ್ಕೆ ನೀ ಎನ್ನ ಮುಂದೆ ಸುಳದೀಗ
ಮಂದಿಯಂದಿದ ಎನ್ನ – ಮಂದನ ಮಾಡೀಗ ೧

ಬೇಕಾಗದಿದ್ದರೆನ್ನ – ಯಾಕೆ ಕೈಯಾ ಪಿಡಿದಿ
ಕಾಕು ಜನರೊಳೆನ್ನ – ನೂಕಿ ಬಿಟ್ಟು ಈಗ ೨

ನಿನ್ನಂಥ ಕರುಣಿಲ್ಲ – ಎನ್ನಂಥ ಕೃಪಣಿಲ್ಲ
ಘನ್ನ ಮಹಿಮ ನೀ – ಎನ್ನನು ಬಿಟ್ಟೀಗ ೩

ಎಂದಿಗಾದರು ನಿನ್ನ ಪೊಂದಿಕೊಂಡವನಲ್ಲೆ
ಇಂದು ನೀ ಬಿಟ್ಟರೆನ್ನ – ಮುಂದೆ ಕಾಯುವರ್‍ಯಾರೋ ೪

ಜನ್ಯಾನು – ನಾನಯ್ಯ – ಎನ್ನ ಜನಕನು ನೀನು
ಮನ್ನಿಸು ನೀ ನಿತ್ಯಾ – ನನ್ನ ಶರಣನಲ್ಲೆ ೫

ಈಗ ಪಾಲಿಸದರೆ – ಯೋಗಿ ಕುಲವರ್ಯ
ರಾಘವೇಂದ್ರನೇ ಭವ – ಸಾಗುವಧ್ಯಾಗಯ್ಯ ೬

ನಾಥನು ನೀನಯ್ಯಾ – ನಾಥನು ನಾನಯ್ಯಾ
ಪಾಥೋಜ ಗುರುಜಗ –ನ್ನಾಥ ವಿಠಲ ಪ್ರೀಯ ೭

## ೧೪೦

ಯಾತರ ಭಯ ಯತಿನಾಥನ ಪದಯುಗ
ಪ್ರೀತಿಲಿ ಭಜಿಪನಿಗೆ ಪ

ಪೋತರು ಸತಿ ಮಹಭೂತಿಯ ನೃಪತನ
ನಾಥನಿಗರ್ಪಿಸಿ ದೂತ ನಾನೆಂಬುವಗೆ ಅ.ಪ

ವಂದಿಸಿ ಧನವನು ತಂದು ಜನರು ತನ
ಮುಂದೆ ಸುರಿಸಲೇನೂ
ವಂದನೆ ಮಾಡದೆ ನಿಂದಿಸಲೇನದ
ರಿಂದ ಪೋದದೇನೂ
ಬಂದ ಬಂದ ಜನರಾನಂದದಿ ತನ್ನನು
ಪೊಂದಿ ನಡೆಯಲೇನೂ
ಸುಂದರ ಗುರುಪದ ಮಂದಜಯುಗ ಮನೊ
ಮಂದಿರದಲಿ ತಾ ತಂದು ಭಜಿಪನಿಗೆ ೧

ಉದಯದಲಮರರ ನದಿಯಲಿ ಸ್ನಾನಕೆ
ಒದಗದೆ ಮಲಗಿರಲೇನೂ
ಮದನ ಕೇಳಿಯೊಳು ಸುದತಿಯ ಸಹಿತದಿ
ಮುದದಲಿ ಕುಳಿತಿರಲೇನೂ
ಕದನದ ವಾರ್ತೆಯ ವದನದಲ್ಯಾಡುತ
ಮದಕವ ಮಾಡಿದರೇನೂ
ಸದಮಲ ಗುರುಪದ ಪದುಮವ ತನ್ನಯ
ಹೃದಯದೊಳಗೆ ಬಲು ಮುದದಲಿ ಭಜಿಪನಿಗೆ ೨

ಅನ್ಯರ ಮನೆಯಲಿ ಮನ್ನಣೆ ದಿನ ದಿನ
ಘನ್ನವಾಗಿ ಮಾಡಿದರೇನೂ
ಭಿನ್ನಮನದಿ ಜನರನ್ಯಾಯದಿ ಬಲು
ಬನ್ನ ನುಡಿಯಾಡಿದರೇನೂ
ತನ್ನಯ ಸತಿಸುತರನ್ಯರ ವಚನದಿ
ತನ್ನನು ಲೆಕ್ಕಿಸದಿರಲೇನೂ
ಘನ್ನ ಗುರುಜಗನ್ನಾಥವಿಠಲನ
ಸನ್ನುತಿಪ ಗುರುರನ್ನ ಚರಗೆ ೩

## ೧೪೧

ರಥವಾನೇರಿದ ಯತಿವರನ್ಯಾರೇ ಪೇಳಮ್ಮಯ್ಯಾ ಪ

ವಿತತ ಮಹಿಮಾ – ನತಜನರನತಿ
ಹಿತದಿ ಪಾಲಿಸುವ – ಅತುಲ ಮಹಿಮ ಕಾಣಮ್ಮ ಅ.ಪ

ಧರೆಯೊಳು ವೈಭವದಿಂದಲಿ
ಮೆರೆಯುವನ್ಯಾರೆ ಪೇಳಮ್ಮಯ್ಯಾ
ಪರಮಾದ್ಭುತ ಚರಿಯವ ಮಾಡುತ
ಸರಿಯಿಲ್ಲದಿರುವನ್ಯಾರೇ ಪೇಳಮ್ಮಯ್ಯಾ
ಸ್ಮರಿಸುವ ಭಕುತರ ಪರಿ –
ಪರಿ ಸಲಹುವನ್ಯಾರೇ ಪೇಳಮ್ಮಯ್ಯಾ
ಹರಿಭಕ್ತಾಗ್ರಣಿ ಎನಿಪ ಯತಿಕುಲ
ಗುರುವರ ರಾಘವೇಂದ್ರ ಕಾಣಮ್ಮಾ ೧

ಸ್ತುತಿಸುವ ಜನರಿಗೆ ಸತಿಸುತ ಸಂಪದ –
ವತಿಶಯ ನೀಡುವನ್ಯಾರೇ ಪೇಳಮ್ಮಯ್ಯಾ
ಮತಿರಹಿತರಿಗೆ ಸುಮತಿಯ ನೀಡುವನ –
ದ್ಭುತ ಮಹಿಮನು ಯಾರೇ ಪೇಳಮ್ಮಯ್ಯಾ
ಇತರ ದಿವಿಜರಿಗಸಾಧ್ಯವೆನಿಸುವ
ಅತುಲ ಪರಕ್ರಾಮನ್ಯಾರೇ ಪೇಳಮ್ಮಯ್ಯಾ
ಭೂತಳಜನನಾಥನೆನಿಸಿ ಮಹಾ –
ಭೂತಿದಾಯಕ ರಾಘವೇಂದ್ರ ಕಾಣಮ್ಮಾ ೨

ಭೂತಳ ಜನರ ವ್ರಾತಕೆ ನಿಜಸುಖ
ದಾತನು ಯ್ಯಾರೇ ಪೇಳಮ್ಮಯ್ಯಾ
ಭೂತಪ್ರೇತ ಪಿಶಾಚ ಸುಮಹ –
ದ್ಭೀತಿಯ ಬಿಡಿಸುವನ್ಯಾರೇ ಪೇಳಮ್ಮಯ್ಯಾ
ಪಾತಕವನುಕುಲ ವೀತಿಹೋತ್ರ ಸುಖ

ವ್ರಾತದ ನೆನಿಸುವನ್ಯಾರೇ ಪೇಳಮ್ಮಯ್ಯಾ
ದಾತಗುರು ಜಗನ್ನಾಥವಿಠಲ ಪದ
ದೂತನೆನಿಪ ಗುರುರಾಯ ಕಾಣಮ್ಮ ೩

## ೧೪೨

ರಾಘವೇಂದ್ರರಾಯಾ
ಈಗ ಕಾಯೋ ಎನ್ನ ಜೀಯಾ ಪ

ನಿಜಾಕುಮುದ ಚಂದ್ರಾ ಸಾಂದ್ರಾ
ಭಜಾಮಿ ಯತಿ ಇಂದ್ರಾ ತಂದ್ರಾ
ತ್ಯಜಾನೆಗೈಸಿ ಎನ್ನ – ನಿಜಾಮನದಿ ಪಾದ
ಭಜಾನೆಗೈವಂತೆ – ನಿಜಾಮನವನಿತ್ತು ೧

ದುರಾಳಸಂಗದಿಂದಾ ನೊಂದಾ
ತರಾಳ ಭವದಿಂದಾ ಬೆಂದಾ
ಮರೂಳು ಭವದೊಳು – ಉರೂಳುತೀಪರಿ
ತರಾಳೆ ಸಂಗದಿ ಮನ – ಮರೂಳುಗೊಂಡೆನೊ ೨

ದಾತಾ ನೀನೆ ಎನ್ನಾ ಇನ್ನಾ
ಮಾತೂ ಲಾಲಿಸೊ ಘನ್ನಾ ಚನ್ನಾ
ತಾತಾ ಗುರು ಜಗನ್ನಾಥಾ ವಿಠಲ ಪಾದ
ಪಾಥೋಜ ಮನ ನಿಕೇತನದಲಿ ತೋರಿ ೩

## ೧೪೩

ರಾಘವೇಂದ್ರ ಕೃಪಾ – ಸಾಗರ ಜನ. – ಪಾ –
ಪೌಘ ದೂರ ತೇ ನಮೋನಮೋ ಪ

ಮಾಗಧರಿಪು ಮತಸಾಗರ ಝಷ ಸಮಾ –
ಮೋಘ ಮಹಿಮ ತೇ ನಮೋ ನಮೋ ಅ.ಪ

ದಾರಿತ ಪರಮತ ವಾರಣ ತತಿ ಪರಿ –
ಪೂರಿತ ಕರುಣಾಸಾಗರ ನಮೋ ನಮೋ
ವಾರಿತ ತಮ, ಸ್ವೀಕಾರಿತ ಹರಿಮತ
ಧಾರುಣಿ ಸುರವರ, ಧೀರ ನಮೋ ೧.

ಸಾಧಿತ ರಘುವರ, ಬೋಧಿತ ಭಿದಮತ
ಬಾಧಿತ ಪರರ ವಿವಾದ ನಮೋ
ಶೋಧಿತ ಹರಿಮತ, ಮೋದಿತಸುರ, ಸಂ –
ಪಾದಿತ ಹರಿಪದ, ದೇವ ನಮೋ ೨

ಸೇವಿತ ಯದುವರ, ಪಾವಿತ ನಿಜಜನ
ಶ್ರಾವಿತ ಹರಿಕಥ ಪಾಲಯ ಮಾಂ
ಕೋವಿದ ಕುಲ ಸಂಭಾವಿತ, ನಿಜಜನ
ಜೀವಪ್ರದ, ಹೇ ಪಾಲಯ ಮಾಂ ೩

ಕಾಮಿತ ಚಿಂತಾಮಣಿ ನಿಭ ತ್ವಂ
ಕಾಮದುಹೋಪಮ ಪಾಲಯ ಮಾಂ
ಸಾಮವೇದ್ಯ ಶ್ರೀರಾಮನ ಪದಯುಗ
ತಾಮರಾಸಾಲಿಯೆ ಪಾಲಯ ಮಾಂ ೪

ಪಾತಕವನಕುಲ ವೀತಿಹೋತ್ರನಿಭ,
ತಾತ ! ಪಾಲಿತ ನಿಜದೂತ ನಮೋ
ದಾತ ಗುರುಜಗನ್ನಾಥ ವಿಠಲ ಪದ
ಪಾಥೋಜ ಭ್ರಮರ ತೇ ನಮೋ ನಮೋ ೫

## ೧೪೪

ರಾಘವೇಂದ್ರ ಗುರುರಾಯಾ ನೀ
ವೇಗದಿ ಪಿಡಿ ಎನ್ನ ಕೈಯ್ಯಾ ಪ

ಆಗಾಮಿ ಸಂಚಿತ ಭೋಗಗಳುಳ್ಳ ಭವ –
ಸಾಗರದಲ್ಲಿ ಬಿದ್ದೆ ವೇಗದಿ ನೀ ಬಂದು ಅ.ಪ

ಭಾವ ದ್ರವ್ಯ ಕ್ರಿಯಾದ್ವೈತ ಇದರನು –
ಭಾವವ ತಿಳಿಯದೆ ನಿರುತ
ಸೇವಿಪ ಸಂತತ ಈ ವಿಧ ನರರನು
ದೇವರೆಂದನುದಿನ ಭಾವಿಸಿದೆನ್ನನು ೧

ಅಶನ ವಸನಕಾಗಿ ನಾ ಪರ
ವಶದೊಳು ಶಿರಬಾಗಿ
ಅಸಮ ನಿನ್ನಯ ಪಾದ ಬಿಸಜ ಭಜಿಸದೆ
ವಸುಮತಿಯೊಳು ಬಲು ಹಸನಗೆಟ್ಟೆನ್ನನು ೨

ಶಿರಿವರ ಗುರುಜಗನ್ನಾಥಾ ವಿಠಲನ
ಪರಿಸರ ವರನಾಥಾ
ಸರಿಎನಿಸಿದ ನಿನ್ನ ಪರಿಚರರೊಳು ಎನ್ನ
ಸರಿಯನೀಸೀಪರಿ ಧೆರೆಯೊಳು ಪಾಲಿಸು ೩

## ೧೪೫

ರಾಘವೇಂದ್ರಾ ನೀನೆ ಪಾಲಿಸೊ ಶ್ರಿತಜನ – ಪಾಲಾ
ಯೋಗಿಜನಾ – ಲೋಲನೆ ಪ

ಜಾಗುಮಾಡದೆ ನಿನ್ನಾನು – ರಾಗದಿ ಮನಸಾರ
ಬಾಗಿ ನಮಿಸಿ ಬೇಡಿಕೊಂಬೆ –
ಯೋಗಿಕುಲ ಶಿರೋಮಣಿಯೇ ಅ.ಪ

ಅನುದಿನದಲ್ಲಿ ನಾನು । ಘನವಿಪತ್ತುಗಳನ್ನು
ಅನುಭವ ಮಾಡಿದೆನು । ಘನ ಮಹಿಮನೆ ನಿನ್ನ
ಘನ ಸುಖವಿತ್ತು ಎನ್ನ । ಮನ ಪೂರ್ತಿ ಭಜಿಸುವಂತೆ
ಅನುಪಮ ಜ್ಞಾನ – ಭಕ್ತಿ । ಜನುಮ ಜನುಮದಿ ಇತ್ತು ೧

ಹೇಸಿ – ಸಂಸಾರದಲ್ಲಿ । ಮೋಸಗೊಂಡು ಅದರ ಸುಖ
ಲೇಶಗಾಣದೆ ಬಹು । ಕ್ಲೇಶಬಡುವೆನಯ್ಯಾ ನಿತ್ಯಾ
ಈಶ ! ಸಂಸಾರ ಮಹ । ಪಾಶಬಿಡಿಸಿ ತವೋ –
ಪಾಸನದಲ್ಲಿ ಮನ । ಲೇಸು ಇತ್ತು ನಿತ್ಯಾದಲ್ಲಿ ೨

ಎಷ್ಟು ದಿನ ಭವದೊಳು । ಕಷ್ಟಾಬಡುತ ಜ್ಞಾನ
ಭ್ರಷ್ಟನಾಗಿ ಈ । ಸೃಷ್ಟಿಯೊಳಗೆ
ದೃಷ್ಟಿಯಿಂದ ನೋಡಿ ನಿನ್ನಾ ಮುಟ್ಟಿ ಭಜಿಸುವೊ ದಿವ್ಯಾ
ದೃಷ್ಟಿ ಇತ್ತು ಗುರುಜಗನ್ನಾಥ । ವಿಠಲನ್ನ ತೊರಿಸಯ್ಯಾ ೩

## ೧೪೬

ರಾಘವೇಂದ್ರಾ – ಸದ್ಗುಣಸಾಂದ್ರಾ ಪ

ರಾಘವೇಂದ್ರಾ ಅನು – ರಾಗದಿ ಭಕ್ತರ
ರೋಗವ ಕಳೆದು ಸು – ಭೋಗವ ಸಲಿಸೋ ಅ.ಪ

ಧೀಮಂತರಿಗತಿ – ಕಾಮಿತವೀವೊ
ಶ್ರೀಮಂತನೆ ಎನ – ಕಾಮಿತ ಸಲಿಸೋ ೧

ಆಪದ್ಬಾಂಧವ – ಕೋಪವ ಮಾಡದೆ
ನೀ ಪಾಲಿಸೋ ಎನ್ನ – ಪಾಪವ ನೋಡದೆ ೨

ಅನ್ಯನಲ್ಲವೊ – ನಿನ್ನ ಸುಭಕ್ತನು
ಮನ್ನಿಸಿ ದಯದಿ ನೀ – ಎನ್ನನು ಕಾಯೋ ೩

ಜನ್ಯನ ಜನಕನು – ಮನ್ನಿಸದಿರಲು
ಅನ್ಯರು ಕಾಯ್ವರನನ್ಯಪಾಲಕನೇ ೪

ಈಶನು ನೀನ್ಯೆ – ದಾಸನು ಎನ್ನನು –
ದಾಶಿನ ಮಾಡದೆ – ಪೋಷಿಸಿ ಪೊರೆಯೈ ೫

ಎಂದಿಗೆ ನಿನ್ನನು - ಪೊಂದುವೆ ಗುರುವರ
ತಂದೆಯೆ ತೋರಿಸೋ - ಮುಂದಿನ ಗತಿಯಾ ೬

ಪೋತನು ನಾನ್ಯೆ - ಮಾತನು ಲಾಲಿಸೊ
ನೀತ ಗುರುಜಗನ್ನಾಥ ವಿಠಲ ಪ್ರಿಯ ೭

## ೧೪೭

ರಾಯನೆಂದರೆ ಗುರು - ರಾಯ ಸದ್ಗುಣಗಣ
ಕಾಯ ಸುಜನ ಗೇಯ ಮಹರಾಯಾ ಪ

ಮಾಯಾ ಮಯ ಭವ ತೋಯ ನಿಧಿಯೊಳು
ಬಾಯಿ ಬಿಡುವೆನುಪಾಯದಿಂದಲಿ
ಕಾಯೋದಾತನೆ ನೋಯದಿಂದಲಿ
ಕಾಯೋ ಎನ್ನನು ಅ.ಪ

ನಿನ್ನಾ ನಂಬಿದ ಮಾನವಾ - ಭವದೀ
ಬನ್ನಾ ಬಡದೆ ತಾನಿರುವಾ
ಘನ್ನಾ ಮಹಿಮಾ ಪಾ -ವನ್ನ ತವಪಾದಾ
ಮನ್ನಾದೊಳಗೆ ನಿತ್ಯಾ - ಚನ್ನಾಗಿ ಭಜಿಸುತ
ಧನ್ಯನೆನಿಸುವ - ಹೊನ್ನು ಹಣಗಳೂ
ನಿನ್ನ ಇಚ್ಛೇಲಿ ತಾವೆ ಬಪ್ಪುವು
ಘನ್ನ ಮಹಿಮನೇ - ನಿನ್ನ ನಂಬಿದೆ
ಎನ್ನ ಪಾಲಿಸ - ನನ್ಯರಕ್ಷಕ ೧

ಅನ್ನಾ ವಸನವಿಲ್ಲದೆ - ನಿತ್ಯಾ
ಅನ್ಯಾರ ಬೇಡಿಸೊದಿದೇ
ಘನ್ನಾತೆ ನಿನಗಿದ - ನನ್ಯ ಭಕ್ತನ ಪರ -
ರನ್ನಕ್ಕೆ ಗುರಿಮಾಡಿ - ಬನ್ನ ಬಡಿಸಿದರೆನ್ನ

ನಿನ್ನ ಸೇವಕ – ನಿನ್ನ ಪೂಜಕ –
ನಿನ್ನ ಧ್ಯಾನವ – ಮನ್ನದಿಂದಾ
ನಿನ್ನ ತ್ಯಜಿಸಿ – ಅನ್ಯ ದೈವರ – ಮನ್ನಿಸೆನೋ
ಪಾ – ವನ್ನ ಮೂರುತಿ ೨

ಹೊಟ್ಟೆಗೋಸುಗ ದೇಶಾ ತಿರುಗಿ – ದೇಹಾ
ಕೆಟ್ಟು ಪೋಗಿಹದೋ ಹೀಗಾಗೀ
ಎಷ್ಟು ಪೇಳಲಿ ಎನ್ನ – ದುಷ್ಟ ಬುದ್ಧಿಲಿ ಜ್ಞಾನ
ನಷ್ಟವಾಗಲಿ ಬಹು – ಭ್ರಷ್ಟಮಾರ್ಗವ ಸೇರಿ
ದುಷ್ಟಮತಿಯಲಿ – ಶಿಷ್ಟದ್ವೇಷವ
ಕಟ್ಟಿ – ಕಾದಿದೆ – ನಷ್ಟ ತಿಳಿಯದೆ
ಕೆಟ್ಟು – ಪೋಗುವೆ ಥಟ್ಟನೆ ನೀ ಪೊರಿ
ಧಿಟ್ಟಾ ಗುರುಜಗನ್ನಾಥ ವಿಠಲದೂತಾ ೩

## ೧೪೮

ರಾಯರ ಪದಯುಗ ತೋಯಜವಿರಲೆಮ
ರಾಯನ ಭಯವಿಲ್ಲ ಮನಕೆ ಪ

ಹೇಯ ಸಂಸಾರೆಂಬ ತೋಯಧಿ ದಾಟಿಸಿ
ಶ್ರೇಯಸ್ಸು ಸೌಖ್ಯವ ನೀಡೋದು ಜನಕೆ ಅ.ಪ

ಸ್ನಾನ ಸಂಧ್ಯಾ ಜಪ ಧ್ಯಾನ ಮೌನವ ಬಿಟ್ಟು
ನಾನಾವೆಸನದೊಳಗಿರುತಿರಲು
ಏನೇನು ವಿಧ ವಿಧ ಮಾನಾಪಮಾನವು
ಹಾನಿ ವೃದ್ಧಿ ಲಾಭಾಲಾಭವೇನು
ನೀನೆ ನೀಡುವಿ ಎಂಬ ಜ್ಞಾನ ದಿಂ –
ದನು ಸಂಧಾನ ಮಾಡುತಲಿಪ್ಪನರಗೆ ೧

ಸತಿ ಸುತ ಹಿತಜನ ವಿತತ ವೃತ್ತಿ ಕ್ಷೇತ್ರ
ಮಿತಿಯಿಲ್ಲ ಸೌಭಾಗ್ಯವತಿಶಯದಿ
ಪತಿತರ ಸಂಗದಿ ಮತಿಗೆಟ್ಟು ತಾಪರ
ಸತಿರಿಯರಿಗೊಲಿದು ಅನುದಿನದಿ
ಸ್ತುತಿನತಿ ಶ್ರೀಹರಿ ಕಥೆಗಳ ಕೇಳದೆ
ವ್ರತನೇಮ ನಿರಾಹಾರ ತ್ಯಜಿಸಿ
ಸತತ ಮಾಡುವಕರ್ಮತತಿಗಳ ಗುರುಪಾದ
ವ್ರತತೀಜ ಯುಗಕೀವ ಮತಿಯುಳ್ಳ ನರಗೆ ೨

ದಾತನಾಗದೆ ಪರಘಾತಕ ತಾನಾಗಿ
ಪಾತಕ ಕರ್ಮವ ಮಾಡಲೇನು
ರೀತಿಯಿಲ್ಲದೆ ಬಹು ಮಾತುಗಳಾಡುತ
ಜಾತಿಕುಲಾಚಾರ ತ್ಯಜಿಸಲೇನು
ಯಾತನಮಯ ಭವ ಪಾಥೋನಿಧಿಯೊಳ
ಗೀತೆರದಲಿ ಮುಳುಗಿರಲೇನು
ನೀತ ಗುರು ಜಗನ್ನಾಥವಿಠಲಗತಿ
ಪ್ರೀತನಾದ ಗುರು ದೂತನಾದವಗೆ ೩

## ೧೪೯

ರಾಯರ ನೋಡಿರೈ ಶುಭತಮ ಕಾಯರ ಪಾಡಿರೈ ಪ

ತೋಯಜ – ಪತಿ ನಾರಾಯಣ ಪದಯುಗ
ಭೃಂಗಾ – ಭಕ್ತಕೃಪಾಂಗಾ ಅ.ಪ

ಸುಂದರ ಮುಖ, ಅರವಿಂದ ಲೋಚನ, ಘ್ರಾಣ
ಕುಂದಕುಡ್ಮಲ ಸಮರದನ, ರಾಜಿತ ವದನ,
ಮಂದಸ್ಮಿತಯುತ ದ್ವಂದ್ವ ಓಷ್ಠ, ಶ್ರುತಿ
ಛಂದವಾಗಿಹ ಚುಬುಕಾ, ಫಾಲದಿ ತಿಲಕಾ
ಕಂಧರಯುತ ಪೂರಂದರ – ಕರಿಕರ

ಛಂದವಾಗಿಹ ಬಾಹುಯುಗಳಾ ಮಾಲಾಂಕಿತ ಕೊರಳಾ
ಇಂದಿರಾಪತಿ ನಿಜಮಂದಿರವೆನಿಸುವ
ಸುಂದರ ಹೃದಯದಿ ನಾಮಾ ಹಚ್ಚಿಹ ಪ್ರೇಮಾ ೧

ಹಸ್ತದಿ ರಾಜಿಪ ಪುಸ್ತಕ ಮಣಿಮಾಲಾ
ಸ್ವಸ್ತಿಕಾಸನ - ಸ್ಥಿತ - ಮೋದ ಕೃತವಿನೋದ
ಮಸ್ತಕದಿಂದಲಿ ವಿಸ್ತೃತಕಾಷಾಯ
ವಸ್ತ್ರದಿ ಶೋಭಿಪ ಗಾತ್ರ ಶುಭಚರಿತ್ರ
ಸ್ವಸ್ಥ ಮನದಿ ಪ್ರಶಸ್ತ ಹರಿಯ ಪಾದ
ಸ್ವಿಸ್ತಿಕ - ಯುಗಳ - ಧ್ಯಾನ ಮಾಡುವ ಜ್ಞಾನ
ಧ್ವಸ್ತದೋಷ ಸಮಸ್ತ ಜಗತ್ತಿಗೆ
ಸ್ವಸ್ತಿದನೆನಿಸಿದ ಭೂಪಾ ಭವ್ಯ ಪ್ರತಾಪ ೨

ಕುಟಿಲ ವಿಮತರ ಪಟಲಾಂಧಕಾರಕೆ
ಪಟುತರ ದಿನಮಣಿ ರೂಪಾ ನಿಜ ಜನ -ಸುರಪಾ
ಸ್ಫುಟ ಮೋದತೀರ್ಥರ ಸ್ಫಟಿಕ ಜಲಧಿಯೊಳು
ಸ್ಫುಟಿತ - ಹಾಟಕ - ಚಂದ್ರಾ ಸದ್ಗುಣ ಸಾಂದ್ರ
ಶಠಮಾಳ್ಪರ ಬಲು ಹಟದಿ ಶಿಕ್ಷಿಸುವ
ಚಟುಲ ಜನರ ಪರಿಪಾಲಾ ಕರುಣವಿಶಾಲಾ
ಕಿಟಿರದ - ಭವ - ನದಿ - ತಟ -
ಕೃತ - ಮಂದಿರ
ಧಿಟ ಗುರುಜಗನ್ನಾಥಾ ವಿಠಲ ದೂತಾ ೩

## ೧೫೦

ವೃಂದಾವನದಲಿ ನಿಂದು ರಾಜಿಪನ್ಯಾರೆ ಪೇಳಮ್ಮಯ್ಯ ಪ

ಬಂದ ಜನರಘ - ವೃಂದ ತಳೆದು ಅ -
ನಂದವಕೊಡುವೊ ರಾಘವೇಂದ್ರ ಕಾಣಮ್ಮ ಅ.ಪ

ನತಿಸುವ ಜನರನ ಹಿತದಲಿ ಪಾಲಿಪನ್ಯಾರೇ ಪೇಳಮ್ಮಯ್ಯ
ಸತಿಯರು ಬೇಡಲು ಸುತರನ ನೀಡುವನ್ಯಾರೇ ಪೇಳಮ್ಮಯ್ಯ
ಮತಿರಹಿತರಿಗೆ ಶುಭ ಮತಿಯನು
ನೀಡುವನ್ಯಾರೇ ಪೇಳಮ್ಮಯ್ಯ
ಪತಿತಪಾವನ ಶ್ರೀಪತಿ ಕರುಣದಲಿ
ವಿತತ ಮಹಿಮ ಗುರುವರ್ಯ ಕಾಣಮ್ಮ ೧

ಕುಷ್ಟರೋಗಗಳ ನಷ್ಟಮಾಡುವನ್ಯಾರೇ ಪೇಳಮ್ಮಯ್ಯ
ದೃಷ್ಟಿಹೀನರಿಗೆ ಶುಭದೃಷ್ಟಿಯ ನೀಡುವನ್ಯಾರೇ ಪೇಳಮ್ಮಯ್ಯ
ಅಷ್ಟ ದಾರಿದ್ರ್ಯತಿ ಕಷ್ಟವ ತಿರೆಯುವನ್ಯಾರೇ ಪೇಳಮ್ಮಯ್ಯ
ಶಿಷ್ಟಜನರೊಳತಿ ಶ್ರೇಷ್ಠನೆನಿಸಿ
ಸೃಷ್ಟಿ ಜನಗಳಿಗಭೀಷ್ಟವ ನೀತಮ್ಮಾ ೨

ಭೂತಪ್ರೇತಗಳ ಭೀತಿಯ ಬಡಿಸುವನ್ಯಾರೇ ಪೇಳಮ್ಮಯ್ಯ
ಮಾತಪಿತರ ತೆರ ದೂತರ ಪಾಲಿಪನ್ಯಾರೇ ಪೇಳಮ್ಮಯ್ಯ
ನೀತ ಮಹಿಮೆಯನೀತೆರ ತೋರುವನ್ಯಾರೇ ಪೇಳಮ್ಮಯ್ಯ
ದಾತ ಗುರುಜಗನ್ನಾಥವಿಠಲಗತಿ
ಪ್ರೀತಿಕರ ಯತಿನಾಥ ಕಾಣಮ್ಮ ೩

೧೫೧ Repeated

ವೃಂದಾವನದಲಿ ನಿಂದು ರಾಜಿಪನ್ಯಾರೇ ಪೇಳಮ್ಮಯ್ಯ ಪ

ಬಂದ ಜನರಘ ವೃಂದ ಕಳೆದು ಆ –
ನಂದವಕೊಡುವೊ ರಾಘವೇಂದ್ರ ಕಾಣಮ್ಮ ಅ.ಪ

ನತಿಸುವ ಜನರನ ಹಿತದಲಿ ಪಾಲಿಸಿ
ವಿತತರ ಮಾಡುವನ್ಯಾರೇ ಪೇಳಮ್ಮಯ್ಯ
ಸುತರನ ಬೇಡುವ ಸತಿಯರಿಗೊಲಿದೂ
ಸುತರನ ನೀಡುವನ್ಯಾರೇ ಪೇಳಮ್ಮಯ್ಯ

ಮತಿಹೀನರಿಗತಿ ಮತಿಯನು ನೀಡುತ -
ಲತಿಶಯ ಮೆರೆಯುವನ್ಯಾರೇ ಪೇಳಮ್ಮಯ್ಯ
ವಿತತ ಮಹಿಮ ಶ್ರೀಪತಿ ಕರುಣದಲಿ
ಅತುಲ ನೆನಿಪ ಗುರುರಾಯ ಕಾಣಮ್ಮ ೧

ಕುಷ್ಟ ಮೊದಲತಿ ಶ್ರೇಷ್ಠ ರೋಗವ
ನಷ್ಟ ಮಾಡುವನ್ಯಾರೇ ಪೇಳಮ್ಮಯ್ಯ
ಅಷ್ಟದಾರಿದ್ರ್ಯತಿ ಕಷ್ಟ ತರಿದು
ತೃಷ್ಟರ ಮಾಡುವನ್ಯಾರೇ ಪೇಳಮ್ಮಯ್ಯ
ದೃಷ್ಟಿ ರಹಿತರಿಗೆ ಸುದೃಷ್ಟಿಯನಿತ್ತು
ಶ್ರೇಷ್ಠನೆನಿಸಿಹನ್ಯಾರೇ ಪೇಳಮ್ಮಯ್ಯ
ಸೃಷ್ಟಿಯೊಳಗೆ ತಾಭೀಷ್ಟವ ನೀಡುತ
ಇಷ್ಟನಾದ ಗುರುರಾಯ ಕಾಣಮ್ಮ ೨

ಭೂತಪ್ರೇತಗಳ ವ್ರಾತವ ನಳಿದು
ಪ್ರೀತಿಯ ಬಡಿಸುವನ್ಯಾರೇ ಪೇಳಮ್ಮಯ್ಯ
ಮಾತಪಿತರ ತೆರ ದೂತರ ಪಾಲಿಸಿ
ಖ್ಯಾತನಾಗಿಹನ್ಯಾರೇ ಪೇಳಮ್ಮಯ್ಯ
ಈತೆರ ಮಹಿಮೆಯ ನೀತದಿ ತೋರಿಪ
ನೀತನಾವ ಸುರನು ಪೇಳಮ್ಮಯ್ಯ
ದಾತ ಗುರು ಜಗನ್ನಾಥವಿಠಲಗತಿ
ಪ್ರೀತಿಕರ ಶುಭರಾಯ ನೀತಮ್ಮ ೩

## ೧೫೨

ವೃಂದಾವನದಲಿ ನಿಂತ ಸುಯತಿವರನ್ಯಾರೇ ಪೇಳಮ್ಮಯ್ಯ ಪ

ವಂದಿಪ ಜನರಿಗೆ ನಂದ ಕೊಡುವೊ ರಾಘ -
ವೇಂದ್ರ ಮುನಿವರನೀತ ನೋಡಮ್ಮ ಅ.ಪ

ಇಂದಿರೆ ರಮಣನ ಛಂದದಿ ಭಜಿಸ್ಯಾ –
ನಂದದಲಿಹನ್ಯಾರೇ ಪೇಳಮ್ಮಯ್ಯಾ
ನಂದತೀರ್ಥಮತ ಸಿಂಧುವರಕೆ ಬಾಲ –
ಚಂದಿರನೆನಿಸಿಹನ್ಯಾರೇ ಪೇಳಮ್ಮಯ್ಯ
ಮಂದಜನವ ಹರಿ ಕಂದುಗೊರಳರ
ವೃಂದದಿ ಶೋಬಿಪನ್ಯಾರೆ ಪೇಳಮ್ಮಯ್ಯ
ಹಿಂದೆ ವ್ಯಾಸಮುನಿ ಎಂದು ಕರೆಸಿದ ರಾಘ –
ವೇಂದ್ರ ಗುರುವರ – ಈತ ನೋಡಮ್ಮ ೧

ನತಿಸುವ ಜನರಿಗೆ ಸತಿಸುತರನು ಬಲು
ಹಿತದಲಿ ನೀಡುವನ್ಯಾರೇ ಪೇಳಮ್ಮಯ್ಯ
ಪ್ರತಿದಿನ ತನ್ನನು ಮತಿಪೂರ್ವಕ ಬಲು
ತುತಿಪರ ಪಾಲಿಪನ್ಯಾರೇ ಪೇಳಮ್ಮಯ್ಯ
ಮತಿಯುತ ಪಂಡಿತ ತತಿಯಭಿಲಾಷವ
ಸತತ ಪೂರ್ತಿಪನ್ಯಾರೇ ಪೇಳಮ್ಮಯ್ಯ
ಕ್ಷಿತಿಸುರರಿಗೆ ಸದ್ಗತಿದಾಯಕ ಮಹ
ಯತಿಕುಲವರ ಗುರುರಾಯ ಕಾಣಮ್ಮ ೨

ಮಾತೆಯು ಸುತರಲಿ ಪ್ರೀತಿಗೊಳಿಸುವ
ತಾತನ – ತೆರದಿಹನ್ಯಾರೇ ಪೇಳಮ್ಮಯ್ಯ
ಪ್ರೇತನಾಥ ಮಹ ಭೂತಗಣಗಳ
ಭೀತಿಯ ಬಿಡಿಸುವನ್ಯಾರೆ ಪೇಳಮ್ಮಯ್ಯ
ಭೂತಳ ಜನಕೃತ ಪಾತಕ ಕಾನನ
ವೀತಿಹೋತ್ರತೆರನ್ಯಾರೇ ಪೇಳಮ್ಮಯ್ಯ
ದಾತ ಗುರು ಜಗನ್ನಾಥವಿಠಲ ನಿಜ
ದೂತ ಜನಕ ಮಹದಾತನೀತಮ್ಮ ೩

## ೧೫೩

ಶರಣಜನರ ಕಲ್ಪತರುವೆ ನಿನ್ನ
ಕರುಣಾದಿ ಪೊರಿ ಎನ್ನ ಗುರುವೇ ಪ

ಶರಣರಿಲ್ಲದೆ ಕರುಣಿಸೆಂದು
ಶರಣು ಪೊಕ್ಕೆನೊ ಚರಣ ಕಮಲಕೆ
ಶರಣೆಂದೂ ಕರುಣದಿಂದಲಿ
ಕರುಣಿಸೆನ್ನನು ಕರುಣಸಾಗರ ಅ.ಪ

ತಾಪತ್ರಯದಿ ಬಹುಬೆಂದೇ ಭವ -
ಕೂಪಾರದೊಳಗತಿ ನೊಂದೇ
ಪಾಪಮೋಚಕ ನಿಷ್ಪಾಪಿ - ಜನರ ಪಾಲ
ಕಾಪಾಡೊ ನೀ ಎನ್ನ ಅಪಾರ ಮಹಿಮನೆ
ದ್ವಾಪರದಿ ಯದುವರನು ಸಾಂ -
ದೀಪಪುತ್ರನ ತೋರಿ ಕಾಯ್ದನು
ಭೂಪ ಬಕನಳಿದು ಸಲಹಿದ -
ನಾಪರಿಯಲಿ ಎನ್ನಸಲಹೋ ೧

ಕಾಮಿತ - ಫಲದ ನೀನೆಂದೂ ಬಲು -
ಪ್ರೇಮಾದಿ ಬಳಿಗೆ ನಾ ಬಂದೂ
ಸ್ವಾಮಿ ನೀ ಗುರುಸಾರ್ವಭೌಮ ನಿನ್ನಂಘ್ರಿಯುಗ -
ತಾಮರಸವ ಮನೋ - ಧಾಮಾದಿ ನಿಲಿಸೆಂದೆ
ರಾಮ ಕೌಶಿಕ ಮಖವ ಕಾಯ್ದನು
ಭೀಮ ವಿಪ್ರರ ಭೀತಿ ಬಿಡಿಸಿದ
ಧೂಮಕೇತನನುಂಡು ಕೃಷ್ಣನು
ಆಮಹದ್ಭಯ ಕಳದ ತೆರದಿ ೨

ತಾತ ನಿನ್ನನು ಬಾಧೆ ಬಡಿಸೇ ಶಿರಿ -
ನಾಥ ತಾ ಬಂದಾಗ ಬಿಡಿಸೆ

ದಾತ ಗುರುಜಗನ್ನಾಥ ವಿಠಲನತಿ
ಪ್ರೀತಿಯಿಂದಲಿ ನಿನ್ನ ಮಾತು ಕೇಳಿದತೆರ
ಮಾತು ಲಾಲಿಸಿ ಕಾಯೋ ಯತಿಕುಲ –
ನಾಥ ಎನ್ನಪರಾಧ ನೋಡದೆ
ಭೀತಿಯನು ಸದೆದು ಪಾಲಿಸ –
ನಾಥರಕ್ಷಕನಲ್ಲೆ ಗುರುವರ ೩

## ೧೫೪

ಶರಣಜನರ ತನ್ನ ಕರುಣದಿಂದಲಿ ಕಾಯ್ವ
ಕರುಣಾಸಾಗರನ ನೋಡಿರೈ ಪ

ತರುಣಾರ್ಕನಿಭ ಸುಪರಣವಾಹನ ಗುಣ –
ವರಣನ ಮಾಡುವ ಕರ್ಣಹೀನಾಂಶನ ಅ.ಪ

ನಾನಾವಿಧದ ಫಲ ದಾನಮಾಡುವ ಸುರ –
ಧೇನು ನಿನಗೆ ಸೋತು ಪೋಯಿತಯ್ಯಾ
ಮಾನನಿಧಿಯೆ ಎನ್ನ ನೀನೆ ಕಾ –
ಯೆನುತನುರಾಗದಿ ನಂಬಿದೆ
ನಿನ್ನ ಸೇವದಿ ರತನ । ಮಾಡೊ ಯೋಗಾದೀ
ನಾ ನಿನ್ನ ಪದಕಭಿನಮಿಸಿ ಬೇಡವೆನಯ್ಯ ಮಹರಾಯಾ
ಕರಪಿಡಿದು ಕಾಯೋ ನೀ ಎನ್ನ ಗುರುರಾಯಾ
ಹೀನ ಭವದೋಳು ಬಾಯಿ ಬಿಡುವೆ
ನಾನಯ್ಯ ಇದಕೇನುಪಾಯಾ
ನೀನೆ ಚಿಂತಿಸೊ ಸಂತರೊಡೆಯನೆ
ನಾನು ಬಲ್ಲೆನೆ ಮೂಢಮಾನವ
ದೀನ – ಜನ – ಮಂದಾರ – ಶಾಶ್ವತ
ದಾನಿ ನಿನಪದಧ್ಯಾನ ಮಾಡಿಸೋ ೧

ಸೇವಕ – ಜನರನ್ನ ಕಾವೋನೀತನು ಎಂಬೊ
ಭಾವಪೂರ್ವಕ ನಿನ್ನ ಸೇವಿಪೆನೋ
ಅವಕಾಲದಲಿಂದ ತವ ಪಾದಧ್ಯಾನವ
ಭಾವಿಸಿದ್ಯನ ಕಾರ್ಯ ಮಾಡುವ
ಕರುಣದಲೆನ್ನನೋಡುವ । ಸೇವಕನಿಷ್ಟ ನೀಡುವಾ
ನೀನಿರಲು ನಿತ್ಯ ಆವ ಭಯ ಎನಗೇನು ಇಲ್ಲಾ
ನಂಬಿದರೆ ಕೈ ಬಿಟ್ಟು ಪೋಗುವವ ನೀನಲ್ಲಾ
ದೇವ ದಾನವರಂಜಿಕೆಯು ಎನಗಿಲ್ಲಾ ।
ಈ ಮಾತು ಪುಶಿಯಲ್ಲಾ ।
ಜೀವರುತ್ತಮ ಮುಖ್ಯವಾಯು
ದೇವನಾವೇಶದಿಂದಲಿ
ದೇವ ಭಾವವನ್ಯೆದಿ ಲೋಕದಿ
ಈ ವಿಧದಿ ಮಹಿಮವ ತೋರಿ ಮೆರೆವ ೨

ಪಾತಕವನಕುಲ – ವೀತಿಹೋತ್ರನು ಎನಿಸೀ
ದೂತಜನರಘ ದೂರಗೈಸುವಿ
ದಾತ ಗುರು ಜಗನ್ನಾಥ ವಿಠಲಗತಿ
ಪ್ರೀತನಾಗಿ ಮೆರೆವೋ ದಾತನು
ಎನಗೆ ನಿಜಜೀಯಾನೋ ದೂತಜನಕತಿ ಪ್ರೀಯಾನೊ
ತಾನೆನಿಸಿ ವೀತಭಯ ಭೂತಾದಿ ಭಾಧ ಕಳೆವಾ
ಸತಿಯರಿಗೆ ತಾ ಸುತರನ್ನ ಕೊಡುವಾ
ಈತ ನೀಡುವನಹಿಕ ಪರಲೋಕ ಸುಖವಾ
ಇದು ಸರ್ವ ಸಮ್ಮತವೊ
ಜಾತರೂಪ ಸುಶಯ್ಯ ತನಯ
ದೂತನಾದವಗೇನು ಭಯ ನಿ –
ರ್ಭೀತನಾಗಿದ್ದೆಲ್ಲ ಕಾರ್ಯವ –
ನೀತೆರದಿ ತಾ ಮಾಡುತಿರುವಾ ೩

## ೧೫೫

ಶರಣು ಶ್ರೀ ಗುರು ರಾಘವೇಂದ್ರಗೆ
ಶರಣು ಭಕುತಸುರೇಂದ್ರಗೆ
ಶರಣು ಶರಣರ ಪೊರೆವ ಕರುಣಿಗೆ
ಶರಣು ಸುರವರಧೇನುಗೆ ಪ

ಮಧ್ವಮತ ಶುಭವಾರ್ಧಿ ಚಂದ್ರಗೆ
ಸಿದ್ಧಸಾಧನ ಮೂರ್ತಿಗೆ
ಬದ್ಧ ಶ್ರೀಹರಿ ದ್ವೇಷಿ ಮಾಯಿಗಳ
ಗೆದ್ದ ರಘುಕುಲ ರಾಮದೂತಗೆ ೧

ನಿತ್ಯ ನಿರ್ಮಲ ಪುಣ್ಯಗಾತ್ರಗೆ
ಭೃತ್ಯಜನ ಪರಿಪಾಲಗೆ
ಸತ್ಯ ಸಂಕಲ್ಪಾನುಸಾರದಿ
ನಿತ್ಯ ಕರ್ಮವ ಮಾಳ್ಪ ಧೊರಿಗೆ ೨

ಪಾತಕಾಂಬುಧಿ ಕುಂಭಸಂಭವ
ಅರ್ತಜನ ಪರಿಪಾಲಗೆ
ದಾತ ಗುರು ಜಗನ್ನಾಥವಿಠಲನ
ಪ್ರೀತ ಸುಖಮಯ ದಾತಯತಿಗೆ ೩

## ೧೫೬

ಶರಣು ಶ್ರೀ ಗುರುರಾಘವೇಂದ್ರಗೆ
ಶರಣು ಯತಿಕುಲ ತಿಲಕಗೆ
ಶರಣು ಶರಣರ ಪೊರೆವ ಕರುಣಿಗೆ
ಶರಣು ಹರಿಗುಣ – ಲೋಲಗೆ ಪ

ಮೋದತೀರ್ಥ ಮತಾಬ್ಧಿ ಚಂದ್ರಗೆ
ಬಾಧಿತಾದ್ವೈತಾಂಧಕಾರಗೆ
ಮೋದಿತಾಮರ ನಿಕರ ಕಮಲಗೆ
ಅದೀತೇಯನ ತೆರದಿ ಮೆರೆವಗೆ ೧

ನಿತ್ಯ ನಿರ್ಮಲ ಪುಣ್ಯಗಾತ್ರಗೆ
ಭೃತ್ಯಪಾಲಕ ಸುಗುಣ ಪಾತ್ರಗೆ
ಸತ್ಯಜ್ಞಾನ ಸುಮೋದ ನೇತ್ರಗೆ
ಸ್ತುತ್ಯಯತಿವರ ಸುಜನ ಮಿತ್ರಗೆ ೨

ಮೋದದಾಯಕ ಭೇದಸಾಧಕ
ಮೇದಿನೀಸುರ ಜಾಲ ನಾಯಕ
ಮೋದತೀರ್ಥರ ಚರಣ ಸೇವಕ
ಆದಿಗುರು ಜಗನ್ನಾಥ ವಿಠಲಗೆ ೩

## ೧೫೭

ಶ್ರೀ ಗುರುವರ ! ಮಾಂ ಪಾಲಯ ಭೋ !
ಶ್ರೀ ಗುರುವರ ! ಮಾಂ ಪಾಲಯ ಭೋ ! ಪ

ದೀನಂ ತ್ವತ್ಪಧಧೀನಂ ಸದ್ಗುಣ ಹೀನಂ
ಮಾಂ ಪಾಲಯ ಭೋ ! ಅ.ಪ

ಆರ್ತಿಂಹರ, ಭವ – ವಾರ್ತಿಂ, ತವ ಸಂ –
ಕೀರ್ತನಂ ದಿಶ ಸದಾ ಕರುಣಾಕರ ! ಭೋ ! ೧

ರುದ್ಧಂ, ಭವಗುಣ – ಬದ್ಧಂ, ಜನಸುವಿ –
ರುದ್ಧಂ, ಗುರೋ ! ಮಾ – ಮುದ್ಧರ ಭೋ ! ೨

ಮಗ್ನಂ, ಸ್ತ್ರೀ ಸುತ – ಲಗ್ನಂ, ತ್ವತ್ಪದ
ಲಗ್ನಂ, ಕುರು ಕರುಣಾಕರ ಭೋ ! ೩

ಪುತ್ರಂ, ಸಜ್ಜನ – ಮಿತ್ರಂ, ತ್ವದ್ಗುಣ –
ಚಿತ್ರಂ ಜ್ಞಾಪಯ ಶತ್ರುಹ ! ಭೋ ! ೪

ಹೀನಂ, ದುರ್ಗುಣ – ಮಾನಿಂ, ತ್ವದ್ಗುಣ
ಜ್ಞಾನಿಂ ಕುರು ಕರುಣಾಕರ ಭೋ ! ೫

ಭಕ್ತಂ, ಸಜ್ಜನ – ಸಕ್ತಂ, ವಿಷಯ ವಿ –
ರಕ್ತಂ ಕುರು ಕರುಣಾಕರ ಭೋ ! ೬

ದೂತಂ, ಭವ ಭಯ – ಭೀತಂ ಸದ್ಗುಣ
ಖ್ಯಾತಂ, ಯತಿವರ ! ಕರು ಮಾಂ ಭೋ ! ೭

ಪೋತಂ, ಶ್ರುತಿ ಸ್ಮೃತ್ಯ – ದೀತಂ, ಪಾಪ ವಿ –

ಧೂತಂ ಕುರು ಸತ್ವರ ಮಾಂ ಭೋ ! ೮

ದಾಸಂ, ಸ್ತ್ರೀಕರ ವಾಸಂ – ತ್ವತ್ಸಹ –
ವಾಸಂ ಸಂದಿಶ ಸಂತತ ಭೋ ! ೯

ಮೂಢಂ, ಭವನಿಧಿ –ಗಾಢಂ, ತ್ವತ್ಪದ
ರೂಢಂ, ಗುರುವರ ! ಕುರು ಮಾಂ ಭೋ ! ೧೦

ಚಾರಂ, ನಿರ್ಗತ – ಸಾರಂ, ಬಂಧವಿ
ದೂರಂ ಕುರು ಕರುಣಾರ್ಣವ ! ಭೋ ೧೧

ಬಾಲಂ, ತ್ವದ್ಗುಣ – ಶೀಲಂ, ತತ್ಪದ
ಲೋಲಂ ಕುರು ತ್ವಂ ಕುರು ಮಾಂ ಭೋ ! ೧೨

ಪೋತಂ, ಸ್ವಾಮ್ಯವ – ಧೂತಂ , ವಿಸ್ತುತ –
ಖ್ಯಾತಿಂ ಕಾರಯ ಕಾರಯ ಭೋ ! ೧೩

ವ್ಯರ್ಥಂ, ದಾಪಯ – ಮೇರ್ಥಂ, ಕುರು ಸುಕೃ –
ತಾರ್ಥಂ ಯತಿವರ ! ಮಾಮವ ಭೋ ! ೧೪

ದಾತಾ ಗುರುಜಗ – ನ್ನಾಥಾ ವಿಠಲ
ದೂತಾಗ್ರೇಸರ ಪಾಲಯ ಭೋ ! ೧೫

## ೧೫೮

ಶ್ರೀ ರಾಘವೇಂದ್ರರಾಯ – ಎನ್ನ – ಭವ
ಭಾರ ನಿನ್ನದೊ ಜೀಯ್ಯಾ
ದೂರನೋಡದಲೀಗ ಕೈಯಾ – ಪಿಡಿದು ನೀ
ಸಾರೆಗರಿಯೋ ಸೂರಿಧ್ಯೇಯಾ ೧

ನಿನ್ಹೊರತು ಗತಿಯಾರೊ ಎನಗೆ – ಈಗ
ನಿನ್ನನೇ ತೋರಯ್ಯ ಎನಗೆ
ಬಿನ್ನಪವ ಮಾಳ್ಪೆ ನಾ ನಿನಗೆ – ಭವದಿ
ಬನ್ನಬಡುವವನ ನೋಡಿ ಹೀಗೆ ೨

ಈಸು ವತ್ಸರ ವ್ಯರ್ಥ ಕಳದೆ – ನಾನಿನ್ನ
ದಾಸನಾಗದೆ ಭವದಿ ಮೆರೆದೆ
ಈಶ ನೀನೆಂಬುದನು ಮರೆದೆ – ಬಹು
ಕ್ಲೇಶಬಟ್ಟೀಪರಿಯಲುಳದೆ ೩

ಗುರುವರನೆ ನಿನ್ನಂಘ್ರಿಕಮಲ ಯುಗಕೆ ನಾ
ಕರಮುಗಿದು ಬೇಡಿದೆನೊ ವಿಮಲಾ
ಸರಸ ವಿಜ್ಞಾನಭಕುತಿನೇಮಾ – ನೀನಿತ್ತು
ಪೊರೆಯೊ ನೀ ಭಕ್ತವತ್ಸಲ ೪

ಎನು ಕರುಣಾನಿಧಿಯೊ ನೀನು – ಜಗದೊಳಗೆ
ದೀನ ಜನರುದ್ಧಾರಿಯೋ ನೀನು
ಸಾನುರಾಗದಿ ಭಜಿಪೆ ನಾನು – ತವಚರಣ
ಧ್ಯಾನ ಪಾಲಿಪದೀಗ ನೀನು ೫

ವಿಷಯಾಸೆ ಬಿಡಿಸೊ ಸ್ವಾಮಿ ಎನಗೆ ತಾ
ವಿಷಯ ಪತಿಯ ಸಲಿಸೊ ಪ್ರೇಮಿ
ಕೃಷಿಯಾದಿ ಸತಿ–ಸುತರ ಪ್ರೇಮಿ – ಎನಿಸಿ
ತೃಷೆಯಗೊಂಡೆನೊ ಅಂತರಯಾಮಿ ೬

ನರರ ಯಾಚನೆ ಮಾಡಸಲ್ಲ – ದೇಶವನು
ತಿರು ತಿರುಗಿ ನಾ ಬಂದೆನಲ್ಲ
ಪರಿ ಪರಿಯ ಭವಣೆ ಸುಳ್ಳಾಗದಲ್ಲ – ಸರ್ವಜ್ಞ
ಸರ್ವ ನೀ ತಿಳಿದಿರುವಿಯಲ್ಲ ೭

ನೀಚಜನ ಮನೆ ಮನೆಗೆ ಪೋಗಿ – ನಾನು
ಯಾಚಿಸಿದೆ ನಾಚಿಕೆಯ ನೀಗಿ
ಯೋಚನಿಲ್ಲದೆ ನಾನು ಕೂಗಿ – ಈಗ!
ನೀಚನಾದೆನೊ ಕಾಯೋ ಪರಮಯೋಗಿ ೮

ಶೇಷಾದ್ರಿನಿಲಯ ವಾಸ – ಪದದೂತ
ದೋಷರಾಶಿಯ ತರಿಯಲೀಶಾ
ವಾಸವಾಗೆಲೊ ಮನದಿ ತೋಷ – ಪೊರೈಸೊ
ದಾಸಜನಪ್ರಿಯ ಯೋಗೀಶಾ ೯

ದುಷ್ಟ ಜನ ತತಿಯ ಸಂಗ – ಬಿಡಿಸಿ
ಶಿಷ್ಟ ಜನರಂಗಸಂಗ
ಇಷ್ಟು ಪಾಲಿಸ್ಯನ್ನಂತರಂಗ – ದೊಳಗೆ
ತುಷ್ಟನಾಗಿರು ನೀನೆ ಕರುಣಾಪಾಂಗ ೧೦

ಪೋತ ನಾ ನಿನಗಲ್ಲೆ ಜೀಯಾ – ಎನಗೆ
ತಾತ ನೀನೆಂಬೊ ಮಾತು ಖರಿಯ
ಮಾತು ಲಾಲಿಪುದು ನಿನ್ನ ಕ್ರಿಯ – ಗುರುಜಗ
ನ್ನಾಥ ವಿಠಲಗೆ ನೀನೆ ಪ್ರಿಯ ೧೧

## ೧೫೯

ಶೇಷಾಂಶ ಪ್ರಹ್ಲಾದರಾಯಾ ಎನ್ನ
ದೋಷ ಎಣಿಸದೆ ಕಾಯೊ ಜೀಯಾ ಪ

ಕಂಡ ಕಂಡವರ ಭಜಿಸೀ –ಬೇಡಿ
ಬೆಂಡಾದೆ ನಿನ್ನಂಘ್ರಿ ತ್ಯಜಿಸೀ
ತೋಂಡವತ್ಸಲ ಕರುಣೆ ಸಲಿಸೀ ಪಾದ
ಪುಂಡರೀಕ್ಯನ್ನೊಳಗೆ ಇರಿಸಿಕಾಯೋ ೧

ಮಾಡಬಾರದ ಕೃತ್ಯವಾ – ನಾ ಬಲು
ಮಾಡಿದೆ ಗೃಹ ಕೃತ್ಯವಾ
ಬೇಡದಕಿ ಭೃತ್ಯತ್ವವಾ – ಈ ದೋಷ
ನೋಡದಲೆ ಭಕ್ತತ್ವವಾ ನೀಡೊ ೨

ದೀನ ಜನಪಾಲ ನಿನ್ನಾ – ರೂಪ
ಧೇನಿಸದೆ ಮಾನಿನಿಯರನ್ನಾ
ಧ್ಯಾನ ಮಾಡಿದೆ ಬಿಡದೆ ಘನ್ನಾ – ಗತಿ
ಎನು ಪೇಳಯ್ಯಾ ಎನಗೆ ಮುನ್ನಾ ಸ್ವಾಮಿ ೩

ಗುರುರಾಘವೇಂದ್ರರಾಯ – ಎನ್ನ
ಕರದು ಕೈಪಿಡಿಯೊ ಮಹರಾಯ
ತರಿಯೊ ಪಾತಕವೆನ್ನ ಜೀಯಾ
ಶರಣು ಪೊಕ್ಕೆನೊ ನಿನಗೆ ನಾನಯ್ಯಾ ಕರುಣೀ ೪

ಮಾತ ಪಿತ ಭ್ರಾತ್ರ ಬಂಧೂ – ಎನಗೆ
ನೀತಗತಿಕುಲ ಗೋತ್ರವೆಂದೂ
ದಾತ ನಿನ್ನ ದೂತನೆಂದೂ – ಬಂದ –
ನಾಥನನು ನೀ ಕಾಯುವುದು ಪ್ರಭುವೇ ೫

ಕರುಣಸಾಗರನೆ ಈಗ – ತವರೂಪ
ಸ್ಮರಣೆ ನೀಡೆನಗೆ ಬ್ಯಾಗಾ
ಶರಣು ಪೊಕ್ಕವನ ವೇಗಾ – ಭವ –
ಅರಣ ದಾಟಿಸುವಂಥ ಯೋಗಾ ಪೇಳಿ ೬

ಹೋಗುತಿದೆ ಹೊತ್ತು ಪದುಮಾಕ್ಷ –ಹ್ಯಾಗೆ
ಆಗುವದೊ ನಿನ್ನ ಅಪರೋಕ್ಷ
ಬಾಗಿ ಬೇಡುವೆ ಕಲ್ಪವೃಕ್ಷ ಸುರಧೇನೊ
ಜಾಗುಮಾಡದೆ ಸಲಿಸ್ಯನ್ನಪೇಕ್ಷಾ ಸ್ವಾಮಿ ೭

ಧೀರ ಗುರುರಾಜ ಕೇಳೋ ಎನ್ನ
ಪಾರ ದೋಷಗಳನ್ನೆ ತಾಳೋ
ಘೋರ ಅಜ್ಞಾನ ಕೀಳೋ – ಪರಲೋಕ
ಸೇರಿಸೆನ್ನನು ಕೃಪಾಳೋ ಸ್ವಾಮಿ ೮

ಎಷ್ಟು ಪೇಳಲಿ ಎನ್ನ ತಾತಾ – ಕೃಪಾ –
ದೃಷ್ಟಿಯಲಿ ನೋಡು ನಾನಿನ್ನ ಪೋತಾ
ಧಿಟ್ಟ ನೀ ಗುರು ಜಗನ್ನಾಥಾ – ವಿಠಲನ
ನಿನ್ನೊಳಗೆ ತೋರೋ ದಾತಾ ಖ್ಯಾತಾ ೯

## ೧೬೦

ಸ್ವಸ್ತೀ ಶ್ರೀ ಜಯಮಂಗಳಂ
ಸ್ವಸ್ಥ ಚಿತ್ತದಿ ಹರಿಯ ಭಜಿಪಗೆ
ಹಸ್ತಿ ವರದನ ದಾಸವರ್ಯಗೆ

ಹಸ್ತದಿಂದಖಿಳಾರ್ಥ ದಾತಗೆ
ಸ್ವಸ್ತಿಕರ ಗುರುರಾಘವೇಂದ್ರಗೆ ೧

ನತಿಪಜನ ಸುರಧೇನು ಎನಿಪಗೆ
ಸತತ ಸ್ವಾಶ್ರೀತ ಪಾಲಗೆ
ವಿತತ ಸನ್ಮತಿದಾತ ಖ್ಯಾತಗೆ
ತುತಿಪರನುದಿನ ಪೊರೆವೊ ನಾಥಗೆ ೨

ಪಾತಕಂಬುಧಿಕುಂಭಜಾತಗೆ
ಪಾತಕಾದ್ರಿ ಕುಲಿಶರೂಪಗೆ
ದಾತ ಗುರುಜಗನ್ನಾಥವಿಠಲ
ದೂತ ಜನಕತಿ ಪ್ರೀತಗೆ ೩

## ೧೬೧

ಸ್ವಾಮಿಲಾಲಿ ಭಕ್ತಪ್ರೇಮಿಲಾಲಿ
ಕಾಮದೆನಿಪ ಗುರುಸಾರ್ವಭೌಮ ಲಾಲಿ ಪ

ಇಂದ್ರ ಲಾಲಿ ರಾಘವೇಂದ್ರ ಲಾಲಿ ।
ಸಾಂದ್ರಭಕ್ತಕುಮುದ ಪೂರ್ಣಚಂದ್ರಲಾಲಿ ೧

ತರಣಿಲಾಲಿ ನಿಜ ಕರುಣಿ ಲಾಲಿ ।
ಶರಣ ಜನರ ಕಾಯ್ವ ಗುಣಪೂರ್ಣ ಲಾಲಿ ೨

ದೇವಲಾಲಿ ನಿಜಭಾವ ಲಾಲಿ ।
ಭಾವಿಸುವರ ನಿತ್ಯ ನೀ ಕಾವ ಲಾಲಿ ೩

ರಾಜ ಲಾಲಿ ಕಲ್ಪಭೂಜ ಲಾಲಿ
ರಾಜಿಸುವ ಯತಿಕುಲತೇಜ ಲಾಲಿ ೪

ದಾತ ಲಾಲಿ ನಿಜತಾತ ಲಾಲಿ
ಪ್ರೀತ ಗುರುಜಗನ್ನಾಥವಿಠಲದೂತ ಲಾಲಿ ೫

# ಹರಿದಾಸರು

## ೧೬೨

ರಂಗ ಒಲಿದ ದಾಸರಾಯರ – ಪಾದಪದುಮ

ಕಂಗಳಿಂದ ನೋಡಿದಾವರ – ಪಾಪಂಗಳೆಲ್ಲ
ಹಿಂಗಿಪೋಪವಲ್ಲೊ ಸತ್ವರಾ – ಏನು ಪೇಳಲಿವರಾ ಪ

ಮಂಗಳಾಂಗರಂಗನಿವರ ಅಂಗದೊಳಗೆ ನಿಂತು ಸದಾ
ತುಂಗ ಮಹಿಮೆ ತೋರಿ ಜನಕೆ
ಮಂಗಳಾವ ಕೊಡುವನಿಂಥಾ ಅ.ಪ

ಧರಣಿಸುರರ ಭಾವದಿಂದ ಧರಿಯ ತಳದಿ ಜನಿಸಿ ವಿಷ್ಣು
ಪರಮ ಭಕುತರೆನಿಸಿ ಸತತ –
ಹರುಷದಿಂದ ಕುಣಿದು ಕುಣಿದು
ಹರಿಯ ಮಹಿಮೆ ತುತಿಸಿ ಪಾಡುತಾ – ತಮ್ಮ ಮನದಿ
ಹರಿಯ ಮೂರ್ತಿಯನ್ನೇ ನೋಡುತಾ – ಸಾಧುಜನರ
ದುರಿತ ರಾಶಿ ದೂರಮಾಡುತಾ – ನಿತ್ಯದಲ್ಲಿ
ಹರುಷದಿಂದ ಸ್ತಂಭದೊಳಗೆ –
ಇರುವೆವೆಂಬ ಭಾವ ಜನಕೆ
ಅರುಹಿ ಜನರ ಈಪ್ಸಿತಾರ್ಥ ಕರೆದು ನೀಡಿ ಮೆರೆವೊರಿಂಥಾ ೧

ಪರಮತತ್ವ ಸಾರಪುಂಜ – ಹರಿಕಥಾಮೃತಸಾರ
ಹರುಷದಿಂದ ರಚಿಸಿ ಹರಿಯ –
ಚರಣ ಭಜಿಪ ಜನಕೆ ಉಣಿಸಿ
ಪರಮ – ಗೋಪ್ಯ – ಭಾವ ತಿಳಿಸಿದಾ –
ಸಾಧು ಕುಲಕೆ
ಅರಿಪು ಮಾಡಿರೆಂದು ಪೇಳಿದಾ – ಮೂಢ ಜನಕೆ
ದೊರೆಯದೆಂದು ತಾನು ಪೇಳಿದಾ – ತನ್ನ ಜನಕೆ

ಪರದ ಸೌಖ್ಯ ಗರೆವ ಬಿಂಬ
ಕುರುಹು ನೋಳ್ಪ ಬಗೆಯ ಜನಕೆ
ಪರಮ ಸುಲಭ ತೋರಿ ಮುದದಿ
ಪರಿಪರಿಯಲಿ ಪೊರೆವೊರಿಂಥಾ ೨

ಧಾತನಾಂಡ - ಮಧ್ಯದಲ್ಲಿ ಜಾತರಾದ ಸ್ವೀಯ ಜನರ
ಮಾತೆ - ಜನಕರಂತೆ ಅವರ ಮಾತ
ನಡಸಿಕೊಡುವ ಜಗ -
ನ್ನಾಥವಿಠಲನೊಲಿದನೀತಗೆ - ಜಗದಿ ತಾನು
ಖ್ಯಾತಿ ಪಡೆದು ಇರುವನೀತಗೆ ಸಮಾನನೆಂಬ
ನಾಥನಾಮ ಕಾಣೆನೆಂದಿಗೆ - ದಾಸಜನಕೆ
ನಾಥರೆನಿಸಿ ಜಗದಿ ಮಹಾ - ದಾತರಾಗಿ ಸಕಲಭೀಷ್ಟ -
ವ್ರಾತ ಸಲಿಸಿ ಗುರು ಜಗ -ನ್ನಾಥದಾಸ
ವಿಠ್ಠಲ ಪ್ರೀತಿಗೊಳಿಪರಿಂಥಾ ೩

## ಶ್ರೀ ರಾಘವೇಂದ್ರರು

### ೧೬೨ ಅ

ಹರಿಯು ಉಂಡನ್ನ ನಮ್ಮ ಗುರುರಾಘವೇಂದ್ರರಿಗೆ
ಪರಮ ಭಕುತಿಯಿಂದ ಅರುಪಿಸೊ ಬಗೆಯನು
ಅರಿತು ನಿತ್ಯಾದಲ್ಲಿ ಪರಮಭಕುತರು ನೀಡೆ
ಪರಮಾದರಾದಲ್ಲಿ ಗುರು ಕೈಯ್ಯ ಕೊಂಬುವನು
ವರಯತಿಗನ್ನೋದಕ ಗಿರಿಸಾಗರ ಸಮವು
ಮರಳಿ ನೀಡೋದು ಜಲನಿರುತದಲ್ಲಿ
ವರಬ್ರಹ್ಮಚಾರಿಗಿಡೆ ಸರಿಯೆನಿಸುವೋದು ಫಲ
ವರಗೃಹಸ್ಥನಿಗಿತ್ತನ್ನ ಎರಡು ಎನಿಸುವೋದು
ವರವನಸ್ಥನಿಗಿಡೆ ವರಶತವೆನಿಸುವೋದು
ಪರಮಹಂಸರಿಗಿಡೆ ವರಅನಂತವಾಗುವದಯ್ಯ
ಅರಿತು ಈ ಪರಿಯಿಂದ ನಿರುತ ನೀಡುವೋದಯ್ಯ

ಗುರುಉಂಡ ಮನೆಯಲ್ಲಿ ಹರಿ ತಾನುಂಬುವೋನು
ಹರಿಉಂಡಸ್ಥಳದಲ್ಲಿ ವರಬ್ರಹ್ಮಾಂಡ ಉಂಬೋದು
ವರಶಾಸ್ತ್ರಸಿದ್ಧವಿದು ಗುರುವಂತರ್ಯಾಮಿ ನಮ್ಮ
ಗುರುಜಗನ್ನಾಥ ವಿಠಲ ಪರಮ ಹರುಷಬಡುವೋನು ೧

ಯತಿ ಹಸ್ತೇ ಜಲಂ ದದ್ಯಾತ್
ಭೈಕ್ಷ್ಯಂ ದದ್ಯಾತ್ ಪುನರ್ಜಲಂ
ತದನ್ನಂ ಮೇರುಣಾ ತುಲ್ಯಂ
ತಜ್ಜಲಂ ಸಾಗರೋಪಮಮ್
ವಟೌ ದತ್ತಂ ಸಮಂ ತತ್ಸ್ಯಾತ್
ಗ್ರಹಸ್ಥೆ ದ್ವಿಗುಣಂ ಭವೇತ್
ವಾನಪ್ರಸ್ಥೆ ಶತಗುಣಂ
ಯಾತೌ ದತ್ತಮನಂತಕಮ್
ಯತಿರ್ಯತ್ರ ಗೃಹೇ ಭುಂಕ್ತೇ
ತತ್ರಭುಂಕ್ತೇ ಹರಿಃ ಸ್ವಯಂ
ಹರಿರ್ಯತ್ರಗೃಹೇ ಭುಂಕ್ತೆ
ತತ್ರ ಭುಂಕ್ತೇ ಜಗತ್ರಯಮ್

ತಾಳ – ಅಟ್ಟ

ಅನ್ನ ಸಮಗ್ರದಲ್ಲಿ ಇಂದು ಕೇಶವ ಎನ್ನಿ
ಮುನ್ನೆ ಭಾರತಿ ಪರಮಾನ್ನ ನಾರಾಯಣ
ಇನ್ನು ಭಕ್ಷ್ಯಕೆ ಸೂರ್ಯ ರನ್ನ ಮಾಧವ ಘೃತಗೆ
ಚನ್ನೆ ಲಕ್ಷುಮಿ ಗೋವಿಂದನು ಎನ್ನಿ
ಮುನ್ನ ಕ್ಷೀರಕ್ಕೆ ವಾಣೀ ಅನ್ನಿ ವಿಷ್ಣುದೇವ
ಘನ್ನ ಮಂಡಿಗ್ಗೆ ಬ್ರಹ್ಮ ಇನ್ನು ಮಧುಘಾತಿ
ಬೆಣ್ಣೆಯಲ್ಲಿ ವಾಯು ಚೆನ್ನ ತ್ರಿವಿಕ್ರಮ
ಮುನ್ನ ಧಧೀಯಲ್ಲಿ ಸೋಮ ವರುಣ ವಾಮ
ನನ್ನ ತಿಳಿ ಸೂಪ ಚೆನ್ನ ವೀಪ ಶ್ರೀಧರ

ಮುನ್ನೆ ಶಾಖಾಪತ್ರ ಸ್ವನ್ನಗದಿರ ಮಿತ್ರ
ಚೆನ್ನ ಹೃಷಿಕೇಶ ಇನ್ನು ಫಲಾದಲಿ
ಘನ್ನ ಶೇಷಾನಲ್ಲಿ ರನ್ನ ಪದುಮನಾಭ
ಮುನ್ನೆ ಆಮ್ಲಾದಲ್ಲಿ ಸ್ವನ್ನಗೌರೀ ಅಲ್ಲಿ
ಅನ್ನು ದಾಮೋದರ ಅನ್ನಾಮ್ಲ ಪತಿರುದ್ರ
ಚೆನ್ನ ಜಯಾಪತಿ ಮುನ್ನೆ ಶರ್ಕರ ಶತ –
ಮನು ವಾಸುದೇವ ಘನ್ನ ಮಹಿಮಗುರು ಜ–
ಗನ್ನಾಥ ವಿಠಲ ಪಾವನ್ನ ಪದಯುಗ
ಮನ್ನದೊಳಗೆ ನೆನೆಸುತಿರು ೨

**ತಾಳ – ತ್ರಿವಿಡಿ**

ಪರಿಪರಿ ಉಪಸ್ಕಾರ ಪರಮೇಷ್ಠಿ ಪ್ರದ್ಯುಮ್ನ
ಅರಿವೋದು ಕಟು ಯಮ ವರ ಅನಿರುದ್ಧನ್ನ
ವರ ಇಂಗು ಸಾಸಿವಿ ಏಲ ಮರೀಚಿ
ಜೀರಿಗಿಯಲ್ಲಿ ಕರ್ಪೂರ ಚಂದನ ಕೇ –
ಶರ ಬಗೆ ಬಗೆ ವಿಧ ಪರಿಮಳ ದ್ರವ್ಯಕ್ಕೆ
ಸ್ಮರನು ಪುರುಷೋತ್ತಮ ದೇವನಿಪ್ಪ
ವರರಸ ಇತ್ಯಾದಿ ಘೃತ ತೈಲ ಪಕ್ವದಿ
ಇರುತಿಹ ಜಯಂತನಧೋಕ್ಷಜ ಮೂರುತಿ
ಸ್ಮರಿಸು ಕೂಷ್ಮಾಂಡ – ತಿಲ –
ಮಾಷ – ಸಂಡಿಗೆಯಲಿ
ವರದಕ್ಷನರಹರಿದೇವನ ನೆನಿಸು
ಇರುತಿಪ್ಪ ಮನು ಮಾಷಭಕ್ಷ ಅ –
ಧ್ವರ ಕಾರ್ಯಕಚ್ಯುತ ಮೂರುತಿಯೇ
ಸುರುಚಿಲವಣದಲ್ಲಿ ನಿರಋತಿಜನಾರ್ದನ
ಇರುತಿಹ ಶಾಖ ಫಲರಸಕೆ ಪ್ರಾಣೋಪೇಂದ್ರ
ಪರಮಪುರುಷ ದೇವನಿಹನೆಂದು ತಿಳಿವೋದು
ವರತಾಂಬೂಲ ಗಂಗಾ ಹರಿನಾಮಾನಿರುವೋನು

ವರಸ್ವಾದೋದಕದಲ್ಲಿ ಇರುತಿಪ್ಪ ಬುಧನಲ್ಲಿ
ಇರುತಿಹ ಕೃಷ್ಣದೇವ ಗುರುಜಗನ್ನಾಥ ವಿಠಲ –
ನರಿತು ನೀಡಲು ನಮ್ಮ ಗುರು ಕೈಯ್ಯ ಕೊಂಬೋನು ೩

ತಾಳ –ಅಟ್ಟ

ಒಂದೊಂದು ಕವಳ ಗೋವಿಂದನ್ನ ಸ್ಮರಿಸುತ್ತ
ಇಂದು ನಿಭಾ ಬಕ್ಷ್ಯ ಕವಳಕ್ಕೆ ಅಚ್ಯುತ –
ನೆಂದು ಶಾಖಕವಳ ಧನ್ವಂತ್ರಿ ಸ್ಮರಿಸುತ್ತ
ಮುಂದೆ ಪರಮಾನ್ನ ಒಂದೊಂದು ಕವಳಕ್ಕೆ
ಅಂದು ವಿಷ್ಣು ಪಾಂಡುರಂಗನ್ನ ಸ್ಮರಿಸುತ್ತ
ಕುಂದಿಲ್ಲದಾ ಬೆಣ್ಣೆ ಉಂಬುವೋ ಕಾಲದಲ್ಲಿ
ಸುಂದರ ಮೂರುತಿ ತಾಂಡವ ಕೃಷ್ಣನು
ಛಂದ ದಧ್ಯನ್ನ ಕವಳಕ್ಕೆ ಶ್ರೀನಿವಾಸಾ –
ನೆಂದು ಸುತೈಲಘೃತಪಕ್ವಕೆ ವೇಂಕಟ –
ನೆಂದು ಕದಲಿದ್ರಾಕ್ಷಿ ಖರ್ಜೂರ ದಾಡಿಮ
ಛಂದನಾರೀ ಕೇಳ ಜೂತ ಧಾತ್ರಿ ಜಂಬೂ
ಕಂದಮೂಲಫಲ ಭಕ್ಷಣ ಕಾಲಕ್ಕೆ
ನಂದನಂದನ ಬಾಲಕೃಷ್ಣನ ಸ್ಮರಿಸುತ್ತ –
ಲ್ಲಿಂದ ಜಲಪಾನದಲ್ಲಿ ವಿಷ್ಣುದೇವ
ನಿಂದ್ರಾದೆ ವರತಾಂಬೂಲ ಕವಳದಲ್ಲಿ
ಸುಂದರ ಪ್ರದ್ಯುಮ್ನ ದೇವನ ಸ್ಮರಿಸುತ್ತ
ಲ್ಲಿಂದ ಆಪೋಶನದ್ವಯದಲ್ಲಿ ವಾಯುಸ್ಥ
ಇಂದಿರಾರಮಣ ಮುಕುಂದನ ಧೇನಿಸಿ
ನಂದಾದಿ ಈ ರೀತಿ ಚಿಂತಿಸಿನೀಡಲು
ಸುಂದರ ಗುರುರಾಘವೇಂದ್ರಾಂತರ್ಗತ ನಮ್ಮ
ಇಂದಿರಾಪತಿ ಗುರುಜಗನ್ನಾಥ ವಿಠಲ ತಾ
ನಂದಾದಿ ಕೈಕೊಂಡು ಮನ್ನಿಸೆ ಪೊರೆವೋನು ೪

ತಾಳ - ಆದಿ

ಅರಿತು ಈರೀತಿಂದ ನಿರುತ ಹಸ್ತೋದಕ
ಗುರುಗಳಿಗರ್ಪಿಸೆ ತ್ವರಿತದಿ ಕೈಕೊಂಡು
ಪರಮಸುಖವಿತ್ತು ಪರಿಪಾಲಿಪರಿಹ -
ಪರದಲ್ಲಿ ಇವರಿಗೆ ಬರುವ ದುರಿತ
ತರಿದು ಪೊರೆವರು ಇಲ್ಲವೊ ಇವರನ್ನ ಬಿಟ್ಟರೆ
ಹರಿಯು ಅಲ್ಲವೆ ಮತ್ತನ್ಯರು ಆರ್‍ಯೆ
ಹರಿ ತಾ ಮುನಿಯೆ ಗುರುಗಳು ಕಾಯುವರು
ಗುರುಗಳು ಮುನಿಯೆ ಹರಿ ತಾ ಕಾಯನು
ವರಶಾಸ್ತ್ರ ಪುರಾಣವು ಪೇಳೋದು
ಗುರುವೆ ತಾಯಿ ತಂದೆ ಗುರುವೆ ಮಮದೈವ
ಗುರುವೆ ಪರಿವಾರ ಗುರುವೆ ಗತಿನಿತ್ಯ
ಗುರುವೆ ಪಾಲಿಸೆಂದು ಗುರುಗಳ ಭಜಿಸೆ
ಗುರುವು ದೊರೆತರೆ ಹರಿತಾ ದೊರೆವನು
ಗುರುವು ಮರೆತರೆ ಹರಿತಾ ಮರೆವನು
ಗುರಗಳ ಪಾದಶಿರದ ಪರಿಯಂತ ಸ್ಮರಿಸಲು ಪಾಪ
ಪರಿಹಾರವಾಗೋದು ಗುರುವಂತರ್ಗತ ನಮ್ಮ
ಗುರುಜಗನ್ನಾಥ ವಿಠಲ ಪರಮ ಹರುಷ ಬಡುವೋನು ೪

ಜತೆ

ಚಿಂತಿಸಿ ಪಥಾರ್ಥ ಇಂತು ನೀಡಲು ಗುರು -
ವಂತರ್ಗತ ಗುರುಜಗನ್ನಾಥವಿಠಲ ಕೊಂಬ

# ಶ್ರೀ ವರದೇಂದ್ರರು

## ೧೬೨ ಆ

ರಥವಾನೇರಿದಾ ಯತಿಕುಲನಾಥಾ ಸದ್ಗುಣ ವಿಖ್ಯಾತಾ ಪ

ವಿತತಸುಮಹಿಮಾ – ನತ – ಜನ – ತತಿ – ಕೃತ
ಸ್ತುತಿಗೆ ಒಲಿವ – ಯತಿ ವರದೇಂದ್ರಾ ಅ.ಪ

ಪತಿತಾ ಪಾವನ ತಾನೆನಿಸುತ ಮೆರವಾ –
ದುರಿತಗಳ ತರಿವಾ
ಅತಿಹಿತದಲಿ ಭಕುತರ ಕರಪಿಡಿವಾ –
ವರವನು ತಾ ಕೊಡುವಾ
ನುತಿಸುವ ಜನ – ತತಿ – ಗತಿಹಿತದಲಿ ಸೂ –
ಪಥವ ತೋರಿಸಿ ಸ –ದ್ಗತಿಯ ನೀಡುವೆನೆಂದು ೧

ದಶಮತಿ ಸಮಯಾಖ್ಯಾಬ್ಧಿಶಶಾಂಕಾ – ತಾನಿಹನಕಳಂಕ
ಅಸಮಾ ಮಹಿಮಾದಿ ಲೋಕದಿ ಮೆರೆವಾ
ಮನದಲಿ ತಾ ಪೊಳೆವಾ
ವಸುಧೀಂದ್ರರ ಕರ – ಬಿಸಜೋದ್ಭವ ತಾ
ವಸುಧಿಯನಾಳುವ – ಕುಸುಮದಳಾಂಬಕ ೨

ಧಾತಾಂಶರಿಂದಲಿ ತಾನುದ್ಭವಿಸೀ – ಸದ್ಗುರುವರನೆನಿಸಿ
ಧೂತ – ಪಾಪಾತ್ಮಕನು ತಾನಾಗೀ – ಶ್ರೀಹರಿಗೆ ಬೇಕಾಗಿ
ಪ್ರೀತಗುರು ಜಗನ್ನಾಥ ವಿಠಲನತಿ
ಪ್ರೀತಿಲಿ ಭಜಿಸುತ – ದೂತರ ಪೊರೆವಾ ೩

## ಶ್ರೀಧೀರೇಂದ್ರರು

### ೧೬೨ ಇ

ವರದಾತೀರದಿ ಶೋಭಿಪ ಯತಿವರನ್ಯಾರೇ
ನೋಡಮ್ಮಯ್ಯಾ ಪ

ತ್ವರದಿ ಭಕುತರ ದುರಿತವ ತರಿದತಿ
ತ್ವರದಿ ಪಾಲಿಪ ಶ್ರೀಧಿರೇಂದ್ರ ಕಾಣಮ್ಮ ಅ.ಪ

ಸುಂದರ ತಮವೃಂದಾವನ ಶುಭತರ
ಮಂದಿರಗತನ್ಯಾರೇ ನೋಡಮ್ಮಯ್ಯ
ನಂದದಿ ಮಹಜನಸಂದಣಿ ಮಧ್ಯದಿ
ಚಂದಿರ ತೆರದಿಹನ್ಯಾರೇ ನೋಡಮ್ಮಯ್ಯ
ಇಂದಿರಪತಿ – ಗುಣ – ವೃಂದವ ಭಜಿಸುತ
ನಂದಿದಿ ಶೋಭಿಪನ್ಯಾರೇ ಪೇಳಮ್ಮಯ್ಯಾ
ಅಂಧ ಬಧಿರರ ವೃಂದಗಳಿಗಿಷ್ಟವ
ನಿಂದು ನೀಡುವ ವಾದೀಂದ್ರರ ತನುಜ ೧

ಮೂಢ ಮತಿಯನು ಓಡಿಸಿ ಜನರಿಗೆ
ಗಾಢಭಕುತಿಯನು ನೋಡಮ್ಮಯ್ಯ
ನೀಡುವ, ಭಜಕರು ಮಾಡುವಸೇವೆಗೆ
ನೀಡುವ ವರಗಳನ್ಯಾರ್ಯೇ ನೋಡಮ್ಮಯ್ಯ
ಪಾಡುವದಾಸರು ಬೇಡುವ ಇಷ್ಟವ
ನೀಡುವದಿನ್ಯಾರೇ ಪೇಳಮ್ಮಯ್ಯಾ
ರೂಢಿಯೊಳಗೆ ಇಷ್ಟನೀಡುವ ವಿಷಯದಿ
ಜೋಡುಗಾಣೆ ನಾ ನೋಡಮ್ಮಯ್ಯ ೨

ಭೂತಪೀಡೆ ಮಹ ಪ್ರೇತಪಿಶಾಚಿಯ
ವ್ರಾತಗಳ ಬಲು ನೋಡಮ್ಮಯ್ಯ

ಭೀತಿಬಡುತ ಮಹ ಆತುರದಲಿ ಈ
ಭೂತಳ ಬಿಡುತಿಹವ್ಪೋ ನೋಡಮ್ಮಯ್ಯ
ಯಾತುಧಾನಗಣ ಈತನ ನಾಮದ
ಭೀತಿಗೆ ಪೋಗುತಿಹುದು ನೋಡಮ್ಮಯ್ಯ
ತಾತನ ತೆರದಲಿ ಈತನು ನಿಜಪದ
ದೂತರ ಪೊರೆವನು ನೋಡಮ್ಮಯ್ಯ
ದಾತಗುರು ಜಗನ್ನಾಥ ವಿಠಲಗೆ
ಪ್ರೀತ ಜನರೊಳತಿ ಪ್ರೀತನೀತಮ್ಮಾ

## ೧೬೩

ರಂಗ ಒಲಿದ ದಾಸರಾಯರ – ಪಾದಯುಗ್ಮ
ಕಂಗಳಿಂದ ನೋಡಿದಾವರ – ಪಾಪಂಗಳೆಲ್ಲ
ಹಿಂಗಿಪೋಪವಲ್ಲೊ ಸತ್ವರ – ಏನು ಪೇಳಲೀವರಾ ಪ

ಮಂಗಳಾಂಗರಂಗನಿವರ ಅಂಗದೊಳಗೆ ನಿಂತು ತಾನು
ತುಂಗ ಮಹಿಮೆ ತೋರಿ ಜನಕೆ
ಮಂಗಳಾವ ಕೊಡುವರಿಂಥಾ ಅ.ಪ

ಬ್ಯಾಗವಾಟನಾಮ ಗ್ರಾಮದಿ – ನಾರಸಿಂಹ
ಭಾಗವತರೆಂದು ನೇಮದಿ ರಂಗಮೂರ್ತಿ
ಯೋಗದಿಂದ ಭಜಿಸಿ ಪ್ರೇಮದಿ ಪಡಿಯೆ ಮಹಾ
ಯೋಗಿಭಾವಯ್ದಿದಿ ಜಗದಿ
ಭಾಗವತ ಆದಿ ಶಾಸ್ತ್ರ
ಭೋಗಿ ಶಯನ ಕರುಣದಿಂದ
ಜಾಗರೂಕ ಮಾಡಿ ಜನಕೆ
ಯೋಗಮಾರ್ಗ ತೋರಿ ಪೇಳುತ ಹರಿಕಥಾಮೃತಸಾರ
ಸಾಗರೋದ್ರೇಕಗೈಯುತ ದಾಸಜನಕೆ
ಭೋಗವಿತ್ತು ಲೇಸುಗೈಯುತ ವಿಶೇಷಮಹಿಮೆ
ಆಗ ಈಗ ಎನದೆ ಸದಾನುರಾಗ ತೋರುವಂಥ ೧

ಮುದದಿ ದಾಸ್ಯಭಾವದಿಂದಲಿ – ಜಗದಿ ಜನರ
ಹೃದಯ ಭಾವ ಪೂರ್ತಿಯಿಂದಲಿ – ಪ್ರೀತಿಗೈದು
ಪದುಮನಾಭನ ಪ್ರೀತಿಯಿಂದಲಿ – ಗುಣಗಳನ್ನು
ಪದಸು ಆದಿ ರೂಪದಿಂದ
ಭುಧರ ಮ್ಯಾಳ ಸಂಗದಿಂದ
ಪದದಿ ನರ್ತನಗೈದು ಬಹು
ಮುದದಿ ಮನವ ಧರಿಸಿ ನಿತ್ಯ
ಪದುಮನಾಭನ ಭಜನಿಗೈಯುತ – ತತ್ವಸಾರ
ವದನದಿಂದುಚ್ಚಾರ ಗೈಯುತ – ತೀರ್ಥಯಾತ್ರೆ
ಪದದಿ ಸಂಚಾರಮಾಡುತ ಎಪ್ಪತ್ತೇಳವರ್ಷ
ಮುದದಿ ಕಾಯ ಧರಿಸಿ ಹರಿಯ ಭಜನೆಗೈದು ಸುಖಿಸಿದಂಥ ೨

ಖ್ಯಾತ ಶುಕ್ಲ ಬಾದ್ರಪದದಿ ನವಮಿ ಜಗ –
ನ್ನಾಥ ವಿಠಲ ಪಾದ ಪದುಮದಿ ಮನವೆ ಮೊದಲು
ಧಾತ ತತ್ವಲಯಸುಚಿಂತದಿ ಯ್ಯೆದಿ ಪ್ರಾಣರ
ಭೂತಕಾಶಮಾರ್ಗ ಸಂಗದಿ – ಹೃದಯ ಮಂಡಲ
ಧಾತನಾಡಿ ಇಂದ ಭಾವಿ
ಧಾತನಿಂದ ಕೂಡಿ ವಿ –
ಧಾತ ಮಂಡಲ ದ್ವಾರದಿಂದ
ಧಾತನಾಂಡ ಭೇಧಿಸಿ ಗುರುಜಗ –
ನ್ನಾಥ ವಿಠಲ ಪಾದ ಪೊಂದಿದಾ – ಈತನಂಥ
ದಾತದಾವ ತನ್ನ ಪೊಂದಿದ ಜನಕೆ ಜ್ಞಾನ
ಆತುರಾದಿ ಕೊಡುವ ನಂದನ – ಏನು ಮಹಿಮೆ
ವಾತದೇವನ ನಿಜಾವೇಶದಿಂದ ಯುಕ್ತರಾದ ೩

## ಉಪದೇಶಾತ್ಮಕ ಪದಗಳು

### ೧೬೪

ನೀಚವೃತ್ತಿಯ ಬಿಟ್ಟು ಸೋಚಿತ ಕರ್ಮವನೇ
ಯೋಚನೆ ಮಾಡುತಾ ಪ

ನೀಚ ಜನರುನು ಯಾಚಿಸದೆ ಸವ್ಯ
ಸಾಚಿಯ ಸಖನ ಭಜಿಸೋ ಪ್ರಾಣೀ
ಸರಸ ಸಲ್ಲಾಪ ಶ್ರೀ ಹರಿಕಥಾ ಶ್ರವಣ ನೀ
ಪರಮಭಕ್ತರ ಸಂಗವಾ
ನಿರುತದಲಿ ನೀ ಮಾಡಿ ಹರುಷ ಮನವನು ತಾಳಿ
ಚರಿಸೊ ಈ ಧರಣಿ ಮಂಡಲಾ
ಅರಸಿಗಾದರು ಒಮ್ಮೆ ಶಿರಸುಬಾಗದಲೆ ಶ್ರೀ
ಹರಿದಾಸರಾ ಚರಣಕೆ
ಎರಗ್ಯವರ ಮನಿದ್ವಾರಪರಿಚರನು ಎಂದೆನಿಸಿ
ಭರದಿಂದ ಬಾಳಿ ಬದಕೋ ಇದಕೋ ೧

ಅಲ್ಪ ಆಶೆಯ ಮಾಡಿ ಅಲ್ಪ ಮಾನವನಾಗಿ
ಕಲ್ಪನೀಯನು ಮಾಡದೆ
ಸ್ವಲ್ಪ ಫಲದಲಿ ಮನಸು ಕಲ್ಪಿಸಿ ಪ್ರತಿದಿನವ
ನಲ್ಪ ಜನರನು ನಿಂದಿಸೀ
ಅಲ್ಪನಾರೇರು ಮಾಳ್ಪ ಒಲ್ಪಿಗೆ ಮರುಳಾಗಿ
ಪಲ್ಕಿಸಿದು ಬಾಯ್ದೆರೆಯದೆ
ಸ್ವಲ್ಪಗಾಲದಲಹಿತಲ್ಪ ಪದಪದುಮಗಳ ಕಿಂ –
ಜಲ್ಕ ನೀನಾಸ್ವಾದಿಸೋ ಲೇಸೋ ೨

ಪೊಡವಿ ಮೊದಲಾದ ಈ ಮಡದಿ ಮಕ್ಕಳು ಗೇಹ
ವಡವಿ ವಸನವ ಬಯಸದೆ
ಪೊಡವಿಮಂಡಲದಿ ಬಹು ಬಡವ ನಾನೆನುತಲೀ

ಪೊಡವಿ ಪಾಲರ ಸೇವೆಯಾ
ಧೃಢಮನದಿ ನೀ ಮಾಡೆ ಕೊಡರೊಂದು ದುಗ್ಗಾಣಿ
ಕಡುಮೂರ್ಖ ಎಲೊ ಪಾಪಿಯೇ
ಬಿಡದೆ ದೈನ್ಯದಿ ನೀನು ಜಡಜನಾಭನ ಪಾದ
ಬಿಡದೆ ಸೇವಿಸಲು ಫಲವ ಕೂಡುವಾ ೩

ನಾ ಮಾಡೋ ವ್ಯಾಪಾರ ನೀ ಮಾಡಿಸುವಿ ಎಂಬ
ಈ ಮಹಾಜ್ಞಾನ ಮಾರ್ಗ
ನೇಮವಾಗಿ ತಿಳಿದು ಗ್ರಾಮ ಗ್ರಾಮದಲ್ಲಿದ್ದ
ಪಾಮರೋತ್ತಮ ಜನರಿಗೆ
ಧಾಮನಾಗಿಹ ನಮ್ಮ ರಾಮದೇವನ ಪಾದ
ತಾಮರಸ ಕೊಂಡಾಡುತಾ
ಪ್ರೇಮ ಹರುಷಾಮರ್ಷ ಯಾಮಯಾಮಕೆ ಬರಲು
ಕಾಮಿಪುದು ನಿನಗೆ ಸಲ್ಲಾ ಖಿಲ್ಲಾ ೪

ನಗುವ ಜನರಾ ಕಂಡು ನಗುವುದೇ ಲೇಸೆಂದು
ಸಿಗದೆ ಜನರೊಳು ತಿರುಗುತಾ
ಬಗೆ ಬಗೆಯ ಮಾತುಗಳ ಬೊಗಳುವಾ ಜನರಿಗೆ
ಹಗಲಿರಳು ಹರಿ ಕಾಯಲೀ
ಜಗದಿ ಜೀವರು ಎಲ್ಲ ನಿಗಮ ವಂದಿತನ ಪ್ರತಿ
ಮೆಗಳು ಇವು ಎಂದು ತಿಳಿಯೇ
ನಗುತ ಹರುಷವ ಕೊಡುವ ಸುಗುಣಪೂರಣ ಗುರು
ಜಗನ್ನಾಥವಿಠಲರಾಯಾ ಮರೆಯಾ ೫

## ೧೬೫

ಪಾರ್ಥಸಖಿನ ನೀ ಪ್ರಾರ್ಥನೆ ಮಾಡಿಕೃ –
ತಾರ್ಥನಾಗೋ ಮನುಜಾ ಪ

ಸಾರ್ಥಕವಾಗದ ವಾರ್ತೆಯ ಕೇಳಲು
ಆರ್ತಿಯು ಒಪ್ಪುದೊ ನಿಜಾ ಅ.ಪ

ಏಕಾಂತದಿ ಶ್ರೀಕಾಂತನ ಭಜಿಸಲು
ಲೋಕಾಂತರ ಸುಖಪ್ರಾಪ್ತಿ
ಭೂಕಾಂತನ ಭಜಿಸಲು ಮಾಕಾಂತನು ಒಲಿಯನು
ಲೋಕಾಂತರ ನಿರಯಾಪ್ತಿ ೧

ಶಿರಿರಮಣನ ಪದಯುಗಳವ ಭಜಿಸಲು
ದೊರೆವೋದೀಗ ಮೋಕ್ಷ

ನರಜನ ಗುಣಗಳ ವರಣನೆ ಮಾಡಲು
ನಿರಯ ದುಃಖ ಪತ್ಯಕ್ಷ ೨

ವೀತ ದೋಷ ನಿರ್ಭೀತ ಗುರುಜಗ
ನ್ನಾಥ ವಿಠಲರೇಯ
ಮಾತು ಕೇಳೆ ನಿಜ ಮಾತೆಯ ತೆರದಲಿ
ದೂತನು ಪಿಡಿವನು ಕೈಯ್ಯಾ ೩

## ೧೬೬

ಮುಕ್ತನಾವನೋ ಜೀವನ್ಮುಕ್ತನಾವನೋ ಪ

ಮುಕ್ತನಾವನಿವರ ಪಾದಾಸಕ್ತನಾಗಿ ಸರ್ವಕರ್ಮ
ಭಕ್ತಿಯಿಂದ ನೀಡಿ ವಿಷಯಾಸಕ್ತನಾಗದವನಿಗಿನ್ನ ಅ.ಪ

ಉದಯಕಾಲದಲ್ಲಿ ಎದ್ದು ನದಿಯಸ್ನಾನಮಾಡಿ ಇವರ
ಪದುಮಸಮಪಾದಯುಗಳ ಹೃದಯದಲ್ಲಿ ಭಜಿಪಗಿನ್ನ ೧

ಮನಸುಮಾತುಕಾಯದಿಂದ ಮನಿಯು
ವನಿತೆ ಧಾನ್ಯ ಧನುವು
ತನಯ ಪ್ರಾಣ ಇವರ ಪಾದವನಜಕರ್ಪಿಸಿರುವಗಿನ್ನ ೨

ಊಟ ಕೂಟ ನೋಟಮಾಟ ಪಾಠ ಆಟ ಕಾಟ ಇವರ
ಆಟ ಎಂದು ವಿಷಯ ಉದಧಿ ದಾಟುವಾವಗಿನ್ನಮತ್ತೆ ೩

ಉಕ್ತ ಕರ್ಮದಲ್ಲಿ ಮನ ಸಕ್ತನಾಗಿ ಹರಿಯ ಪಾದ
ಭಕ್ತಿಯಿಂದ ಭಜಿಸಿ ಪಾಪಮುಕ್ತನಾಗುವವಗಿನ್ನ ೪

ಶಕ್ತಿ ಇದ್ದರೊಳಗೆ ಹರಿಯ ಭಕ್ತಜನರ ಭಜಿಸಿ ಸರ್ವೋ
ದ್ರಿಕ್ತ ವಿಭೂತಿ ಮನದಿ ವ್ಯಕ್ತಮಾಡಿದವಗಿನ್ನ ೫

ಮೋದತೀರ್ಥ ಶಾಸ್ತ್ರಸಾರ ಸ್ವಾದ ಮನದಿ ತಿಳಿದು ಅವರ
ಹಾದಿಹಿಡಿದು ಬುಧರ ದಿವ್ಯ ಪಾದಯುಗಳ ಭಜಿಪಗಿನ್ನ ೬

ಶಿರದಿ ಇದ್ದ ಹರಿಯ ರೂಪ ಅರಿದು ಮನಸಿನಿಂದ ನಿತ್ಯ
ಶಿರದಿ ಕಾರ್ಯಮಾಡಿ ತಾನು ಹಿರಿದು ಹಿಗ್ಗುವಗಿನ್ನ ೭

ನೇತ್ರಮೊದಲಾದ ಸರ್ವಗಾತ್ರದಲ್ಲಿ ಇರುವ ತೀರ್ಥ
ಕ್ಷೇತ್ರಮೂರ್ತಿ ತಿಳಿದು ತನ್ನ ಗಾತ್ರನಿರ್ಮಲ ಮಾಳ್ಪಗಿನ್ನ ೮

ಈಶ ಹರಿಯು ಸರ್ವ ಜೀವ ದಾಸರೆಂದು ತನ್ನ ಹೃದಯೋ
ಪಾಸನಾವ ಮಾಡಿ ವಿಷಯ ಆಶೆಬಿಟ್ಟು ಇರುವಗಿನ್ನ ೯

ಏನು ಮಾಳ್ಪ ಕರ್ಮವೆಲ್ಲ ಶ್ರೀನಿವಾಸ ಮಾಳ್ಪನೆಂದು
ಜ್ಞಾನದಿಂದ ಸರ್ವರಲ್ಲಿ ಧ್ಯಾನಮಾಳ್ಪ ಮನುಜಗಿನ್ನ ೧೦

ಶ್ವಾನ ಗೋವು ದ್ವಿಜ ಮತ್ತೆ ಅನಿ ಮೊದಲು ಸರ್ವರಲ್ಲಿ
ಜ್ಞಾನಗಮ್ಯ ತಾನು (ತಾನೆ) ಸಮಾನನೆಂದವಗಿನ್ನ ೧೧

ಕಲ್ಲು ಮಣ್ಣು ಹೊನ್ನು ಲೋಹ ಬಲ್ಲ
ಬೇವು ಅಮೃತ ವಿಷವು
ಎಲ್ಲ ಸ್ವಾದು ಸಮವೆಂದು ಅಲ್ಲಿ ಇಚ್ಛೇ ಮಾಡದವಗಿನ್ನ ೧೨

ಕರ್ತೃ ಕ್ರಿಯಾ ಕರ್ಮದೊಳು ಪತ್ರ ಪುಷ್ಪತೋಯ ಫಲದಿ
ವೃತ್ರಸೂದನನುಜ ಸರ್ವಕರ್ತೃ ಎಂಬವಗಿನ್ನ ೧೩

ನಾಥ ನೀನು ನಿನ್ನ ಪಾದ ದೂತ ನಾನು ಎಂದು ನಿತ್ಯ
ಪಾತಕಾರ್ಯ ಮಾಡಿದಾಗ್ಯು ಪೂತನೆನಿಪನವನಗಿನ್ನ ೧೪

ಸಿಟ್ಟು ಶೋಕ ಹರ್ಷ ಮೋಹ ಸುಟ್ಟು ಗುರುಜಗನ್ನಾಥ
ವಿಠಲನ್ನ ಭಜಿಸಿ ಜಗದಿ ಶಿಷ್ಟ ನಾಗಿರುವಗಿನ್ನ ೧೫

## ೧೬೭

ವಾಸುದೇವನ ಗುಣೋಪಾಸನೆ ತಾರಕ
ಹೇಸಿಕೆಸಂಸಾರ ಮಾರಕವೋ ಪ

ಕ್ಲೇಶದ ಭವದೊಳಾಯಾಸಿ ಬಡದೆ ಹರಿ
ದಾಸರ ದಾಸ ನೀನಾಗೋ ಭವನೀಗೋ ಅ.ಪ

ಥಳಥಳ ದೇಹವ ತೊಳೆದು ನಾಮವ ಹಚ್ಚಿ
ಥಳಥಳಿಸುವಿ ಹೊರಗೆ ಒಳಗೇನಿಲ್ಲೋ
ಖಳರಾದ ಯಮದೂತರೆಳವಾಗಲೀ ನಾಮ
ಅಳಿಸಿ ಹೊಹುದು ನಿನಗೆ ತಿಳಿಯದಲ್ಲೋ
ಛಳಿಗಂಜದೆ ನಿತ್ಯಜಲದಿ ಮುಳುಗಿ ಕರ್ಮ
ತಿಳಿಯದೆ ನೀ ಮಾಡುವಿಯಲ್ಲೋ
ಒಳಗೆ ಹೊರಗೆ ಎಲ್ಲಾ ಹೊಳೆವ ಹರಿಯ ಮೂರ್ತಿ
ತಿಳಿಯದೆ ಯಮನಿಗೆ ಸಿಲುಕುವೆಯಲ್ಲೋ ೧

ಡೊಂಬನಂದದಿ ಡಾಂಬಿಕ ಕರ್ಮದ ಆ –
ಡಂಬರ ತೋರುತ್ತ ಗೊಂಬೆಗಳಾ
ಅಂಬರ ಹಾಸಿಟ್ಟು ಕುಂಭದಿ ನೀರೆರೆದು
ಪೊಂಬಣ್ಣದೊಡವಿಯ ರಂಜಿಪೆಯೋ
ಜಾಂಬುನದಾಂಬರವೆಂಬ ಮಂತ್ರಕ,
ದಂಬ ನುಡಿದು ನೀನಂಬುಗಳಾ
ತುಂಬಿಸಿ ಶಂಖವ ಸಂಭ್ರಮದಲ್ಲಿ ಉಗ್ಗಿ
ಬಿಂಬನುಂಡನು ತೆಗಿ ಎಂಬುವಿಯಲ್ಲೋ ೨

ಕರ್ತಾ ಮೂರ್ಲೋಕಕ್ಕೆ ಪಾರ್ಥಸಾರಥಿ ಎಂದು
ಆರ್ತವನಂತೆ ಪ್ರವರ್ತಿಸುವಿ
ಕರ್ತಶಾಸ್ತ್ರಾರ್ಥತ್ವದ ಅರ್ಥ ತಿಳಿಯದೆ ಜೀವ –
ಕರ್ತೃತ್ವಾ ತಿಳಿದ್ಹರಿಯ ಮರೆತಿರುವೀ
ಭರ್ತಾಮನಿಗೆ ಎನ್ನೊರ್ತು ಯಾರಿಲ್ಲೆಂದು
ವ್ಯರ್ಥಭಾರವನು ಹೊತ್ತಿರುವೀ
ಉತ್ತುಮರೊಡನೆ ಉನ್ಮತ್ತತನದಿ ತಿರುಗಿ
ಅತ್ತಣದ್ವಾರ್ತೆಯ ಮರೆತಿರುವೀ ೩

ಮಡದಿ ಮಕ್ಕಳು ನಿನ್ನ ಹಡೆದ ತಾಯಿ ತಂದೆ
ಒಡೆವೆವಸ್ತುಗಳೆಲ್ಲಾ ಪೊಡವಿಯಲ್ಲೇ
ಒಡೆಯನೆನುತ ನಿತ್ಯ ಪೊಡವಿತಳದಿ ಬಹು
ಪಡೆದ ಮನೀಧನ ಮಡದಿಗಲ್ಲೇ
ಧೃಢಮನದಲಿ ನೇಮಹಿಡಿದು ಮಾಡಿದ ಕರ್ಮ
ಜಡಮೂರ್ತಿ ಪೂಜೆಯು ಒಡಲಿಗಲ್ಲೇ
ಕಡುಭವಸುಳಿಯಿಂದ ದಡ ಸೇರಿಸುವ ನಮ್ಮ
ಜಡಜನಾಭನ ಪಾದ ದೃಢ ಮಾಡಲೊಲ್ಲೆ ೪

ಧಾತ ಕುಲದಿ ಪ್ರಖ್ಯಾತ ಭಾವಿ ವಿ
ಧಾತ ಶಾಸ್ತ್ರದಿ ಖ್ಯಾತನಾದೀ
ಮಾತರೀಶ್ವನ ಮತರೀತಿಯ ತಿಳಿಯದೆ

ಪ್ರಾತದಿ ನೀವ್ರಾಬಹು ಖ್ಯಾತನಾದೀ
ನೀತ ಸಜಾತಿ ವಿಜಾತಿ ವಿಭೂತಿಯ
ಈ ತೆರ ನೀನೇ ತಿಳಿಯದ್ದೋಗಿ
ದಾತಗುರುಜಗನ್ನಾಥ ವಿಠಲಗತಿ
ಪ್ರೀತಿಯಾಗುವ ಕರ್ಮ ವ್ರಾತಮಾಡದೆ ನೀಗಿ ೫

## ೧೬೮

ಶ್ರೀಶನಂಘ್ರಿ ಪ್ರತಿವಾಸರ ಭಜಿಸಲಭಿಲಾಷೆ ಸಲಿಸಿ ಪೊರೆವಾ ಪ

ವಾಸುವಾನುಜ ಅಮರೇಶನವಿನುತ ಶಿರಿ
ವಾಸುದೇವ ದೇವ ಅ.ಪ

ಅಖಿಲಾರಾಧಿತ ಸುಖಮಯಹರಿವರ
ಸಖಸನ್ನುತ ಚರಣ
ನಿಖಿಲವ್ಯಾಪ್ತ ರವಿಶಿಖಿಶುಭೇಕ್ಷಣ
ನಖಮುಖಶಿಖ ಪೂರ್ಣಾ ೧

ಅನಿಮಿತ್ತಬಾಂಧವ ಅನಿಮಿಷರೊಡೆಯಾ
ಅನುದಿನದಲಿ ಕರೆವಾ
ಜನರಿಗೆ ಇಹಪರಘನಸುಖಕೊಟ್ಟವ
ರಣುಗನಾಗಿ ಇರುವಾ ೨

ಶಿರಿಪತಿ ತನಪದವನು ಸ್ಮರಿಸಿದ ಸುಜನರ
ಗುರುಜಗನ್ನಾಥವಿಠಲಾ
ನಿರುತದಿ ಪಾಲಿಪ ಮರೆಯದೆ ನರಹರಿ
ಪರಿಸರವತ್ಸಲಾ ೩

## ೧೬೯

ಸಾಧನವಿದ್ದದಕೆ ಮಧು
ಸೂದನ ಗುಣಗಳ ಶೋಧನ ಮಾಡೋದೇ ಪ

ಹರಿ ಸರ್ವೋತ್ತಮ ಗುರು ಜೀವೋತ್ತಮ
ಪುರಹರ ಸುರವರ ಪರಿವಾರಾ
ಮರೆಯದೆ ದಿನದಿನ ಸ್ಮರಿಸುತ ತರತಮ
ವರಿತು ವಿಧಿಯ ನೀ ಪರಿಪರಿ ಭಜಿಪೋದೆ ೧

ಮೂಲನಾರಾಯಣ ಲೀಲೆಯ ಮುಗಿಸೀ
ಬಾಲನಾಗಿ ಆ ಲಯಕಾಲದಲಿ
ಮಾಲೋಲ ಬಾಯಲಿ ಕಾಲಿನಗುಂಟವಿಟ್ಟು
ಸೀಲಜೀವರ ಪ್ರೇಮ ಮೆಲ್ಲುವನೆಂಬುದೆ ೨

ಮತ್ಸ್ಯಮೊದಲು ಶಿರಿವತ್ಸಧರನ ಬಲು
ಸ್ವಚ್ಛರೂಪಗುಣ ಸ್ವೇಚ್ಛೆಯಲೀ
ಉಚ್ಚರಿಸುತ ಪರರಿಚ್ಛೆಯಮಾಡದೆ
ಮತ್ಸರಿಸದೆ ಪರಮೋತ್ಸನಾಗೋದೆ ೩

ಸೋತುಮಜನ ಮನೋಪ್ರೀತಿಯ ಪಡೆದೀ
ರೀತಿಯ ತತ್ವದ ಮಾತನು ತಿಳಿದೂ
ಮಾತಾಪಿತರು ಸತಿ ಪೋತರು ಸಿರಿಸತಿ
ನಾಥನ ಪದಯುಗದೂತರು ಎಂಬುದೆ ೪

ಮನಿಯನು ತ್ಯಜಿಸಿ ವನವನು ಚರಿಸೀ
ತನುವನು ದಂಡಿಸಿ ದಿನದಿನದೀ
ವನಜಾಕ್ಷನ ಗುಣ ಮನದಲಿ ಎಣಿಸಿದೆ
ದಣಿದರೆ ಮುಕುತಿಯು ತನಗಿಲ್ಲೆಂಬುದೆ ೫

ಈಶಪ್ರಮುಖರಮರೇಶರು ಸರ್ವದ
ಶ್ರೀಶನ ಪದಯುಗದಾಸರು ಎನುತಾ
ಕ್ಲೇಶಸೌಖ್ಯ ಸರ್ವೇಶನಿಗರ್ಪಿಸಿ
ದಾಸನಾಗಿ ಭವದಾಸೆಯ ನೀಗೋದೆ ೬

ನಿಂದಿಸೆ ಮನದಲಿ ಕುಂದದೆ ತುತಿಸಲು
ವಂದನೆ ಮಾಡಲು ಹಿಗ್ಗದಲೆ
ದ್ವಂದ್ವಕೆ ಭಾಗಿಯು ಇಂದಿರೇಶನೆಂದು
ನಂದದಿ ಪರರನು ನಿಂದಿಸದಿಪ್ಪೋದೆ ೭

ಮಾಸೋಪೋಷಣ ಶ್ವಾಸವ ಬಂಧಿಸಿ
ಕ್ಲೇಶದಿ ತಪದಾಯಾಸವ ಬಡದೆ
ಬೇಸರಗೊಳದೆ ರಮೇಶನ ಗುಣಗಳು
ಪಾಸನ ಮಾಡುತ ಸೋಸಿಲಿ ಇರುವೋದೆ ೮

ವೇದಶಾಸ್ತ್ರಗಳೋದಿದ ಮದದೀ
ಸಾಧುಗಳೊಡನೆ ವಿವಾದವ ಮಾಡೆ
ಮಾಧವ ದೊರೆಯನು ಖೇದವು ಬರುವುದು
ಮೋದ ಕೊಡುವವ್ರೋ ಹಾದ್ಯೆಲ್ಲೆಂಬೋದೆ ೯

ಉದಕದಿ ಮುಳಗೀ ವದನದಿ ಜಪಿಸಲು
ಪದುಮನಾಭನೆಂದಿಗೂ ದೊರೆಯ
ಮದಮತ್ಸರಕಾಮಕ್ರೋಧವ ಬಿಟ್ಟು
ಸದಮಲಮೂರುತಿ ಹೃದಯದಿ ಕಾಂಬೋದೆ ೧೦

ತೃಣಮೊದಲಾದ್ರುಹಿಣಾಂತೀ ಜಗದೊಳು
ಫಣಿಶಯನನ ಗುಣಗಣಿಸುತಲೀ
ಮಣಿಕಾಂಚನತೃಣ ಸಮವೆಂದರಿದೂ
ತಣಿಸದೆ ಹರಿಮೂರ್ತಿಯ ಭಜಿಸುವುದೆ
ಅಂಬುಜ ಭವನಾಂಡದಿ ಶಿರಿ
ಬಿಂಬನೆ ಈ ಪರಿ ತುಂಬಿಹನೊ

ಪೊಂಬೊಸುರಾಮರರಿಗಿಂಬಾಗೀ ಜಡ
ಬೊಂಬೆಯ ತೆರ ಕುಣಿಸುವನೆಂಬೋದೆ ೧೧

ಆವಕಾಲದಲಿ ಅವದೇಸದಲಿ
ಅವಾವಸ್ಥೆಯು ಬರಲಿನ್ನು
ಶ್ರೀವರ ತಾ ನಮ್ಮ ಕಾವನುಎನುತ
ಭಾವಿಸಿ ಈ ಪರಿ ಸೇವೆಯ ಮಾಡೋದೆ ೧೨

ಐಹಿಕ ಸುಖ ತಾ ವಹಿಸದೆ ಮನದಲಿ
ಮಹಿತನ ಪದಯುಗ ಭಜಿಸುತಲೀ
ಸಹಿಸುತ ದ್ವಂದ್ವವ ಮಹಿತಳ ಮಧ್ಯದಿ
ವಹಿಸಿದ ದಾಸ್ಯದ ವಿಹಿತನು ಎನಿಸೋದೆ ೧೩

ದಾತಗುರು ಜಗನ್ನಾಥ ವಿಠಲನ
ದೂತನಾಗಿ ಬರೆ ಖ್ಯಾತಿಯ ಪಡದೆ
ಮಾತಾಪಿತಸುತ ಭ್ರಾತಬಂಧು ಶಿರಿ
ನಾಥನೆಂದು ಈ ರೀತಿಲಿ ಇಪ್ಪೋದೆ ೧೪

## ೧೭೦

ಸಾಧನವಿದ್ದದಕೆ ಮಧು
ಸೂದನ ಗುಣಗಳ ಶೋಧನ ಮಾಡೋದೇ ಪ

ಮಹಿಸುರ ಜನ್ಮವ ವಹಿಸಿದ ಮನುಜನು
ವಿಹಿತಾಚರಣೆಯ ಮಾಡುತಲೀ
ಅಹಿವರ ತಲ್ಪನ ಮಹಿಮೆಯ ದಿನದಿನ
ವಿಹಿತಮನದಿ ಬಹು ತುತಿಸುತಿರುವುದೇ ೧

ಕ್ಷೇತ್ರತೀರ್ಥಗಳ ಯಾತ್ರೆಯ ಮಾಡುತ
ಪಾತ್ರಾಪಾತ್ರರ ತಿಳಿಯುತಲೀ

ಗೋತ್ರಧರನ ಈ ಗಾತ್ರದಿ ತಿಳಿದು
ನೇತ್ರದಿ ಶ್ರೀಹರಿಮೂರ್ತಿಯ ನೋಡೋದೆ ೨

ವನಜಭವಾಂಡಕೆ ವನಜಾಕ್ಷನೆ ಮುಖ್ಯ
ವನಜಭವಾದ್ಯರು ಸೇವಕರೂ
ಮನದಲಿ ಧೇನಿಸಿ ದಿನದಿನ ಕರ್ಮವ
ವನಜನಾಭಗರ್ಪಿಸುವುದೆಂಬುದೆ ೩

ಖೇದಮೋದ ಭವವ್ಯಾಧಿಗಳಿಗೆ ಸಿರಿ
ಯಾದವವರ ತಾ ಕಾರಣನೂ
ಸಾದರಮನದಲಿ ಮೋದತೀರ್ಥರಾ
ರಾಧನೆ ಗೈಯುತ ಮೋದಿಸುತ್ತಿಪ್ಪುದೆ ೪

ಸಿರಿ ಅಜ ಭವಮುಖ ಸುರವರರೆಲ್ಲರು
ಹರಿಯಲ್ಲದೆ ನಿಜಕೃತಿ ಜರಿಗಿಸರೂ
ಹರಿಯಾಜ್ಞದಿ ನಿತ್ಯ ಸುರನರತತಿಗಳ
ಪೊರೆವರೆನುತಲೀಪರಿ ತಿಳಿಯುವುದೇ ೫

ಅನುದಿನ ಬಿಡದಲೆ ತನುವೃಕ್ಷದಿ ಜೀ
ವನು ಶ್ರೀಹರಿ ಎನಿಸುವ ಪಕ್ಷಿಗಳೂ
ತನುಕೃತಕರ್ಮವನುಣುವನು ಜೀವನು
ಉಣದಲೆ ರಾಜಿಪನನಶನನೆಂಬೋದೆ ೬

ಈಶನು ಶ್ರೀಹರಿ ದಾಸರು ದಿವಿಜರು
ಈಶರೊಳಗಿರುವೀಶನ ತಿಳಿದೂ
ಶ್ರೀಶನ ಮಾಯಾಪಾಶಕೆ ಸಿಲ್ಕಿ
ವಾಸವಮುಖರಾಯಾಸದಲಿಹರೆಂಬೋದೆ ೭

ಹರಿಸರ್ವೋತ್ತಮ ಹರಿ ಪರದೈವನು
ಪರಮಗುರುವರ ಮಾರುತನೂ

ಹರುಷಮನದಿ ಶಿರಿಹರಿ ಗುಣಪಾಡುತ
ಹಿರಿದು ಹಿಗ್ಗುತೀಪರಿ ಕುಣಿವುದೆ ೮

ಚೇತನರೊಳು ಹರಿ ಆತುಮನಾಮದಿ
ಈ ತೆರ ಕರ್ಮವ ಬೀರುತಲೀ
ದಾತಗುರುಜಗನ್ನಾಥವಿಠಲ ನೀ
ರೀತಿಯ ಲೀಲಾ ತೋರುವನೆಂಬೋದೆ ೯

## ೧೭೧

ಸ್ಮರಿಸು ಸ್ಮರಿಸು ಮನವೆ ಹರಿಯ ಚರಣ ನೀ ಪ

ದುರಿತ ತಮೋರಾಶಿ ಹರಸಿ ಸುಖವನು
ಸುರಿಸಿ ಭಜಕರ ಪೊರೆವೊ ಚರಣ ನೀ ಅ.ಪ

ಕರುಣಾನೀಧಿಯೇ ಎನ್ನಾ ಕರುಣಿಸು ಎಂದವನಾ
ಕರುಣಾದಿ ಪೊರೆವ ಸುಪರಣವಾಹನ ಚರಣಾ ೧

ಕರಣಾಭಿಮಾನಿಗಳೂ ಕರುಣೀಸರೆನ್ನನ್ನು
ಶರಣನ ಪೊರೆಯುವ ಕರಣಪತಿಯ ಚರಣ ೨

ದಾತ ಗುರುಜಗನ್ನಾಥ ವಿಠಲ ನಿಜ
ದೂತರ ಪಾಲಿಪ ನೀತಚರಣ ನೀ ೩

## ಹರಕೆಯ ಹಾಡುಗಳು

## ೧೭೨

ಇನ್ನೇನು ಭಯವಿಲ್ಲ ನಿನಗೆ
ಘನ್ನ ಗುರುವರಪಾದ ಭಜಿಸೊ ಮನದೊಳಗೇ ಪ

ಬನ್ನಗೊಳಿಸುವಾ ವ್ಯಾಧಿ
ಮುನ್ನೆ ಬಾರದೋ ಮಗುವೇ ಅ.ಪ

ಆವ ಜನ್ಮದಕರ್ಮ ಶೇಷದಲಿಂದ
ಈ ವಿಧದ ವ್ಯಾಧಿ ಸಂಭವಿಸಿತಲ್ಲಾ
ಕೋವಿದೋತ್ತಮರಪಾದ ಸೇವೆ ಸತ್ಕಾರದಿಂದಲೇ
ತಾವಕನು ನೀನೆಂದು ಗುರುರಾಯ ಪೊರೆವಾ ೧

ಏನು ಕರುಣವೊ ಗುರುವರಗೆ ನಿನ್ನಲಿ
ನೀನೇನು ಧನ್ಯನೋ ಈ ಲೋಕದಲ್ಲೀ
ದೀನ ಭಾವವ ನೋಡಿ ದೀನವತ್ಸಲ ಬಂದು
ತಾನೆ ಕರುಣದಿ ಪೊರೆದ ಮೇಲೆ ೨

ಅರಿಯದಿಹ ನರರಿಗಾಶ್ಚರ್ಯ ತೋರಲೋಸುಗದಿ
ಮರೆಯದಂತೆ ಮನಕೆ ಕರುಹು ಮಾಡಿ
ಧರೆಯೊಳಗೀ ಗುರುವರಗೆ ಸರಿಯಿಲ್ಲ
ಗುರುಜಗನ್ನಾಥ ವಿಠಲ ತಾನೇ ಬಲ್ಲ ೩

## ೧೭೩

ಚಿರಕಾಲ ಬದುಕೆಲೋ ಚಿನ್ನ ನೀನು
ಗುರುರಾಯರನುಗ್ರಹದಿ ಪೇಳಿದೆನೊ ನಾನೂ ಪ

ಅನ್ನ ಆರೋಗ್ಯ ಅಯುಸ್ಸು ಸಂತಾನವು
ಮುನ್ನೆ ಸೌಭಾಗ್ಯ ಜ್ಞಾನಾದಿ ಭಕುತೀ
ಮುನ್ನೆ ವೈರಾಗ್ಯ ಸಜ್ಜನರ ಕೂಡ್ಯಾಡಿ
ಘನ್ನ ಗುರುರಾಘವೇಂದ್ರ ಭಜಕನೆಂದೆನಿಸೀ ೧

ಹರಿಯು ಸರ್ವೋತ್ತಮನು ಶಿರಿಯು ಆತನ ರಾಣಿ
ಪರಮೇಷ್ಠಿಮರುತರು ಸಮರು ಎಂದೂ

ಗರುಡ ಶೇಷಾರುದ್ರ ಸಮರಿಂದ್ರಕಾಮರೆಂ
ದರಿವ ಈ ವರತಾರತಮ್ಯ ಜ್ಞಾನದಿಂದ ೨

ಈಶಗೀ ಜಗವೆಲ್ಲ ವಾಸಯೋಗ್ಯವೆಂದಿದರ
ಲಾಸೆ ಮಾಡದೆ ನಿರುತ ಆತನಿಂದಾ
ಲೇಶವಾಗೀ ದೊರೆತ ಕಂಬಳಿ ಕದನ್ನಸು
ವಾಸ ಷಡ್ರಸಗಳೆಂದವನ ಭಜಿಸುತಲೀ ೩

ಬರಿಲಿಲ್ಲ ಬರಹವನು ಬರವಲ್ಲದೆನಗೆಂದು
ಮರುಗಿ ಚಿಂತಿಸಬ್ಯಾಡ ಮನದೊಳಗೆ ನೀ
ಪರಮಕಾರುಣಿಕ ಶ್ರೀ ಗುರುರಾಯ ನಿನ್ನೊಳಗೆ
ಪರಮ ಚರಿಯವ ತೋರಿ ಪರಿಪಾಲಿಪನು ನಿನ್ನ ೪

ಧಾತ ಬರೆದಿಹನು ಈ ರೀತೀ ನಿನ ಪಣೆಯಲ್ಲಿ
ಯಾತಕ್‌ದರಾಸೆ ಲೌಕಿಕವೆಂದು
ವಾತಪಿತ ಗುರುಜಗನ್ನಾಥವಿಠಲ ಪಾದ
ಪ್ರೀತಿಯಿಂದಲಿ ಭಜಿಪ ದೂತನೆಂದೆನಿಸೀ ೫

## ವಿಶೇಷ ಪದ

### ೧೭೪

ತುರಕರಾದರೀ ಭವ ಕರಿಕರಿ ಇಲ್ಲಲ್ಲಾ ಪ

ಧ್ವರಿಯಪ್ಪಣೆ ನಮಗೇನು ಹರಕತು ಮಾಡುವುದಿಲ್ಲಾ ಅ.ಪ

ಅಂತರ ಮೋಹಿಪ ಕಂತುಗೆ ಮೊದಲೆ
ಸಂತಿಯ ಮಾಡಬೇಕಲ್ಲಾ
ಸಂತರು ಮಾಡುವ ಸಂತಿಯ ಮುಲ್ಲನ
ಸ್ವಂತ ಕರಿಯ ಬೇಕಲ್ಲಾ

ಶಾಂತದಿ ಕುಳಿತೇಕಾಂತದಿ ಸುರದಿಂ
ಭ್ರಾಂತನಾಗಬೇಕಲ್ಲಾ
ಮಂತರ ಓದಿ ತಂತರ ಕಲಿಯೇ ಕೃ
ತಾಂತನ ಭಯವೇನಿಲ್ಲಾ ೧

ಜನಿಮೃತಿ ಲಕ್ಷಣ ಘನಕುರಿಕೋಳಿ
ಹನನವ ಗೈಬೇಕಲ್ಲಾ
ಮನುಜೋತ್ತಮರೀ ಜನಫಕೀರರಿಗೆ
ದಿನಘಾತಿಯ ಕೋಡಬೇಕಲ್ಲಾ
ತನಗುರುವೆನುತಿಹ ಘನಖಾಜಿಯನು
ದಿನದಿನ ಪೂಜಿಸಬೇಕಲ್ಲಾ
ಮನೋಶುದ್ಧೋಪಾಸನಲಕ್ಷಣ ಘನ
ನಮಾಜವ ಮಾಡಬೇಕಲ್ಲಾ ೨

ಮೋರಮು ಬರಲೂ ಸೇರಿದ ತಾಮಸ
ಸಾರಿಸಿ ಬಳಿಬೇಕಲ್ಲಾ
ಸಾರಸತ್ವ ಮನೋಚಾರುಮಸೀದಿಯ
ನೀರ ಜ್ಞಾನದಿ ತೊಳಿಬೇಕಲ್ಲ
ಸಾರಭಕುತಿಯ ಚೂರಣಪೂಸಿ
ಘೋರ ಮನೋನೆಲ ತೊಡಬೇಕಲ್ಲಾ
ಸಾರಮತಿಯುತ ಚಾರುಚಂದ್ರನ
ತೋರಲು ತುರುಕರರೆಲ್ಲಾ ೩

ಇದ್ದಜ್ಞಾನ ವಿಮರ್ದನ ಜ್ಞಾನ ಸು
ಗುದ್ದಲಿ ಹಾಕಬೇಕಲ್ಲಾ
ಹೃದ್ಯಬಿಂಬ ಪೀರಮುದ್ದುಮೂರುತಿಯ
ತಿದ್ದಿ ಇಡಲಿ ಬೇಕಲ್ಲಾ
ವಿದ್ಯವಂತರಾ ವಿದ್ಯವವಶುದ್ಧ
ಇದ್ದಲಿ ಮಾಡಬೇಕಲ್ಲಾ

ಶುದ್ಧ ತುರುಕರು – ಬದ್ಧರಾಗಿದಕೆ
ಯದ್ದಲಾಗ್ವಿಯಿ ಇಡಬೇಕಲ್ಲಾ ೪

ಈ ತರ ಪೀರರ ಜಾತರಿ ಮಾಡೀ
ನೀತಜ್ಞಾನ ನೀರೆರಿಬೇಕಲ್ಲಾ
ಪಾತಕಭವಕುಣಿ ಸೋತುಮಪದರಜ
ಜಾತಿಲಿ ಮುಚ್ಚಬೇಕಲ್ಲಾ
ಶ್ವೇತ ಜಲದಿ ಸುಸ್ನಾತನಾದ ನರ
ಪೂತನಾಗಬೇಕಲ್ಲಾ
ದಾತ ಗುರುಜಗನ್ನಾಥ ವಿಠಲ ತಾ
ಜಾತ ಪೀರನಾಗಿಹನಲ್ಲಾ ೫

## ಶ್ರೀ ಕೃಷ್ಣಲೀಲಾ

### ೧೭೫

ಚದುರ ಚನ್ನಿಗರಾಯ ತನ್ನಯ
ಬದಿಗ ಬಾಲಕರೊಡನೆ ಪುರದಾ
ಚದರು ಬೀದಿಯೊಳಾಡೊಗೋಸುಗ ಮುದದಿ ಪೊರಮಡಲು
ಚದುರ ಸ್ತ್ರೀಯರು ಸದನದಿಂದ
ವದಗಿ ಬಂದೂ ಯದುವರೇಣ್ಯನ
ಕದಪುಕನ್ನಡಿ ಚೆಲುವ ಮುಖ ಚುಂಬನವಗೈದಪರು ೧

ಕೆಲವು ನಾರೇರು ಜಲಜನಾಭನ
ಲಲಿತಕಲಭಾಷಣದ ಸೊಗಸಿಗೆ
ಒಲಿದು ತಮ್ಮಯ ಮನೆಯ ಕೆಲಸವ ಬಿಟ್ಟುನಿಂತಿಹರೊ
ಹಲವು ವಿಧದಲಿ ಹಾಸ್ಯನುಡಿಗಳ
ಲಲನೆಯರು ಗೋಪಾಲಗಾಡಲು
ಜಲಜ ಲೋಚನನಾಟ ನೋಡುತ ಜನರು ನಿಂತಿಹರೋ ೨

## ಆರ್ಯ

ಒಗೆದಾಗ ಚಂಡು ಪಣಿಗೆ
ಸಿಗಧಾಗೆ ಹೋಯಿತಾ ಚೆಂಡು ಕ್ಷಿತಿಯೊಳಗೆ
ಆಗ ಸೋತಾ ಗೋಪರೊಳಗೆ ಕೃಷ್ಣ
ಜಿಗಿದಾಗ ಹತ್ತಿ ಸೇರಿದನು ತಾ ಕೊನಿಗೆ ೧

ದೂರಾಗ ಚೆಂಡು ಪೋಗಿರಲು
ಆರಾರು ಅದನ ತರದೆ ತಾವು ನಿಂದಿರಲು
ಭಾರಾಗಿ ಬೆನ್ನಲಿರಲು ಕೃಷ್ಣ
ಸಾರಿದ ಚೆಂಡು ನೀವೆತರುವುದು ಎನಲು ೨

ಘಡ ಘಡನೆ ತಾವ್ ಗೋಪಬಾಲರು
ಧುಡು ಧುಡುನೆ ತಾ ಉರಳಿ ಪೋಗುವ
ಭರ ಭರನೆ ಕರದಿಂದ ಚೆಂಡನು ತಂದರಾಗಲ್ಲಿ
ಕೊಡುಕೊಡುತ ಶಿರಿ ಕೃಷ್ಣರಾಯಗೆ
ಭಿಡೆಯ ಇಲ್ಲದೆ ಮಾತು ಮಾತಿಗೆ
ಧಡಧಡನೆ ಇಳಿಯೆಂದು ಗೋಪರ ಹುಡುಗರಾಡಿದರು ೩

## ಪದ

ಚಂಡು ನೋಡೊ ತಂದೆವಲ್ಲೊ ಪುಂಡರೀಕಾಕ್ಷನೆ ಪ

ಭಂಡಿ ಇಳಿಸಿಕೊಂಡೆವಲ್ಲೋ ಉದ್ದಂಡಮಹಿಮನೆ ಅ.ಪ

ಇಳಿಯೊ ನಿನ್ನ ಗೆಳೆಯರನ್ನು ಇಳಿಸೊ ಬ್ಯಾಗನೆ
ಕೆಳಗೆ ನೀನೆ ಇಳಿಯಬೇಕೊ ನಳಿನನಯನನೇ ೧

ಹೊತ್ತು ನಿಮ್ಮನು ಎತ್ತಿಕೊಂಡೆವೆಂದು ಗೊತ್ತು ಸೇರ್ದೆವೋ
ಮತ್ತೆ ಈ ಪರಿ ನಮ್ಮನ್ನೊತ್ತು ಕೊಂಬೋದಿದು
ಎಂಥನ್ಯಾಯವೋ ೨

ಮಾತುಕೇಳದ್ಯಾತಕೆನ್ನಲಿ ಕೂತುಕೊಂಡೆಯೋ
ದೂತ ನಾನೋ ದಾತ ಗುರುಜಗನ್ನಾಥವಿಠಲನೇ ೩

## ಆರ್ಯ

ನಳಿನಾಕ್ಷನು ತಾ ಗೆಳೆಯನ ಮಾತಲಿ
ಇಳಿದನು ಬಲುತ್ವರದಿಂದಾ
ಹಳಿಯುತ ಬಾಲರ ಎಳೆಯುತ ಪಣಿಯನು
ಶೆಳೆಯುತ ನಡೆದನು ಗೋವಿಂದ
ಘುಡಿ ಘುಡಿಸಿ ತಾ ಕೋಪದಿಂದಲಿ
ಬಡಿಬಡಿದು ತಾ ಗೋಪಬಾಲರ
ಕೆಡ ಕೆಡಹಿ ಇಳೆಯಲ್ಲಿ ಗೋಪರ ಕೋಪದಿಂದಾಗ
ಭಡ ಭಡನೆ ಮುರವೈರಿ ಮುಂದಕೆ
ನಡೆ ನಡೆದು ಹರಿ ಪೋಗುತಿರಲೂ
ತಡೆ ತಡೆದು ಎದುರಾಗಿ ದಾರಿಗೆ ಅಡ್ಡಗಟ್ಟಿದರೂ

## ಪದ

ನೀ ಕೊಡೆ ನಾ ಬಿಡೆ ರಂಗಯ್ಯಾ ಪ

ಯಾಕೆ ನಮ್ಮೊಳು ಕೂಡಿ ಆಡಿದ್ಯೊ ಕೃಷ್ಣಯ್ಯಾ ಅ.ಪ

ಆಟವ ಕೂಡದೆ ನೀ ದಾಟುವೊ ಬಗೆ ಏನೋ
ಆಟವ ಕೊಡೊತನಕಾ ಕಾಟ ತಪ್ಪದೊ ರಂಗಾ ೧

ಬಡಬಾಲರೊ ನಾವು ಒಡೆಯರ ಮಗ ನೀನೂ
ಕೊಡುವೊ ಆಟಕೆ ಇಂಥಾ ತುಡುಗು ನಡತೆ ರಂಗಾ ೨

ಯಾತಕಿಂಥಾ ಆಟ ಈ ತೆರನಾಡಿದಿ
ದಾತಗುರು ಜಗನ್ನಾಥವಿಠಲ ರಂಗ ೩

ಸಣ್ಣ ನುಡಿಗಳನಾಡದಿರು ನ
ಮ್ಮಣ್ಣ ರಾಮಗೆ ಪೇಳಿ ನಿನ್ನನು ೪

ಬನ್ನ ಬಡಿಸುವೆ ಬಹಳ ವಿಧದಲಿ ತಿಳಿಯೊ ಎಲೆಪೋರ
ಇನ್ನು ನನ್ನನು ನೀವು ತಡೆದರೆ
ಎನ್ನ ತಾಯಿಗೆ ಪೇಳಿ ಎಲ್ಲರ
ಮಣ್ಣು ಮುಕ್ಕಿಸಿ ಬಿಡುವೆ ಎಚ್ಚರವಿರಲಿ ನಿಮಗೆಂದ ೫

## ಆರ್ಯ

ಗೋಪಾಲ ಕೇಳೊ ಮಾತಾ
ಗೋಪಾಲನಾದರಿನ್ನು ಬಿಡೆನೊ ನಮ್ಮಾಟ
ಗೋಪಾಲು ಉಳಿಪ ಮಾತಾ
ಗೋಪಾಲಾಗಲಿ ಎಮಗೇನದರ ಕಾಟಾ

## ಪದ

ಬಿಡುವೋದಿಲ್ಲೋ ರಂಗಾ ಬಿಡುವೋದಿಲ್ಲೋ ಪ

ಬಡಿದು ನಮ್ಮಾಟವ ನೀನು
ಕೊಡದೆ ಪೋಗುವದೆಲ್ಲೋ ಅ.ಪ

ನೀರ ಮುಣುಗಿ ಭಾರ ಪೊತ್ತು ಬೇರತಿಂದು

ಘೋರ ಬ್ರಹ್ಮಚಾರಿ ನೃಪರ ಸಂಹಾರಿ ಧನು
ರ್ಧಾರಿ ಗೋಕುಲಶೌರಿ ಬತ್ತಲೆ ವಾಜಿ
ನೇರ ನಡೆದರು ನಿನ್ನಾ ೧

ಮಡುವು ಧುಮುಕಿ ಬಿಡಿಯಗಣ್ಣು ಪೊಡವಿ ಕೆದರಿ
ಒಡೆದು ಕಂಭ ಹುಡುಗನೆನಸಿ ಕೊಡಲಿ ಧರಿಸಿ
ಕಡಲದಾಟಿ ತುಡಗನಾಗಿ ಮಡದೀಯರ ೨

ಕೆಡಿಸಿ ವಾಜಿಯೊಡೆಯನಾದರೂ ನಿನ್ನಾ
ಸೋತು ಮೀನ ಜಾತಿ ಕೂರ್ಮ ಭೂತ ಸಿಂಹ
ಪೋತ ನೃಪರಿಘಾತ ರವಿಕುಲಜಾತ ಗೋಪಾಲ
ನಾಥ, ಪುರಸತಿಘಾತ ಕಲಹ..............
ಪ್ರೀತ ಗುರು ಜಗನ್ನಾಥ ವಿಠಲನಾದರು ಸರಿ ೩

ಬಾಲರಾಡಿದ ಮಾತುಕೇಳೀ
ಲೋಲನೇತ್ರದಿ ಜಲವ ತುಂಬಿಸಿ
ಬಾಲಕೃಷ್ಣನು ಅಳುವೊ ಬಗೆಯನು ನೋಡಿ ಬಾಲಕರು
ಹೇಳು ಪೋಗೆಲೊ ನಿಮ್ಮ ತಾಯಿಗೆ
ಭಾಳ ಅಂಜಿಸಿ ಮಾತನಾಡುವಿ
ನಾಳಿನಾಟಕೆ ಬರಲು ನಿನ್ನನು ದೂರ ಮಾಡುವೆವೊ

## ಪದ

ಸಾರಿದ ಸದನಕೆ ಯದುಕುಲತಿಲಕ
ಸರಸದಲಳುತಾ ಪ

ವಾರಿಜಭವಸುರಪರಿವಾರಕೆ ಸಿಲುಕದ
ಹರಿ ದುರಿತಾರಿ ತಾ ಅ.ಪ

ವಿಗತಶೋಕ ವಿರಹ ವಿವರ್ಜಿತ
ನಿಗಮತತಿನುತ ವಿತತಸುಗುಣ
ಸುಗಮ ಸುರವರ ನಗಧರ
ಬಗೆಬಗೆ ಲೀಲೆಯ ತೋರುತ ತ್ವರದೀ ೧

ವಾರಿಜಭವಸುರಪರಿವಾರಕೆ ಸಿಲುಕದ
ನೀರಜಾಕ್ಷ ನರಪೋರರ ಪರಿವಾರಗೂಡಿ
ವಿರಾಟವನಾಡಿ ಕ್ರೂರನ ತೆರದಲಿ
ಪಾರುಗಂಡೆನೆನುತಲಪಾರ ಮಹಿಮನೂ ೨

ನಂದನಂದನಾನಂದಮಯ ಮು
ಕುಂದ ಮುಚುಕುಂದವರದಾ
ಇಂದಿರೇಶ ಸುರವೃಂದವಂದ್ಯಪದ
ವೃಂದಾರಕೇಂದ್ರ ಆನಂದ ಮೂರುತಿ ೩

ಮಾತೆಯ ಮುಂದೀಮಾತನೆ ತಿಳಿಸಿ
ಪೋತರ ಪರಿಘಾತಿಪೆನೆನುತಾ
ಆತುರದಲಿ ನಿಜ ಮಾತೆಯ ಬಳಿಗೆ
ದಾತಗುರುಜಗನ್ನಾಥ ವಿಠಲನೂ ೪

## ಆರ್ಯ

ಅಮ್ಮ ಕೇಳನ್ನ ಮಾತಾ
ನಮ್ಮೊಳಗಾಡಲಿ ಬ್ಯಾಡೊ ಹೋಗೆಲವೋ ಸೋತಾ
ದೊಮ್ಮಗಾರನು ಈತಾ
ಹಮ್ಮುಮಾಡಿ ಬೈದರೆಲ್ಲರು ವಿಪರೀತಾ ೧

ಪುಟ್ಟಿದ್ದು ನಿನ್ನೂರು ಮಧುರೀ
ಬಿಟ್ಟೋಡಿ ನೀ ಬಂದ್ಯೊ ಕಂಸಗೆ ಬೆದರಿ
ಇಟ್ಟಿದ್ಯ ಗಂಟೆನು ಕೆದರಿ
ಬಿಟ್ಟೋಡೊ ಮಥುರಿಗೆ ಹಿಡಿ ನಿನ್ನದಾರಿ ೨

ನಿಮ್ಮಮ್ಮ ಈಕಿ ಅಲ್ಲ ಕೇಳೊ
ನಿಮ್ಮಮ್ಮ ಬ್ಯಾರೆ ದೇವಕಿಯಂತಿಹಳೋ
ಹಮ್ಯಾಕೆ ನಿನಗೆ ಮರುಳೋ
ಸುಮ್ಮಾಗೆ ಹೋಗು ನಿನಗ್ಯಾಕೊ ನಮ್ಮ ಸರಿಯಲ್ಲೋ ೩

ಇಂಥಾ ಮಾತುಗಳಾಡಿ ಎನ್ನಾ
ಪಂಥಮಾಡಿ ಬೈದರವರೀಗ ಬಹಳ ನಿನ್ನಾ
ಇಂಥ ಬಾಲಕರವರೇನು ಘನ್ನಾ
ಕಂಥೆ ಕಟ್ಟಿಸಬೇಕ ಕರೆದವರ ಮುನ್ನಾ ೪

ಸೊಕ್ಕೆನು ಕೇಳೆಂದೆನವರಾ
ಲೆಕ್ಕಿಸಾಗದು ಭಿಡೆ ಏನು ನಿನಗವರಾ
ದಿಕ್ಕಿಲ್ಲದಾಯಿತೇನು ನಗರಾ
ವಕ್ಕಲಾಗುವದ್ಯಾಗೆ ಮುನ್ನಿಲ್ಲಿ ಜನರಾ ೫

ತನ್ನ ತನಯನ ಬಣ್ಣ ಮಾತನು
ಮನ್ನಿಸೇ ಮನದಲ್ಲಿ ತಂದೂ
ಎಲ್ಲ ಬಾಲಕ ಮಾತನರಿಯನು ಗೋಪ್ಯ ಸುದ್ದಿಯನು
ಎನ್ನ ಮರ್ಮವು ಅನ್ಯಬಾಲರು
ಇನ್ನು ಈ ತೆರ ಏನು ಪೇಳ್ವರೊ
ಮುನ್ನೆ ಅವರಿಗೆ ಶಿಕ್ಷೆ ಮಾಡುವೆನೆಂದು ತೀವ್ರದಲಿ ॥

## ಪದ

ಆರು ಬಡಿದು ಬೈದರೋ ರಂಗಯ್ಯ ಪ

ಆರು ಬಡಿದವರಾರು ಪೇಳೆಂದರೆ
ತೋರದು ಎಂಬನೆ ಬಾಲಕೃಷ್ಣಯ್ಯ ಅ.ಪ

ಹಿಂದಿನ ಎನ ಕಂದನೂ ಮಂದಿರ ಬಿಟ್ಟು
ಮುಂದಕ್ಕೆ ಪೋಗರಿಯನೊ
ಇಂದೇನು ಎನಗಾನಂದ ಪುಟ್ಟಿತೊ ಗೋ –
ವಿಂದ ಮುಕುಂದ ಆಡೆಂದು ಕಳಿಸಿದೆನಯ್ಯಾ ೧

ಒಂದು ತಿಳಿಯದ ಬಾಲನೋ ನಿಂದೆಯ ಮಾತು
ತಂದು ಪೇಳುವದರಿಯನೋ
ಒಂದು ಕೇಳಿ ಮತ್ತೊಂದು ಪುಟ್ಟಿಸಿ ನಿ
ಮ್ಮಂದದಿ ಪೇಳುವೊ ಕಂದನಲ್ಲೆಯ್ಯಯ್ಯೋ ೨

ಬೊಟ್ಟು ಬಾಯೊಳಗಿಟ್ಟರೆ ಎನ್ನಯ ಕಂದ
ಥಟ್ಟನೆ ಕಡಿಯಲರಿಯನೊ

ಪುಟ್ಟ ಗುರುಜಗನ್ನಾಥ ವಿಠರಾಯನ
ಮುಟ್ಟಿ ಬಡಿದರಿಂದ ನೆಟ್ಟು ಬಂತೈಯ್ಯಯ್ಯೋ ೩

## ಆರ್ಯ

ಗೋಪಿ ಕೇಳಮ್ಮ ಮಾತಾ
ಕೋಪ ಯಾಕೆಮ್ಮೊಳಗೆ ನಿನ್ನ ಪೋತಾ
ಶ್ರೀಪ ತಾನಮಗೆ ಸೋತಾ
ಭೂಪ ನೀನೆಂದರಾಗಾದ ಕೋಪ ಸಂಜಾತಾ

## ಪದ

ಬಯಿದಿಲ್ಲ ಕೇಳಮ್ಮ ತಾಯಿ ನಾವೂ ಪ

ಬಯಿದರಾಗಲೆ ಪೋಗಲಮ್ಮ ಬಾಯೀ ಅ.ಪ

ಸಣ್ಣರಂಗಯ್ಯ ನಮ್ಮಣ್ಣನ ಸರಿಯೆಂದು
ಬಣ್ಣಿಸಿ ಬಾಲರು ಚೆನ್ನಾಗಿ ಆಡೀವಿ ೧

ಮುನ್ನಾಗಿ ತಾಗೆದ್ದು ಇನ್ನೊಮ್ಮೆ ಆಡೋನು
ಎನ್ನೊಳು ಓಡುತ್ತ ಮನ್ನೀಗೆ ಪೋದಾನು ೨

ಯಾತಕೆ ನಾವೆಲ್ಲ ಆತನ ಬೈವೆವು
ದಾತಗುರು ಜಗನ್ನಾಥವಿಠಲನ್ನ ೩

## ಆರ್ಯ

ಅಪರಾಧ ನಮ್ಮಲ್ಲಿ ಇಲ್ಲ
ಕೃಪಣವತ್ಸಲ ರಂಗ ನಮ್ಮನ್ನು ತಾನೆ ಬಲ್ಲಾ
ವೀಪರೀತ ಮಾತೇನು ಇಲ್ಲಾ
ಉಪಚಾರ ನಮಗೇನು ದಯಮಾಡೊ ಶಿರಿನಲ್ಲಾ ೧

## ಪದ

ಶ್ರೀನಿಧೆ ಕಾಯೊ ಕರುಣಾಂಬುದೇ ಪ

ದೀನ ಜ್ಞಾನ ಧ್ಯಾನ ಹೀನನಾದೆನಗೆ ಅ.ಪ
ದೀನ ದೂನ ಮಾನಹೀನ ಜ್ಞಾನ ಧ್ಯಾನ ಗಾನ ಮೌನ
ಸ್ನಾನ ಪಾನ ದಾನ ನಾನ ನೀನೆ ಎಂಬೊ ಜ್ಞಾನ ವಿತ್ತು ೧

ಆಟ ಪಾಟ ನೋಟ ಮಾಟ ಊಟ ಕೂಟ ಕಾಟ ಓಟ
ಈಟು ಜೇಟು ಪೋಟು ನಿನ್ನಾಟವೆಂಬೊ ಮತಿಯನಿತ್ತು ೨
ದಾತಗುರುಜಗನ್ನಾಥವಿಠಲ ದೂತನಾಥನೀತ ಸೋತನೆಂದ
ಮಾತು ಮರೆತು ದಾತ ಖ್ಯಾತನೆಂಬೊರೀತಿ ಮತಿಯನಿತ್ತು ೩

ಈ ತೆರೆ ಗೋಪರ ಮಾತನೆ ಕೇಳಿ ನಿ -
ಕೇತನಕೆ ಗೋಪಿ ನಡೆದಳು ಬೇಗನೆ ೪

## ಪದ

ನಡೆದಳು ಗೋಪಿಯೂ ಪ

ಹುಡಗರ ಮಾತೇನು ಕಡೆದ ದಧಿಯನು
ಕಡೆವೆನುತ ತ್ವರ ಅ.ಪ

ಬಂದಳೆಶೋದೆಯು ಛಂದದಿ ಮನಿಯಲ್ಲಿ
ನಿಂತು ಮಥಿಸುವೆನೆಂದು ತ್ವರಿತದಿ ೧

ಇಂದೀವರಾಕ್ಷ ಬಂದರೆ ಕೆಲಸವು
ಹೊಂದಗೊಡನುಯೆಂದೆಂದಿಗೆನುತ ತ್ವರ ೨

ದಾತಗುರು ಜಗನ್ನಾಥ ವಿಠಲ ಕ್ಷುಧಾ
ಆತುರದಿಹನೆಂದು ಕಾತರದೀ ತ್ವರಾ ೩

## ಆರ್ಯ

ಬಂದಾಗ ಮನೆಯಲ್ಲಿ ಗೋಪಿ
ನಿಂದಾಗ ಮಥನಗೈದಳಪರೂಪಿ
ಕಂದೀಗ ಬರುತಾನೆ ಕೋಪಿ
ಎಂದು ಛಂದಾಗಿ ಪಾಡುತ್ತ ತಾಳದಲಿ ಝಂಪಿ

## ಪದ

ಜಯ ಜಯತು ಗೋಪಾಲ ಜಯಜಯತು ಸುರಪಾಲ
ಜಯಜಯತು ಶಿರಿಲೋಲ ಜಯ ಜಯತು ನತಪಾಲ
ಜಯ ಜಯತು ಶ್ರೀಲೋಲ ಜಯಜಯತು ಎನಬಾಲ
ಜಯಜಯತು ಗುರುಜಗನ್ನಾಥ ವಿಠಲಾ

## ಆರ್ಯ

ಈ ಪರಿ ರಂಗನ ರೂಪಗುಣಂಗಳ
ಗೋಪಿಯು ಪಾಡುತಾ ಮಥಿಸಿದಳೂ
ಮಾತೆಯು ಪೋಗಲು ಪೋತನು ಸದನಕೆ
ಆತುರ ಬಂದಮ್ಮಿ ಕೊಡು ಎನಲಾಗ ೧

ತನ್ನಯಾ ಮಾತನು ಮನ್ನದಿ ತಾರದೆ ದಧಿ –
ಯನ್ನೆ ಕಡೆವೊ ತಾಯಿಯಾ ಕಂಡು
ಉನ್ನತಾ ಕೋಪದಿ ಬನ್ನ ಬಡುತಾ ತಾ
ಬೆಣ್ಣೆಯಾ ತಿನುವೆನೆಂದೂ ಮನಸುತಾಗೊಂಡ ೨

## ಪದ

ಕೊಡು ಕೊಡು ಅಮ್ಮಿಯ ಪ

ತಡವ್ಯಾತಕೆ ನಿನ್ನ ಪುಡುಕಿ ಪುಡುಕಿ ಬಲು
ಒಡಲ್ಬಸಿದ್ಯನಗೆ ಅ.ಪ

ಕಡೆವುದು ಬಿಡು ಬಿಡು ಗಡ ಗಡ ಬಾ ಬಾ
ತಡಮಾಡದೆ ಪಾಲು ಕುಡಿದೋಡುವೆ ನೀ ೧

ಇಷ್ಟೆ ಅಮ್ಮಿ ಕೊಟ್ಟರೀಗ ಬಿಟ್ಟು ಪೋಗುವೆ
ಎಷ್ಟು ಹೊತ್ತು ಆಯಿತಮ್ಮ ಪುಟ್ಟರಂಗಗೆ ನೀ ೨

ದಿಟ್ಟಗುರುಜಗನ್ನಾಥ ವಿಠಲ ನಾನಮ್ಮ
ಘಟ್ಯಾಗಿ ಬಿಗಿದಪ್ಪಿ ಹೊಟ್ಟಿತೊಂಬೋತನಕ ೩

## ಪದ

ಯದುರಾಯನೆ ನೀ ಬಾರೈ ಪ

ಪದುಮನಯನ ನೀ ಕದನ ಮಾಡೋರೆ ಅ.ಪ

ತಂಡತಂಡದ ಜನರಾ ಹಿಂಡಿನೊಳಗೆ ನೀ
ಚೆಂಡಾಡಿ ಅವರ ನೀ ದಂಡಿಪೊರೆನ್ನೈ ೧

ಆಟಾಡಿದಾ ನಿನ್ನ ಆಟವ ಕೇಳಿದರೆ
ಕಾಟ ಬಡಿಪೋರೆ ಹಾಟಕಾಂಬರಧಾರಿ ೨

ದೂತರೊಳಗೆ ಈ ರೀತಿಯಕಲಹ
ವ್ಯಾತಕೊ ಗುರುಜಗನ್ನಾಥ ವಿಠಲ ಬಾರೈ ೩

ಲಲನೆ ಗೋಪಿಯು ಚೆಲುವಬಾಲಗೆ
ಮೊಲೆಯ ನುಣಿಸುವೆನೆಂದು ತನಯನ
ಒಲುಮೆಯಿಂದಲಿ ಸ್ತನವನುಣಿಸುತ ಮುದವನ್ಯೆದಿದಳು
ಒಲಿಯಮ್ಯಾಲಿನಹಾಲು ಉಕ್ಕಲು
ಜಲಜನಾಭನ ಇಳಿಸಿ ಇಳೆಯೊಳು
ಒಳಗೆ ಪೋಗಲು ತಿಳಿದು ರಂಗನು ಒಡೆದ ಭಾಂಡವನು

ಒಡೆದಾಗ ಭಾಂಡ ತೆಗೆದಾ
ಕಡೆದಾ ಬೆಣ್ಣೆಯನುಣತಾಗ ತಾ ಜಿಗಿದಾ
ನಡೆದಾಗ ಮುಂದೆ ಲೂಖಲದಾ
ಬುಡವಾಗಲೇರಿ ನಿಂತ ನಾರಿಗೆ ಕಾಣಿಸದೆ
ಒಡೆದ ಶಬ್ದವ ಕೇಳಿ ಒಳಗೆ
ನಡೆದು ಬಂದಳು ಗೋಪಿ ತ್ವರದಿ
ನೋಡಿ ನಡುಮನೆಯಲ್ಲಿ ಚೆಲ್ಲಿದ ಪಾಲು ಬೆಣ್ಣೆಗಳ
ಈಡು ಇಲ್ಲದ ಕೋಪದಿಂದಲಿ
ಜೋಡು ಇಲ್ಲದೆ ಒರಳಮೇಲೆ
ನೀಡಿ ಪದಗಳ ನಿಂತಕೃಷ್ಣನ ಪಿಡಿಯಲೈತಂದು

## ಪದ

ಧಡಾನೆ ನೀನಿಳಿ ಇಲ್ಲಿ ನೀ
ಗಡಾನೆ ಮನಿ ನಡೀ ನಡೀ ಪ

ತಡಾವಾದರೀ ಛಡೀಲಿ ನಿನ್ನನು
ಭಿಡಿಯವಿಲ್ಲದೆ ಹೊಡೆದು ಬಿಡುವೆನೊ ಅ.ಪ

ಸಣ್ಣಾವನೀನೆಂದು ಬಣ್ಣೀಸಿ ಸಲಿಹಿದೆ
ಅಣ್ಣಾ ರಾಮನ ನೋಡೊ ಠೊಣ್ಯಾರಂಗನೆ ನೀ ೧

ಎಲ್ಲಾರು ಪೇಳುವೋದು ಸುಳ್ಳೆಂದು ನಾ ತಿಳಿದೆ
ಎಲ್ಲಾನು ನಿಜವೆಂಬೊದಿಲ್ಲೇ ತಿಳಿಯಿತೊ ೨

ದುಷ್ಟಾತನವು ಎಲ್ಲಾ ಎಷ್ಟೊಂದು ಕೇಳಲೋ
ಧಿಟ್ಟಾಗುರು ಜಗನ್ನಾಥವಿಠಲ ಸರಿಯಲ್ಲ ೩

ಜನನಿ ವಾಕ್ಯವ ಕೇಳಿ ರಂಗನು
ಮನದಲಂಜೀ ಒರಳನಿಳಿದೂ
ಜನನಿ ಕರದಲಿ ಸಿಕ್ಕರೆನ್ನನು ಶಿಕ್ಷೆ ಮಾಡುವಳೂ

ಎನುತ ಓಡಿದ ಪುರದ ಬೀದಿಲಿ
ಜನರು ಕೃಷ್ಣನ ನೋಡುತಿರಲೂ
ವನಜನಾಭನ ಪಿಡಿವೆನೆನ್ನುತ ಗೋಪಿ ಪೊರಮಟ್ಟು

## ಪದ

ಎಲ್ಲಿ ಪೋದ ರಂಗ ನಾನೆಲ್ಲಿ ಪುಡುಕಲಿ
ಅಲ್ಲಿ ನೋಡೆ ಎಲ್ಲ ರಸವ ಚೆಲ್ಲಿ ಪೋದನೆ ಪ

ಗಡಗಿಯೊಡೆದು ಕಡೆದ ಬೆಣ್ಣೆ ಒಡಲಿಗಿಟ್ಟನೆ
ಮಡದಿ ಅವನ ಹಿಡಿದು ತಾರೆ ಬಡಿದು ಬಿಡುವೆನೇ ೧

ಗೊಲ್ಲ ಸ್ತ್ರೀಯರೆಲ್ಲ ಪೇಳೆ ಸುಳ್ಳು ಎಂದೆನೆ
ಖುಲ್ಲನಾಟ ಎಲ್ಲ ನಾನು ಇಲ್ಲೆ – ಕಂಡೇನೆ ೨

ಯಾತಖೀಗೆ ಪೋತಮಾಳ್ಪ ರೀತಿಯೇನ್ಹೇಳೇ
ನಾಥನೆ ಕೋತಿಯೇನೆ ಪೋತಗುರು ಜಗನ್ನಾಥ ವಿಠಲನೆ ೩

## ಪದ

ಬಗೆ ಬಗೆ ಪುಡುಕಿದಳೂ ಜಗದೋದ್ಧಾರನಾ ಪ

ಬಗೆಬಗೆ ತನಗತಿ ಮಿಗಿ ಮೀರಿದ ಸ್ಮೃತಿ
ನಿಗಮತತಿಗೆ ಸಿಗದ ಅಗಣಿತ ಮಗನಾ ಅ.ಪ

ಓಡೋಡಿ ಪೋದವನಾ ಕತ್ತಲೆಯೊಳು
ಅಡಗಿ ಕುಳ್ಳಿದ್ದವನಾ ................
ಹಡೆದ ತಾಯಿ ತನ್ನ ಹೊಡೆದಾಳೆಂಬೋ ಭಯ
ಪಿಡಿದು ತಾ ಒರಳಿನ ಬುಡಕೆ ಕಟ್ಟುವಳೆಂಬನಾ ೧

ಮೊಲೆಯನುಣುವೆನೆಂದನಾ ಅಮ್ಮಯ್ಯನಾ
ಬಲದ ತೊಡಿಯೊಳು ಕುಳಿತೆನೆಂದನಾ

ಹಲವು ಕೆಲಸಬಿಟ್ಟು ನಿಲಿಸಿ ಮಾಡಿದ ರಸ
ಇಳೆಯಲ್ಲಿ ಸುರವೀದ ಖಳನ ಹಿಡಿವೆನೆಂದು ೨

ಕಟ್ಟಿಗೆಯನೆ ಪಿಡಿದೂ ಕೃಷ್ಣನ ಬಲು
ಘಟ್ಯಾಗಿ ಹೊಡಿವೆನೆಂದೂ
ಸಿಟ್ಟಿಲೆಶೋದೆಯು ಧಿಟ್ಟಗುರುಜಗನ್ನಾಥ
ವಿಠಲನ್ಹಿಡಿದು ನಾ ಕಟ್ಟುವೆನೆನುತ ತ್ವರಾ ೩

## ಪದ

ಬಂದಳಾಗ ಗೋಪಿ ಪ

ಬಂದಳಾಗ ಗೋಪಿ ಛಂದದಿ ಬೀದಿಯೊಳು
ಕಂದನ ಪಿಡಿದು ನಾ ಬಂಧಿಪೆನೆನುತಾ ಅ.ಪ

ಎಡಬಲ ನೋಡದೆ ಓಡುವ ತನಯನ
ಪಿಡಿಯಲು ನೋಡುತಲಿ
ನಡೆದಾಡುವ ಸರಿಹುಡುಗರ ನೋಡುತ
ಹಿಡಿಹಿಡಿರೆನ್ನುತಲೀ
ಮಾಡುವ ಗಡಿಬಿಡಿಯಾ – ಪಿಡಿಮುಡಿಯಾ
ನುಡಿಯತಾ – ನುಡಿಯುತಾ ನಡಿಯುತಾ
ಅಡಗಡಿಗಾಮಡದಿಯು ಬಾಲನ
ಹಿಡಿವೊ ಭರದಿ ತಾ ಗಡಗಡನಡಿಯುತ ೧

ಖಗರಾಜಗಮನನ ಬಗೆನರಿಯದೆ ತನ್ನ
ಮಗನೆಂಬೀ ಭಾವದೊಳು
ಜಗದೊಳು ಈತಗೆ ಮಿಗಿಲಾಗಿಹ ಈ
ಮಗುಗಳಾವೆನ್ನುತಲೀ
ಜಿಗಿದೋಡುವ ಪದಗತಿಯಾ – ಚತುರತಿಯಾ
ಮಾಡುತ್ತಾ ಹಾಡುತ್ತಾ ನೋಡುತ್ತಾ
ನಿಗಮತತಿಗೆ ಸಿಗದಗಣಿತ ಮಹಿಮನ
ನಗೆಮೊಗಚನ್ನಿಗ ನಗೆಹಾಯಿಸುವೆನೆನುತ ೨

ಪುಟಪುಟದಾಡುವ ಎಟುಕದ ಕೃಷ್ಣನ
ಹಟದಿಂದಾರ್ಭಟಿಸೀ
ಕಟಕಟ ತನ್ನ ಪಲ್ಕಟಿಯುತ ದಮ್ಮಿಲಿ
ಮಿಟಿ ಮಿಟಿ ರಂಗನ ನೋಡುತಲಿ
ಓಡದೆ ನಿಂತಾ ಗೋಪಿಯಾ ಅತಿ ಕೋಪಿಯಾ
ನೋಡುವ ಓಡುವ ಆಡುವಾ
ಧಿಟ ಗುರುಜಗನ್ನಾಥ ವಿಠಲನು ಜನನಿಗೆ
ಥಟ್ಟನೆ ಸಿಲಕಿದ ಭಟಜನ ವತ್ಸಲ ೩

ಕಟ್ಟಿ ಬಿಡುವೆನು ಎನುತ ಗೋಪಿಯು
ಸಿಟ್ಟಿನಲಿಯೊಳಪೋಗಿ ಹಗ್ಗವ
ಥಟ್ಟನಲ್ಲಿಯೆ ತಂದು ರಂಗನ ಒರಳ ಬುಡದಲ್ಲಿ
ಪುಟ್ಟಬಾಲನ ಟೊಂಕ ಮಧ್ಯದಿ
ಕಟ್ಟಲಾಗಾ ಪಗ್ಗ ಸಾಲದೆ
ಒಟ್ಟು ದ್ವ್ಯಂಗುಳ ನ್ಯೂನವಾಗಲು ಮತ್ತೆ ಪಗ್ಗಗಳ

### ಆರ್ಯ

ಒಂದೊಂದು ಒಂದು ಮತ್ತೊಂದು
ಮತ್ತೊಂದು ಮತ್ತೊಂದು ಮ್ಯಾಲೆ ಮತ್ತೊಂದು
ಇನ್ನೊಂದು ಇನ್ನೊಂದು ಮುನ್ನೊಂದೂ
ಮುನ್ನೊಂದೂ ಮುನ್ನೊಂದೂ ಮತ್ತೊಂದು ತಾ ತಂದು ೧

ಇಂದು ವದನೆ ಗೋಪೀ ಇಂದಿರೇಶನಾ ತನ್ನಾ
ಕಂದಾನೆಂದು ಲೂಖಲದೀ ಬಂಧಿಸೀ ಪೋದಳೊಳಗೇ

### ಪದ

ಕಟ್ಟಿ ಪೋದಳು ಮಗನಾ ಚನ್ನಾಗಿ ತಾ ಪ

ಕಟ್ಟಿ ಪೋದಳತಿ ಸಿಟ್ಟಿಲಿ ಒರಳಿಗೆ
ಪುಟ್ಟನಿವನಿಗೆ ಇಷ್ಟೆ ಸಾಕೆನುತಲಿ ಅ.ಪ

ಪಟ್ಟದರಸಿ ಪರಮೇಷ್ಠಿ ಪ್ರಮುಖರಿಗೆ
ಥಟ್ಟನೆ ದೊರೆಯದ ಕೃಷ್ಣನ ಈ ಪರಿ ೧

ಜ್ಞಾನಿಜನರ ವರಧ್ಯಾನಕೆ ನಿಲುಕದ ಮ -
ಹಾನುಭಾವನ ತಾ ಸಾನುರಾಗದಲಿ ೨

ಮಾತೆಯು ನಾನಿವ ಪೋತನು ಎಂದೂ
ದಾತಗುರು ಜಗನ್ನಾಥ ವಿಠಲನಾ ೩

## ಶ್ರೀಮದ್ರಾಮ ಭಜನೆ

### ೧೭೬

### ಬಾಲಕಾಂಡ -

ಜಯ ಜಯ ಶ್ರೀ ರಘುರಾಮ
ಜಯ ಜಯ ಸೀತಾರಾಮ ಪ
ಜಯ ಜಯ ಭಜಕರ ಭಯಹರ ತ್ವತ್ಪದ
ದಯದಲಿ ತೋರಿಸೊ - ರಾಮ ಅ.ಪ

### ಸೂಚನೆ

ದಶರಥನೃಪಸುತ ದಶಕಂಧರ ಮುಖ್ಯ
ನಿಶಿಚರಕುಲನಿರ್ಧೂಮ
ಸುರರರ್ಥಿತ ಹರಿ ಧರೆಯೊಳು ತಾನವ
ತರಿಸಿದರಘುಕುಲರಾಮ ೧

ದಶರಥನೃಪಸುತ ಶಿಶು ಭಾವದಲಿ
ವಸುಮತಿ ಮೋಹಿಪ - ರಾಮ ೨

ಸುಂದರ ಸ್ನಾನನದಿಂದಲಿ ಜನಕಾ
ನಂದವ ಬೀರಿದ ರಾಮ ೩

ಒಂದಿನ ಮುನಿವರ ಬಂದಾ ನೃಪವರ
ಕಂದನ ಪ್ರಾರ್ಥಿಸೆ ರಾಮ ೪

ತಂದೆಗೆ ತಾನಭಿವಂದಿಸಿ ಮುನಿಸಹ
ನಂದದಿ ನಡೆದನು ರಾಮ ೫

ದನುಜರ ಸದೆದಾ ಮುನಿಮುಖ ಪೊರೆದ
ಇನಕುಲಸಂಭವ - ರಾಮ ೬

ಶಿಲೆಯನು ತನ ಪದಜಲಜದಲಿಂದ
ಲಲನೆಯ ಮಾಡಿದ ರಾಮ ೭

ಇನಿಯನಿಂದಲಾ ವನಿತೆಯಗೂಡಿಸಿ
ಮುನಿಸಹ ನಡೆದನು ರಾಮ ೮

ಜನಕನ ಪುರವನು ಅನುಜನ ಸಹಿತದಿ
ಮುನಿಯೊಡನೈದಿದ ರಾಮ ೯

ನರವರಸಭೆಯಲಿ ಗಿರಿಶನ ಧನುವನು
ಮುರಿದನು ರಾಘವ - ರಾಮ ೧೦

ಕ್ಷೋಣೀಶನ ಪಣ ಕ್ಷೀಣಿಸಿ ಸೀತೆಯ
ಪಾಣಿಯ ಪಿಡಿದನು-ರಾಮ ೧೧

ಸುದತಿಯು ನೀಡಿದ ಪದುಮದ ಮಾಲೆಯ
ಮುದದಲಿ ಧರಿಸಿದ - ರಾಮ ೧೨

ಜಾನಕಿ ಸೊಗಸಿನ ಆನನಕಮಲಕೆ
ಭಾನುಮನಾದನು - ರಾಮ ೧೩

ಮಾರ್ಗಮಧ್ಯದಿ ಭಾರ್ಗವ ಬರಲು
ಮಾರ್ಗಣ ಎಸೆದನು – ರಾಮ ೧೪

ಲಕ್ಷಣಸತಿಯುತ ಲಕ್ಷ್ಮಣ ಸಹಿತದಿ
ತಕ್ಷಣ ನಡೆದನು – ರಾಮ ೧೫

ಸೀತೆಯ ಸಹ ಸಾಕೇತದ ಜನರಿಗೆ
ಪ್ರೀತಿಯಗೊಳಿಸಿದ – ರಾಮ ೧೬

## ಅಯೋಧ್ಯಾಕಾಂಡ

ಸುತನಿಗೆ ಪಟ್ಟದ ಯತನಕೆ ವಿಘ್ನವ
ಸತಿಯಳು ಮಾಡಲು – ರಾಮ ೧೭

ಧ್ವರಿತನ ಪಟ್ಟವ ಭರತಗೆ ನೇಮಿಸಿ
ತ್ವರದಲಿ ನಡೆದನು – ರಾಮ ೧೮

## ಅರಣ್ಯಕಾಂಡ

ನಾರಿನ ಮಡಿಯನು ಜಾರದಲುಟ್ಟು
ಸಾಗಿದ ವನದಲಿ – ರಾಮ ೧೯

ಸಾನುಜ ರಘುವರ ಮಾನಿನಿ ಸಹಿತ
ಕಾನನ ಚರಿಸಿದ– ರಾಮ ೨೦

ಅನುಜನ ಕೈಯಲಿ ದನುಜೆಯ ನಾಸಿಕ
ಹನನವ ಗೈಸಿದ – ರಾಮ ೨೧

ಖರಮುಖದನುಜರ ತರಿದಾ ರಘುವರ
ಚರಿಸಿದ – ವನವನ – ರಾಮ ೨೨

ಪಂಚವಟಿಯಲಿ ಚಂಚಲನೇತ್ರೆಯ
ವಂಚಿಪ ಮೃಗ ಬರೆ – ರಾಮ ೨೩

ರಾಣಿಯು ಬೇಡಲು ಬಾಣದಿ ಸದೆದು
ಕ್ಷೋಣಿಗೆ ಕೆಡಹಿದ – ರಾಮ ೨೪

ದೀನಧ್ವನಿಯನು ಮಾನಿನಿ ಕೇಳಿ
ಹೀನೋಕ್ತಿಯ ನುಡಿಯಲು – ರಾಮ ೨೫

ಸೀತೆಯ ವಚನದಿ ಕಾತರ ಮನದಿಂ
ದಾತನು ನಡೆದನು – ರಾಮ ೨೬

ರಾಕ್ಷಸರಾವಣ ವೀಕ್ಷಿಸಿ ಸೀತೆಯ
ನಾಕ್ಷಣ ವೈದನು – ರಾಮ ೨೭

ಲೋಕಜನನಿಯಾಶೋಕವನದಲಿ
ಶೋಕದಲಿಟ್ಟನು – ರಾಮ ೨೮

ತರುಣಿಕುಲೋದ್ಭವ ಪರಣಶಾಲೆಯೊಳು
ತರುಣಿಯ ಕಾಣದೆ – ರಾಮ ೨೯

ಪೊಡವಿತನಯಳ ಪುಡುಕುವ ನೆವದಿ
ಅಡವಿಯ ಚರಿಸಿದ – ರಾಮ ೩೦

ಕಂಜಮುಖಿಯಳ ಕುಂಜದಿ ಪುಡುಕಿದ
ಕಂಜಲೋಚನ – ರಾಮ ೩೧

ಮಾಯದ ಸೀತಾಕಾಯದ ಸುದ್ದಿ ಜ
ಟಾಯು ಪೇಳಿದ – ರಾಮ ೩೨

ಪಕ್ಷಗಳಿಲ್ಲದ ಪಕ್ಷಿಯ ಮುಖದಿ ಸ –
ಲಕ್ಷಣ ಕೇಳಿದ – ರಾಮ ೩೩

ಅರಸುತ ಬರುತಿರೆ ಗಿರಿಯಲಿ ಅಂಜನೆ
ತರಳನ ಕಂಡನು – ರಾಮ ೩೪

ಮರುತನು ರಾಮನ ಶಿರಸದಿ ನಮಿಸಿ
ಕರಯುಗ ಮುಗಿದನು – ರಾಮ ೩೫

ಅನುಪಮ ಕರುಣದಿ ಹನುಮನ ಗ್ರಹಿಸಿದ
ಇನಕುಲಸಂಭವ – ರಾಮ ೩೬

## ಕಿಷ್ಕಿಂಧಾಕಾಂಡ

ದೇವಿಯ ನೆವ ಸುಗ್ರೀವನ ಸಖ್ಯವ
ತಾ ವಹಿಸಿದನು – ರಾಮ ೩೭

ಶೀಲ ಬಹುಬಲಶಾಲಿ ಎನಿಸಿಹ
ವಾಲಿಯ ಕೊಂದನು – ರಾಮ ೩೮

ಥಟ್ಟನೆ ರವಿಜಗೆ ಪಟ್ಟವ ಗಟ್ಟೀ
ಧಿಟ್ಟ ಕಪಿಗಳ ನೆರಹಿದ – ರಾಮ ೩೯

ದ್ವಿಪಗಂಪ್ವರದ ಕಪಿಗಳ ಕರೆಸಿ
ವಿಪಿನಕೆ ಕಳಿಸಿದ – ರಾಮ ೪೦

ಕಾನನದಲಿ ತಾವು ಜಾನಕಿ ಕಾಣದೆ
ಧ್ಯಾನದಿ ಕುಳಿತರು – ರಾಮ ೪೧

## ಸುಂದರಕಾಂಡ

ವನಿತೆಯ ಗೋಸುಗ ಹನುಮನು ವೇಗದಿ
ವನಧಿಯ ದಾಟಿದ – ರಾಮ ೪೨

ಬಿಂಕದಿ ಹನುಮನು ಲಂಕೆಯ ಪೊಕ್ಕು
ಮಂಕುದನುಜರ – ರಾಮ ೪೩

ವನಗಿರಿ ದುರ್ಗದಿ ವನಜಾಕ್ಷಿಯನು
ಮನದಣಿ ಪುಡಿಕಿದ – ರಾಮ ೪೪

ಧಾರುಣಿ ತನಯಳ ಸಾರುವೆನೆನುತ
ಊರಲಿ ಪುಡುಕಿದ – ರಾಮ ೪೫

ಓಣಿಗಳೊಳು ತಾ ಕ್ಷೋಣಿತನಯಳಾ
ಕಾಣದೆ ತಿರುಗಿದ – ರಾಮ ೪೬

ಲೋಕದ ಮಾತೆಯಾ ಶೋಕವನದೊಳಾ
ಲೋಕನಗೈದನು – ರಾಮ ೪೭

ಕಾಮಿನಿಮಣಿಗೆ ರಾಮನ ವಾರ್ತೆಯ
ಪ್ರೇಮದಿ ಪೇಳಿದ – ರಾಮ ೪೮

ರಾಮನ ಶುಭಕರನಾಮದ ವಾರ್ತೆಯ
ಪ್ರೇಮದಿ ಪೇಳಿದ – ರಾಮ ೪೯

ರಾಮನ ಶುಭತಮನಾಮದ ಮುದ್ರಿಕೆ
ಪ್ರೇಮದಿ ನೀಡಿದ – ರಾಮ ೫೦

ರೂಢಿಜದೇವಿಯ ಚೂಡಾಮಣಿಯ
ನೀಡುವೆನೆಂದನು – ರಾಮ ೫೧

ಕಾಮಿನಿ ಮಣಿಗೆ ರಾಮನ ವಾರ್ತೆಯ
ಪ್ರೇಮದಿ ಪೇಳಿದ – ರಾಮ ೫೨

ಕುಶಲದ ವಾರ್ತೆಯ ಶಶಿಮುಖಿ ಕೇಳಿ
ವ್ಯಸನದಿ ನುಡಿದಳು – ರಾಮ ೫೩

ಕೋತಿಯೆ ಇಲ್ಲಿಗೆ ಯಾತಕೆ ಬಂದೆಯೊ
ಘಾತಿಪರಸುರರು – ರಾಮ ೫೪

ಬಲಹಿನನು ನೀ ಬಲವಂತರಸುರರು
ಛಲಮಾಡದೆ ನಡಿ – ರಾಮ ೫೫

ಘನತರ ಲಂಕೆಗೆ ವನಚರ ಬಂದೆಯೊ
ದನುಜರು ಕೊಲ್ವರು – ರಾಮ ೫೬

ರಾಕ್ಷಸ ಗಣ ತಾ ವೀಕ್ಷಿಸಿ ನಿನ್ನನು
ಶಿಕ್ಷೆಯ ಗೈವುದು – ರಾಮ ೫೭

ಮಾತೆಯೆ ತಿಳಿ ಎನಗ್ಯಾತರ ಭಯ ರಘು
ನಾಥನು ಕಾಯುವ – ರಾಮ ೫೮

ಅಖಣಾಶ್ಮ ನಾ ರಾಮನ ದಯದಲಿ
ನೀ ಕರುಣಿಸು ತಾಯೆ – ರಾಮ ೫೯

ಮರುತಾತ್ಮಜ ತಾ ಭರದಲಿ ನಡೆದು
ತರುಗಳ ಕಿತ್ತಿದ – ರಾಮ ೬೦

ಅಶೋಕ ವನದ ಸಶೋಕವಾರ್ತೆಯ
ನಿಶಿಚರ ಕೇಳಿದ – ರಾಮ ೬೧

ಕೋತಿಯ ಹಿಡಿಯಲು ಕಾತುರದಿಂದಲಿ
ದೂತರ ಕಳುಹಿದ – ರಾಮ ೬೨

ಲಕ್ಷ್ಯ ಮಾಡದೆ ತಕ್ಷಣ ಕೋತಿಯ
ಶಿಕ್ಷಿಪೆನೆನುತಲಿ – ರಾಮ ೬೩

ಬಂದಾ ರಾವಣಕಂದನ ನೋಡಿ
ನಂದದಿ ನಲಿದನು – ರಾಮ ೬೪

ಅಕ್ಷಕುಮಾರನ ಲಕ್ಷಿಯ ಮಾಡದೆ
ತಕ್ಷಣ ಕೊಂದನು – ರಾಮ ೬೫

ಯುದ್ಧದಲತಿ ಸನ್ನದ್ಧರಾದ ಪ್ರ
ಸಿದ್ಧ ದಿತಿಜರು – ರಾಮ ೬೬

ಶಕ್ತಿಯು ಸಾಲದಶಕ್ತರಾಗಿ ಬಹು
ಯುಕ್ತಿಯ ಮಾಡ್ದರು – ರಾಮ ೬೭

ಇಂದ್ರಾರಾತಿಯು ನಂದದಿ ಬಂದು
ನಿಂದನು ರಣದಲಿ – ರಾಮ ೬೮

ಬೊಮ್ಮನಸ್ತ್ರವ ಘಮ್ಮನೆ ಹಾಕಲು
ಸುಮ್ಮನ ಸಿಕ್ಕನು – ರಾಮ ೬೯

ಮಾತೆಯ ಕಂಡಾರಾತಿಯ ಪುರವರ
ನಾಥನ ಕಂಡನು – ರಾಮ ೭೦

ಮುಖ್ಯಾಗ್ರಣಿ ಕೇಳ್ ಲೇಖಾಗ್ರಣಿ ಶಿರಿ
ಕಾಕುತ್ಥಾನ್ವಯ – ರಾಮ ೭೧

ರಾಮನ ಪದಯುಗತಾಮರಸಕೆ ನಾ
ಪ್ರೇಮದ ಭಕ್ತನು – ರಾಮ ೭೨

ಶ್ರೀನಿಧಿ ರಾಮನ ಮಾನಿನಿತಸ್ಕರ
ದಾನವ ಕೇಳೆಲೊ – ರಾಮ ೭೩

ದುಷ್ಟನೆ ತಿಳಿ ನೀ ಸೃಷ್ಟಿಯೆ ಮೊದಲಾ
ದಷ್ಟಕರ್ತನು – ರಾಮ ೭೪

ಭ್ರಷ್ಟರಾವಣ ಸುರಶ್ರೇಷ್ಠನ ವೈರದಿ
ನಷ್ಟನು ನೀನಾಗುವಿ – ರಾಮ ೭೫

ಜಾನಕಿ ರಮಣನು ಮಾನವನಲ್ಲವೊ
ದಾನವಾಂತಕನು – ರಾಮ ೭೬

ಬಲವದ್ವೇಷವು ಸುಲಭಲ್ಲವೊ ತವ
ಕುಲನಾಶಾಗೊದೊ – ರಾಮ ೭೭

ಕಾನನಕೋತಿಯೆ ಏನಾಡಿದಿ ನುಡಿ
ಹಾನಿಯ ಮಾಡುವೆ – ರಾಮ ೭೮

ಆ ಕ್ಷಣ ರಾವಣ ರಾಕ್ಷಸ ಜನರಿಗೆ
ಶಿಕ್ಷಿಸಿರೆಂದನು – ರಾಮ ೭೯

ಕೋತಿಯ ಕೊಂದರೆ ಪಾತಕ ಬಪ್ಪೊದು
ಘಾತವು ಸಲ್ಲದು – ರಾಮ ೮೦

ತರುವರನೇರಿದ ವಾನರಬಾಲದಿ
ತರುವೈರಿಯನಿಟ್ಟರು – ರಾಮ ೮೧

ಹರಿವರ ತಾನೇ ಉರಿಯಲಿ ಲಂಕಾ
ಪುರವನು ದಹಿಸಿದ – ರಾಮ ೮೨

ವಾನರನಾಥನು ಕಾನನ ಸುರವರ
ರಾನನಕಿತ್ತನು – ರಾಮ ೮೩

ದಿತಿಜತತಿಯನು ಹತಗೈದಾ ಕಪಿ
ನತಿಸಿದ ಸೀತೆಗೆ – ರಾಮ ೮೪

ಸಾಗರ ಲಂಘಿಸಿ ವೇಗದಿ ಬಂದು
ಬಾಗಿದ ಸ್ವಾಮಿಗೆ – ರಾಮ ೮೫

ರಾಮನ ಪದಕೆ ಪ್ರೇಮದಿ ನಮಿಸಿ
ಕ್ಷೇಮವ ತಿಳಿಸಿದ – ರಾಮ ೮೬

ಕಾಮಿನಿಕೊಟ್ಟಿಹ ಹೇಮದ ರಾಗಟೆ
ಸ್ವಾಮಿಗೆ ನೀಡಿದ – ರಾಮ ೮೭

## ಯುದ್ಧಕಾಂಡ

ಉಗ್ರಮನದ ಸುಗ್ರೀವ ಕಪಿಗಳ
ನಿಗ್ರಹಗೈಸಿದ – ರಾಮ ೮೮

ಗಿರಿತರುಗಳ ತಾ ತ್ವರದಲಿ ತರಿಸಿ
ಶರಧಿಯ ತಟ್ಟಿದ – ರಾಮ ೮೯

ಸೀತೆಯ – ಗೋಸುಗ ಸೇತುಮಾರ್ಗದಿ ರಘು
ನಾಥನು ನಡೆದನು – ರಾಮ ೯೦

ವಾನರನಾಯಕ ಸೇನೆಯ ಸಹಿತದಿ
ತಾನು ನಡೆದನು – ರಾಮ ೯೧

ದಶಮುಖನಗರಿಯ ವಶದಲಿ ಮಾಡಿದ
ನಸಮಮಹಿಮನು – ರಾಮ ೯೨

ಕಾಮಿನಿ ನೆವದಲಿ ರಾಮ ದನುಜರಿಗೆ
ಆಮಹಯುದ್ಧವು – ರಾಮ ೯೩

ಪಾವಿನ ಬಾಣದಿ ರಾವಣಿ ಲಕ್ಷ್ಮಣ
ಜೀವನ ಕಳೆಯಲು – ರಾಮ ೯೪

ಪಾವನಿ ತಾ ಸಂಜೀವನ ಪರ್ವತ
ತೀವ್ರದಿ ತಂದನು – ರಾಮ ೯೫

ಸೇವಕಹನುಮನು ದೇವನ ತಮ್ಮಗೆ
ಜೀವನವಿತ್ತನು – ರಾಮ ೯೬

ತಂದೆಯ ಪುರದಲಿ ಇಂದ್ರನ ವೈರಿಯ
ಕೊಂದನು ಲಕ್ಷ್ಮಣ – ರಾಮ ೯೭

ಮೂಲ ಬಲವನು ಲೀಲೆಯಿಂದ ನಿ
ರ್ಮೂಲವ ಗೈಸಿದ – ರಾಮ ೯೮

ಅಂಬುಧಿತೆರ ತಾ ಸಂಭ್ರಮಸೈನ್ಯ ಕ
ದಂಬವ ನೋಡಿದ – ರಾಮ ೯೯

ಅಂಬುಗಳೆಸೆದಾ ಕುಂಭಕರ್ಣನಾ
ಕುಂಭಿಣಿಗಿಳಿಸಿದ – ರಾಮ ೧೦೦

ಕರೆಸಲು ದಿತಿಜನು ಶರವೃಷ್ಟಿಯ ತಾ
ಸುರಸಿದ ರಣದಲಿ – ರಾಮ ೧೦೧

ರಾವಣನುಜರ ಜೀವನ ಕಳೆದನು
ದೇವಶಿಖಾಮಣಿ – ರಾಮ ೧೦೨

ರಾಕ್ಷಸವರ್ಯನ ವಕ್ಷೋದಾರಣ
ವಾಕ್ಷಣ ಗೈಸಿದ – ರಾಮ ೧೦೩

ಗುಣಯುತ ವಿಭೀಷಣನಿಗೆ ಪಟ್ಟವ
ಕ್ಷಣದಲಿ ಕಟ್ಟಿದ – ರಾಮ ೧೦೪

ಸತಿನಿಜಅನುಜಾಮಿತಮರ್ಕಟವರ
ತತಿಸಹ ಹೊರಟನು – ರಾಮ ೧೦೫

ಬಿಸಜಾಂಬಕ ತಾ ಕುಸುಮದ ರಥವನು
ಕುಶಲದಲೇರಿದ – ರಾಮ ೧೦೬

ಮಂದಗಮನಿ ಸಹ ನಂದಿಗ್ರಾಮಕೆ
ನಂದದಿ ಬಂದನು – ರಾಮ ೧೦೭

ಭರತನ ಸಹಿತದಿ ಪುರವನು ಸಾರಿದ
ಸರಸಗುಣಾರ್ಣವ – ರಾಮ ೧೦೮

ತಂದೆಯ ತ್ವರ ಪುರಂದರ ಲೋಕದ
ಲಿಂದ ಕರೆಸಿದ – ರಾಮ ೧೦೯

ಶಿಷ್ಟರೆನಿಪ ವಸಿಷ್ಠ ದ್ವಿಜಕುಲ
ಶ್ರೇಷ್ಠರ ಕರೆಸಿದ – ರಾಮ ೧೧೦

ಶುಭದಿನದಲಿ ಮಹವಿಭವ ಪೂರ್ವಕ
ಸಭೆಯನು ಸಾರಿದ – ರಾಮ ೧೧೧

ಸ್ವಸ್ತಿ ವಾಚನಾ ತಾ ಸ್ವಸ್ಥ ಮನದಿ ಪ್ರಾ
ಶಸ್ತವಗೈಸಿದ – ರಾಮ ೧೧೨

ವಿಪ್ರರ ಭೋಜನ ಕ್ಷಿಪ್ರದಿ ಗೈಸಿದ
ನಪ್ರತಿ ಪುರುಷನು – ರಾಮ ೧೧೩

ರೂಢಿಯೆ ಮೊದಲಾಷೋಡಶ ದಾನವ
ನೀಡಿದ ದ್ವಿಜರಿಗೆ – ರಾಮ ೧೧೪

ರಾಮನು ಸಾರ್ವಭೌಮನಾಗಿ ಈ
ಭೂಮಿಯನಾಳಿದ – ರಾಮ ೧೧೫

ರಮೆಯಿಂದಲಿ ತಾ ರಮಿಸಿದ ಸೀತಾ
ರಮಣನು ರಘುಕುಲ – ರಾಮ ೧೧೬

ದಶರಥಸುತ ತ್ರಿದಶರಿಂದಲಿ ಈ
ವಸುಧೆಯ ಪೊರೆದನು – ರಾಮ ೧೧೭

ಅಂಜನಿ ತನಯಗೆ ಕಂಜಜಪಟ್ಟವ
ರಂಜಿಸಿ ನೀಡಿದ – ರಾಮ ೧೧೮

ರಾಜ ರಾಜ ರಾಜೀವನಯನ ತನ
ಭೋಜನ ನೀಡಿದ – ರಾಮ ೧೧೯

ಕಂಜಾಕ್ಷನ ಪದಕಂಜಭಜಕ ಪ್ರಾ
ಭಂಜನಸುತ ಕಪಿ – ರಾಮ ೧೨೦

ಚಂಪಕ ತರುಲತ ಕಂಪಿತ ಶುಭತರ
ಕಿಂಪುರುಷ್ಯೆದಿದ – ರಾಮ ೧೨೧

ಮೋಕ್ಷದ ಸುಖವಾಪೇಕ್ಷಿಪಜನರನು
ವೀಕ್ಷಿಸಿ ಕರೆದನು – ರಾಮ ೧೨೨

ತನ್ನಲಿ ಭಕುತಿಯ ಚನ್ನಾಗಿ ಪಾಲಿಸಿ
ಮನ್ನಿಸಿ ಪೊರೆದನು – ರಾಮ ೧೨೩

ದುಷ್ಟರ ನಿಗ್ರಹ ಶಿಷ್ಟರ ಪಾಲಕಾ
ನಿಷ್ಟವ ಕಳೆದನು – ರಾಮ ೧೨೪

ಸಾನುಜಸತಿಸಹ ಜ್ಞಾನಮಯ ಬಹು
ಮಾನದಿ ಪೊರೆದನು – ರಾಮ ೧೨೫

ಕ್ಷುದ್ರರು ಮಾಳ್ಪೋಪದ್ರವ ಕಳೆದು
ಭದ್ರವ ನೀಡಿದ – ರಾಮ ೧೨೬

ಮೋದವೆ ದಕ್ಷ ಪ್ರಮೋದೋತ್ತರ ನಿಜ
ಮೋದಾವಯವನು – ರಾಮ ೧೨೭

ಪೂರ್ಣರೂಪ ತಾ ಪೂರ್ಣಗುಣಾರ್ಣವ
ಪೂರ್ಣನೆನಿಸಿದ – ರಾಮ ೧೨೮

## ಫಲಶ್ರುತಿ

ರಾಮನ ಭಜನೆಯ ನೇಮದಿ ಮಾಡಲು
ಕಾಮಿತ ನೀಡುವ – ರಾಮ ೧೨೯

ಅರ್ಗಳವಾಗಿಹ ದುರ್ಗೋಪದ್ರ ಸಂ –
ಸರ್ಗವ ಕಳೆದನು – ರಾಮ ೧೩೦

ದೂತಜನರಗತಿದಾತನು ಗುರುಜಗ
ನ್ನಾಥವಿಠಲನು – ರಾಮ ೧೩೧

## ಶ್ರೀ ವೆಂಕಟೇಶಸ್ತವರಾಜ

## ೧೭೭

ಶ್ರೀರಮಣ ಸರ್ವೇಶ ಸರ್ವಗ
ಸಾರಭೋಕ್ತ ಸ್ವತಂತ್ರ ಸರ್ವದ
ಪಾರಮಹಿಮೋದಾರ ಸದ್ಗುಣಪೂರ್ಣಗಂಭೀರ
ಸಾರಿದವರಘ ದೊರಗೈಸೀ
ಸೂರಿಜನರಿಗೆ ಸೌಖ್ಯ ನೀಡುವ
ಧಿರವೆಂಕಟರಮಣ ಕರುಣದಿ ಪೊರೆಯೋ ನೀ ಎನ್ನ ೧

ಘನ್ನ ಮಹಿಮಾಪನ್ನ ಪಾಲಕ
ನಿನ್ನ ಹೊರತಿನ್ನನ್ಯದೇವರ
ಮನ್ನದಲಿ ನಾ ನೆನಿಸೆನೆಂದಿಗು ಬನ್ನ ಬಡಿಸಿದರು ।
ಎನ್ನ ಪಾಲಕ ನೀನೆ ಇರುತಿರೆ
ಇನ್ನು ಭವಭಯವೇಕೆ ಎನಗೆ
ಚನ್ನ ವೆಂಕಟರಮಣ ಕರುಣದಿ ಪೊರೆಯೊ ನೀ ಎನ್ನ ೨

ಲಕುಮಿಬೊಮ್ಮಭವಾಮರೇಶರು
ಭಕುತಿಪೂರ್ವಕ ನಿನ್ನ ಭಜಿಸೀ
ಸಕಲಲೋಕಗೆ ನಾಥರೆನಿಪರೊ ಸರ್ವಕಾಲದಲಿ
ನಿಖಿಳ ಜೀವರಪೊರೆವೊ ದೇವನೆ
ಭಕುತಿ ನೀ ಯೆನಗೀಯದಿರಲು
ವ್ಯಕುತವಾಗ್ಯಪಕೀರ್ತಿ ಬಪ್ಪುದೊ ಶ್ರೀನಿಕೇತನನೆ ೩

ಯಾಕೆ ಪುಟ್ಟದೊ ಕರುಣ ಎನ್ನೊಳು
ಸಾಕಲಾರೆಯ ನಿನ್ನ ಶರಣನ
ನೂಕಿಬಿಟ್ಟರೆ ನಿನಗೆಲೋಕದಿ ಖ್ಯಾತಿ ಬಪ್ಪುವುದೇ
ನೋಕನೀಯನೆ ನೀನೆ ಎನ್ನನು
ಜೋಕೆಯಿಂದಲಿ ಕಾಯೊ ಬಿಡದೆ
ಏಕದೇವನು ನೀನೆ ವೆಂಕಟಶೇಷಗಿರಿವಾಸ ೪

ಅಂಬುಜಾಂಬಕ ನಿನ್ನ ಪದಯುಗ
ನಂಬಿಕೊಂಡೀ ಪರಿಯಲಿರುತಿರೆ
ಡೊಂಬೆಗಾರನ ತೆರದಿ ನೀ ನಿರ್ಭಾಗ್ಯ ಸ್ಥಿತಿತೋರೆ
ಬಿಂಬಮೂರುತಿ ನಿನ್ನ ಕರಗತ
ಕಂಬುವರವೇ ಗತಿಯೊ ವಿಶ್ವ
ಕುಟುಂಬಿ ಎನ್ನನು ಸಲಹೊ ಸಂತತ ಶೇಷಗಿರಿವಾಸ ೫

ಸಾರಶಿರಿ ವೈಕುಂಠ ತ್ಯಜಿಸೀ
ಧಾರುಣೀಯೊಳು ಗೊಲ್ಲನಾಗೀ

ಚೋರಕರ್ಮವ ಮಾಡಿ ಬದುಕಿಹದಾರಿಗರಿಕಿಲ್ಲ
ಸಾರಿ ಪೇಳುವ ನಿನ್ನ ಗುಣಗಳ
ಪಾರವಾಗಿರುತಿಹವೊ ಜನರಿಗೆ
ಧೀರ ವೆಂಕಟರಮಣ ಕರುಣದಿ ಪೊರೆಯೊ ನೀ ಎನ್ನ ೬

ನೀರಮುಳುಗೀ ಭಾರಪೊತ್ತೂ
ಧಾರುಣೀ ತಳವಗಿದು ಸಿಟ್ಟಿಲಿ
ಕ್ರೂರನುದರವ ಶೀಳಿ ಕರುಳಿನ ಮಾಲೆಧರಿಸಿದರು
ಪೋರವಿಪ್ರಕುಠಾರಿ ವನವನ
ಚಾರಿಗೋಪ ದಿಗಂಬರಾಶ್ವವ
ಏರಿ ಪೋದರು ಬಿಡೆನೊ ವೆಂಕಟಶೇಷಗಿರಿವಾಸ ೭

ಲಕ್ಷ್ಮಿ ನಾಯಕಸಾರ್ವಭೌಮನೆ
ಪಕ್ಷಿವಾಹನ ಪರಮಪುರುಷನೆ
ಮೋಕ್ಷದಾಯಕ ಪ್ರಾಣಜನಕನೆ ವಿಶ್ವವ್ಯಾಪಕನೆ
ಅಕ್ಷಯಾಂಬರ ವಿತ್ತಿವಿಜಯನ
ಪಕ್ಷಪಾತವ ಮಾಡಿ ಕುರುಗಳ
ಲಕ್ಷಮಾಡದೆ ಕೊಂದೆಯೋ ಶ್ರೀಶೇಷಗಿರಿವಾಸ ೮

ಹಿಂದೆ ನೀ ಪ್ರಹ್ಲಾದಗೋಸುಗ
ಎಂದುನೋಡದ ರೂಪಧರಿಸೀ
ಬಂದು ದೈತ್ಯನ ಒಡಲಬಗೆದೂ ಪೊರೆದೆ ಬಾಲಕನ
ತಂದೆತಾಯ್ಗಳ ಬಿಟ್ಟು ವಿಪಿನದಿ
ನಿಂದು ತಪಿಸುವ ಪಂಚವತ್ಸರ
ಕಂದನಾಧ್ರುವಗೊಲಿದು ಪೊರೆದೆಯೊ ಶೇಷಗಿರಿವಾಸ ೯

ಮಡುವಿನೊಳಗಿಹ ಮಕರಿಕಾಲನು
ಪಿಡಿದು ಬಾಧಿಸೆ ಕರಿಯು ತ್ರಿಜಗ
ದ್ವಡೆಯ ಪಾಲಿಸೊ ಎನಲು ತಕ್ಷಣ ಬಂದು ಪಾಲಿಸಿದೆ
ಮಡದಿ ಮಾತನು ಕೇಳಿಬಲುಪರಿ

ಬಡವ ಬ್ರಾಹ್ಮಣ ಧಾನ್ಯಕೊಡಲು
ಪೊಡವಿಗಸದಳ ಭಾಗ್ಯನೀಡಿದೆ ಶೇಷಗಿರಿವಾಸ ೧೦

ಪಿಂತೆ ಮಾಡಿದ ಮಹಿಮೆಗಳ ನಾ
ನೆಂತು ವರ್ಣಿಸಲೇನು ಫಲ ಶ್ರೀ
ಕಾಂತ ಎನ್ನನು ಪೊರೆಯೆ ಕೀರುತಿ ನಿನಗೆ ಫಲವೆನಗೆ
ಕಂತುಜನಕನೆ ಎನ್ನ ಮನಸಿನ
ಅಂತರಂಗದಿ ನೀನೆ ಸರ್ವದ
ನಿಂತು ಪ್ರೇರಣೆ ಮಾಳ್ಪೆ ಸರ್ವದ ಶೇಷಗಿರಿವಾಸ ೧೧

ಶ್ರೀನಿವಾಸನೆ ಭಕ್ತಪೋಷನೆ
ಜ್ಞಾನಿ ಕುಲಗಳಿಗಭಯದಾಯಕ
ದೀನಬಾಂಧವ ನೀನೆ ಎನಮನದರ್ಥಪೊರೈಸೊ
ಅನುಪಮೋಪಮಜ್ಞಾನ ಸಂಪದ
ವಿನಯಪೂರ್ವಕ ವಿತ್ತು ಪಾಲಿಸೊ
ಜನುಮ ಜನುಮಕೆ ಮರೆಯಬೇಡವೋ ಶೇಷಗಿರಿವಾಸ ೧೨

ಮದವು ಮತ್ಸರ ಲೋಭ ಮೋಹವು
ಒದಗಬಾರದು ಎನ್ನ ಮನದಲಿ
ಪದುಮನಾಭನೆ ಜ್ಞಾನಭಕ್ತಿ ವಿರಕ್ತಿ ನೀನಿತ್ತು
ಹೃದಯ ಮಧ್ಯದಿ ನಿನ್ನ ರೂಪವು
ವದನದಲಿ ತವನಾಮ ಮಂತ್ರವು
ಸದಯ ಪಾಲಿಸು ಬೇಡಿಕೊಂಬೆನೊ ಶೇಷಗಿರಿವಾಸ ೧೩

ಅಂದನುಡಿಪುಸಿಯಾಗಬಾರದು
ಬಂದ ಭಾಗ್ಯವು ಪೋಗಬಾರದು
ಕುಂದು ಬಾರದೆ ನಿನ್ನ ಕರುಣವು ದಿನದಿ ವರ್ಧಿಸಲಿ
ನಿಂದೆ ಮಾಡುವ ಜನರ ಸಂಗವು
ಎಂದಿಗಾದರು ದೊರೆಯಬಾರದು
ಎಂದು ನಿನ್ನನು ಬೇಡಿಕೊಂಬೆನೊ ಶೇಷಗಿರಿವಾಸ ೧೪

ಏನು ಬೇಡಲಿ ಎನ್ನ ದೇವನೆ
ಸಾನುರಾಗದಿ ಎನ್ನ ಪಾಲಿಸೊ
ನಾನವಿಧವಿಧ ಸೌಖ್ಯ ನೀಡುವದಿಹ ಪರಂಗಳಲಿ
ಶ್ರೀನಿವಾಸನೆ ನಿನ್ನ ದಾಸಗೆ
ಏನು ಕೊರತಿಲ್ಲೆಲ್ಲಿ ನೋಡಲು
ನೀನೆ ನಿಂತೀವಿಧದಿ ಪೇಳಿಸು ಶೇಷಗಿರಿವಾಸ ೧೫

ಆರು ಮುನಿದವರೇನು ಮಾಳ್ಪರೊ
ಆರು ಒಲಿದವರೇನು ಮಾಳ್ಪರೊ
ಆರು ನೇಹಿಗಾರಾರು ದ್ವೇಷಿಗಳಾರುದಾಶಿನರು
ಕ್ರೂರ ಜೀವರಹಣಿದು ಸಾತ್ವಿಕ
ಧೀರಜೀವರ ಪೊರೆದು ನಿನ್ನಲಿ
ಸಾರಭಕುತಿಯನಿತ್ತು ಪಾಲಿಸೊ ಶೇಷಗಿರಿವಾಸ ೧೬

ನಿನ್ನ ಸೇವೆಯನಿತ್ತು ಎನಗೇ
ನಿನ್ನ ಪದಯುಗ ಭಕ್ತಿ ನೀಡಿ
ನಿನ್ನಗುಣ ಗಣ ಸ್ತವನ ಮಾಡುವ ಜ್ಞಾನನೀನಿತ್ತು
ಎನ್ನ ಮನದಲಿ ನೀನೆ ನಿಂತೂ
ಘನ್ನ ಕಾರ್ಯವ ಮಾಡಿ ಮಾಡಿಸು
ಧನ್ಯನೆಂದೆನಿಸೆನ್ನ ಲೋಕದಿ ಶೇಷಗಿರಿವಾಸ ೧೭

ಜಯ ಜಯತು ಶಠ ಕೂರ್ಮ ರೂಪನೆ
ಜಯ ಜಯತು ಕಿಟ ಸಿಂಹವಾಹನ
ಜಯ ಜಯತು ಭೃಗುರಾಮ ರಘುಕುಲಸೋಮಶ್ರೀರಾಮ
ಜಯ ಜಯತು ಶಿರಿ ಯದುವರೇಣ್ಯನೆ
ಜಯ ಜಯತು ಜನಮೋಹಬುದ್ಧನೆ
ಜಯ ಜಯತು ಕಲಿಕಲ್ಮಷಘ್ನನೆ ಕಲ್ಕಿನಾಮಕನೆ ೧೮

ಕರುಣಸಾಗರ ನೀನೆ ನಿಜಪದ
ಶರಣ ವತ್ಸಲ ನೀನೆ ಶಾಶ್ವತ

ಶರಣ ಜನ ಮಂದಾರ ಕಮಲಾಕಾಂತ ಜಯವಂತ
ನಿರುತ ನಿನ್ನನು ನುತಿಸಿ ಪಾಡುವೆ
ವರದ ಗುರು ಜಗನ್ನಾಥ ವಿಠಲ
ಪರಮ ಪ್ರೇಮದಿ ಪೊರೆಯೊ ಎನ್ನನು ಶೇಷಗಿರಿವಾಸ ೧೯

## ಲಕ್ಷ್ಮೀಸ್ತವರಾಜ ಪ್ರಾಕೃತ

## ೧೭೮

ಹರಿಯರಸಿ ಸಿರಿನೀನೆ ಸರ್ವದ
ಹರಿಯ ವಕ್ಷಸ್ಥಲ ನಿವಾಸಿನಿ
ಹರಿಯ ದಕ್ಷಿಣ ತೊಡೆಯೊಳೊಪ್ಪುತಕಾಲದೇಶದಲಿ
ಹರಿಯ ಸಹಿತದಿ ಹರ್ಯನುಜ್ಞದಿ
ಹರಿಯ ಸೇವಾನಿರುತಗೈಯುತ
ಹರಿಯ ಪದಕೆ ನೀಡಿ ಸುಖಿಸುವ ಶಿರಿಯೆ ವಂದಿಪೆನು ೧

ಹರಿಯ ಕರುಣದಿ ಸರಸಿಜಾಂಡವ
ಹರಿಯ ಸಹಿತದಿ ಹರಿಯ ತೆರದಲಿ
ಹರಿಯ ಮನಕತಿ ಪ್ರೀತಿಗೋಸುಗ ಸೃಷ್ಟಿಸ್ಥಿತಿಲಯವ
ಹರಿಯ ಚಿತ್ತನುಕೂಲಮಾಡುತ
ಹರಿಯ ಸಂಕಲ್ಪಾನುಸಾರದಿ
ಹರಿಯನುಗ್ರಹ ಪಡೆದ ನಿನ್ನನು ಸ್ತುತಿಪೆನನವರತ ೨

ಹರಿಯ ರಮಣಿಯೆ ಹರಿಯ ಜ್ಞಾನವ
ಹರಿಯ ಪದಯುಗ ಭಕ್ತಿ ಪಾಲಿಸಿ
ಹರಿಯ ಸಹಿತದಿ ನಿನ್ನ ರೂಪವ ಎನ್ನ ಮನದಲ್ಲಿ
ಹರಿಯ ವಲ್ಲಭೆ ತೋರೆ ಸಂತತ
ಹರಿಯ ಮನ ಸಂಕಲ್ಪದಂತೇ
ಹರಿಯ ಮೂರುತಿ ನೆನಹನಿತ್ತೂ ಪೊರಿಯೆ ಮಜ್ಜನನೀ ೩

ಹರಿಯ ಹೃದಯದಲಿದ್ದ ತೆರದಲಿ
ಶಿರಿಯೆ ಎನ್ನಯ ಸದನ ಮಧ್ಯದಿ
ಹರಿಯ ಸಹಿತದಿ ನೀನೆ ನೆಲಸೀ ಸರ್ವಕಾಲದಲಿ
ಹರಿಯ ನಿನ್ನಯ ಸೇವೆ ಗೋಸುಗ
ಪರಮ ನಿನ್ನ ವಿಭೂತಿ ಸಹಿತದಿ
ಹರಿ ವಿಭೂತಿಜ ಸಕಲ ಭಾಗ್ಯವನಿತ್ತು ಪೊರೆಯೆನ್ನ ೪

ಹರಿಯ ಮಾನಿನಿ ಸಕಲ ಸಂಪದ
ಹರಿಯ ಪ್ರೇಮದಿಯಿತ್ತು ನೀನೇ
ಹರಿಯ ಸೇವೆಯ ಗೈಸಿ ಎನ್ನನು ಪೊರೆಯೆ ಮಜ್ಜನನೀ
ಹರಿಯ ಸಹಿತದಿ ನೀನೆ ಸಂತತ
ಬೆರೆತು ಮನೆಯಲಿ ಸ್ವರ್ಣವೃಷ್ಟಿಯ
ಕರೆದು ಭಾಗ್ಯವನಿತ್ತು ಎನ್ನನು ಪೊರೆಯೆ ಶಿರಿದೇವಿ ೫

ಹರಿಯ ಸಹ ವೈಕುಂಠಲೋಕದಿ
ಇರುವೊ ತೆರದಲಿ ಎನ್ನ ಸದನದಿ
ಹರಿಯ ಸಹಿತದಲಿದ್ದು ಮಂಗಳ ಕಾರ್ಯದಿನದಿನದಿ
ಹರಿಯ ತತ್ವವಿಚಾರ ನಿನ್ನಯ
ಹರಿಯ ಮಹಿಮೆಯನರುಹಿ ಸಂತತ
ಹರಿಯ ಭಕ್ತರಸಂಗದಲಿ ಹರಿದಾಸನೆನಿಸೆನ್ನ ೬

ಹರಿಯು ಜನಕನು ಜನನಿ ನೀನೇ
ಶಿರಿಯನಿತ್ತೂ ಪಾಲಿಸೆಂದೆನು
ಹರಿಯ ಮಂದಿರವೆನಿಪ ಎನ್ನಯ ಹೃದಯ ಮಧ್ಯದಲಿ
ಹರಿಯ ಗೂಡ್ಯನುದಿನದಿ ನಿನ್ನಯ
ಹರಿಯ ರೂಪವ ತೋರಿ ಭಾಗ್ಯವ
ಕರದಿ ನೀಡಿಪರಿಯಲೆನ್ನನು ಪೊರೆಯೆ ಶಿರಿದೇವಿ ೭

ಹರಿಯ ಪದಸಂಜಾತವಾದಾ
ಧರಣಿಮಂಡಲ ಶಿರಿಯೆ ನಿನಗೇ

ಅರಸನಾಗಿಹ ಹರಿಯಗೂಡಿ ನಿಧಿಯನೀಡಮ್ಮ
ಹರಿಯ ಕರುಣದಿ ಭಾಗ್ಯನೀಡುವ
ಪರಮ ಶಕುತಿಯು ನಿನಗೆ ಇರುವುದು
ಕರುಣದಿಂದಲಿ ನೋಡಿ ಭಾಗ್ಯವನಿತ್ತು ಪೊರೆಯಮ್ಮ ೮

ಹರಿಗೆ ಅರಸೀ ಎನಿಪ ನಿನ್ನನು
ಸರಸಿಜಾಸನ ರುದ್ರಶಕ್ರರು
ಪರಮಭಕುತಿ ಜ್ಞಾನಪೂರ್ವಕ ಭಜಿಸಿನಿಜಗತಿಯ
ತ್ವರದಿ ಸೇರಿದ ಶ್ರುತಿಯವಾರ್ತೆಯ
ಕರಣದಿಂದರಿತೀಗ ನಿನ್ನಯ
ಚರಣಕಮಲವ ಮನದಿಸಂತತ ಭಜಿಪೆಕಲ್ಯಾಣಿ ೯

ಮಾಧವನ ಮನಪ್ರೇಮ ಮಾನಿನಿ
ಸಾದರದಿ ಸೌಭಾಗ್ಯ ಧನಗಳ
ಯಾದವೇಶ ಸುಧಾಮದ್ವಿಜವರಗಿತ್ತ ತೆರದಂತೆ
ಮೋದ ಮನದಲಿ ಸಾಂದ್ರಸುಖಮಯ
ಬೋಧಭಕುತಿ ವಿರಕುತಿ ಪಾಲಿಸಿ
ವೇದಗಮ್ಯನ ಭಜನೆ ಮಾಡಿಸು ವೇದಕಭಿಮಾನಿ ೧೦

ಉದಿತಭಾಸ್ಕರ ಕೋಟಿಭಾಸಳೆ
ಬಿದುರಮಂಡಲ ಜೈಪ ವದನೆಯೆ
ಮದನಮೂರುತಿ ಕೋಟಿನಿಭ ಲಾವಣ್ಯಪೂರಿತಳೇ
ಪದುಮನಯನಳೆ ನಾಸಚಂಪಕ
ಭಿದುರಫಲಕ ಸುಫಾಲ ಕುಂತಳೆ
ಮದನಕಾರ್ಮುಕ ಪುಬ್ಬುಯುಗಳವು ಕರುಣಯುಗ ಶೋಭೆ ೧೧

ಕದಪು ಕನ್ನಡಿ ಕುಮುದ ಕುಟ್ಮಲ
ರದನಪಂಕ್ತಿಯು ರಕ್ತ ಓಷ್ಟವು
ಚರುರೆಯಾನನ ಮಂದಹಾಸವು ಚಂದ್ರಚಂದ್ರಿಕೆಯು

ಉದಯ ತಾಮ್ರಲಲಾಟ ಶೊಭಿತೆ
ಒದಗಿ ರಾಜಿಪ ಭೃಂಗಕುಂತಳೆ
ಉದಕ ಬಿಂದುಗಳೆಂಬೊ ಬೈತಲೆ ಮುತ್ತುರಾಜಿತಳೆ ೧೨

ಮುದ್ದು ಚುಬಕವು ಕಂಬು ಕಂಧರ
ಪೊದ್ದುಕೊಂಡಿಹ ಬಾಹುದ್ವಂದ್ವವು
ಎದ್ದು ತೋರುತ ಕರಿಯ ಕರತೆರ ತಾವೆ ಶೋಭಿಪವೊ
ಮುದ್ರರತ್ನಾಂಗುಳಿಯ ಸಂಘದಿ
ಪೊದಿದ್ದಸ್ತದ್ವಯವು ಶೋಭಿಪ
ಪದ್ಮಕಟ್ಮಗಳೆನಿಸಿ ಸೇವಕಗಭಯ ನೀಡುವವು ೧೩

ಭಕ್ತಜನತತಿ ಪ್ರೇಮವಾರಿಧೆ
ಭಕ್ತಜನ ಹೃತ್ಪದ್ಮವಾಸಿನಿ
ಭಕ್ತಜನದಾರಿದ್ರ್ಯಹಾರಿಯೆ ನಮಿಪೆನನವರತ
ಲಕುಮಿ ಕ್ರಮುಕ ಸುಕಂಠದಲಿ ಶ್ರೀ –
ರೇಖ ಶೋಭಿತೆ ನಿತ್ಯನಿತ್ಯದಿ
ಮುಕುತ ಹಾರಾವಳಿ ಸುಶೋಭಿತೆ ಪರಮಮಂಗಳಳೆ ೧೪

ನಿನ್ನದಾಸನ ಮಾಡೆ ಲಕುಮಿಯೆ
ಘನ್ನತರ ಸೌಭಾಗ್ಯ ಸಂಪದ
ಚೆನ್ನವಾಗೀ ನೀಡಿ ಎನ್ನಯ ಸದನದೊಳಗಿದ್ದೂ
ನಿನ್ನ ಪತಿಯೊಡಗೊಡಿ ದಿನದಿನ
ಎನ್ನ ಕೈಯಲಿ ಪೂಜೆ ಗೊಳುತಾ
ನಿನ್ನ ರೂಪವ ತೋರಿ ಪಾಲಿಸು ಪಾಲಸಾಗರಜೆ ೧೫

ಮಾತೆ ನಿನ್ನಯ ಜಠರಕಮಲ ಸು –
ಜಾತನಾಗಿಹ ಸುತನ ತೆರದಲಿ
ಪ್ರೀತಿಪೂರ್ವಕ ಭಾಗ್ಯನಿಧಿಗಳನಿತ್ತುನಿತ್ಯದಲಿ
ನೀತ ಭಕುತಿಜ್ಞಾನ ಪೂರ್ವಕ

ದಾತ ಗುರು ಜಗನ್ನಾಥ ವಿಠಲನ
ಪ್ರೀತಿಗೊಳಿಸುವ ಭಾಗ್ಯ ಪಾಲಿಸಿ ಪೊರೆಯೆ ನೀಯೆನ್ನ ೧೬

## ಶ್ರೀಲಕ್ಷ್ಮೀಹೃದಯ

### ೧೭೯

ಶ್ರೀ ಮನೋಹರೆ ಲಕುಮಿ ತವಪದ -
ತಾಮರಸಯುಗ ಭಜಿಪೆ ನಿತ್ಯದಿ
ಸೋಮಸೋದರಿ ಪರಮ ಮಂಗಳೆ ತಪ್ತಕಾಂಚನಳೆ
ಸೋಮಸೂರ್ಯಸುತೇಜೊರೂಪಳೆ
ಹೇಮಸನ್ನಿಭ ಪೀತವಸನಳೆ
ಚಾಮಿಕರಮಯ ಸರ್ವಭೂಷಣಜಾಲಮಂಡಿತಳೆ ೧

ಬೀಜ ಪೂರಿತ ಹೇಮಕಲಶವ
ರಾಜಮಾನ ಸುಹೇಮಜಲಜವ
ನೈಜಕರದಲಿ ಪಿಡಿದು ಕೊಂಡು ಭಕುತಜನ ತತಿಗೆ
ಮಾಜದಲೆ ಸಕಲೇಷ್ಟನೀಡುವ
ರಾಜಮುಖಿ ಮಹದಾದಿ ವಂದ್ಯಳೆ
ಮೂಜಗತ್ತಿಗೆ ಮಾತೆ ಹರಿವಾಮಾಂಕದೊಳಗಿಪ್ಪೆ ೨

ಶ್ರೀ ಮಹತ್ತರಭಾಗ್ಯ ಮಾನಿಯೆ
ಸ್ತೌಮಿ ಲಕುಮಿಯನಾದಿಸರ್ವಸು -
ಕಾಮಫಲಗಳನೀವ ಸಾಧನ ಸುಖವ ಕೊಡುತಿಪ್ಪ
ಕಾಮಜನನಿಯೆ ಸ್ಮರಿಪೆ ನಿತ್ಯದಿ
ಪ್ರೇಮ ಪೂರ್ವಕ ಪ್ರೇರಿಸೆನ್ನನು
ಹೇ ಮಹೇಶ್ವರಿ ನಿನ್ನ ವಚನವ ಧರಿಸಿ ಭಜಿಸುವೆನು ೩

ಸರ್ವಸಂಪದವೀವ ಲಕುಮಿಯೆ
ಸರ್ವಭಾಗ್ಯವನೀವ ದೇವಿಯೆ
ಸರ್ವಮಂಗಳವೀವ ಸುರವರಸಾರ್ವಭೌಮಿಯಳೆ

ಸರ್ವಜ್ಞಾನವನೀವ ಜ್ಞಾನಿಯೆ
ಸರ್ವಸುಖಫಲದಾಯಿ ಧಾತ್ರಿಯೆ
ಸರ್ವಕಾಲದಿ ಭಜಿಸಿ ಬೇಡಿದೆ ಸರ್ವಪುರುಷಾರ್ಥ ೪

ನತಿಪೆ ವಿಜ್ಞಾನಾದಿ ಸಂಪದ
ಮತಿಯ ನಿರ್ಮಲ ಚಿತ್ರವಾಕ್ಪದ
ತತಿಯ ನೀಡುವದ್ಯನಿಗೆ ಸರ್ವದ ಸರ್ವಗುಣ ಪೂರ್ಣೇ
ನತಿಪಜನರಿಗನಂತ ಸೌಖ್ಯವ
ನತಿ ಶಯದಿ ನೀನಿತ್ತ ವಾರ್ತೆಯು
ವಿತತವಾಗಿಹದೆಂದು ಬೇಡಿದೆ ಭಕ್ತವತ್ಸಲಳೆ ೫

ಸರ್ವಜೀವರ ಹೃದಯ ವಾಸಿನಿ
ಸರ್ವಸಾರಸುಭೋಕ್ತ್ರೆ ಸರ್ವದ
ಸರ್ವವಿಶ್ವದಲಂತರಾತ್ಮಕೆ ವ್ಯಾಪ್ತೆ ನಿರ್ಲಿಪ್ತೆ
ಸರ್ವವಸ್ತು ಸಮೂಹದೊಳಗೆ
ಸರ್ವಕಾಲದಿ ನಿನ್ನ ಸಹಿತದಿ
ಸರ್ವಗುಣಸಂಪೂರ್ಣ ಶ್ರೀಹರಿ ತಾನೆ ಇರುತಿಪ್ಪ ೬

ತರಿಯೆ ನೀ ದಾರಿದ್ರ್ಯ ಶೋಕವ
ಪರಿಯೆ ನೀನಜ್ಞಾನತಿಮಿರವ
ಇರಿಸುತ್ವತ್ಪದ ಪದ್ಮಮನ್ಮನೊಸರಿಸಿ ಮಧ್ಯದಲಿ
ಚರರ ಮನಸಿನ ದುಃಖಭಂಜನ
ಪರಮಕಾರಣವೆನಿಪ ನಿನ್ನಯ
ಕರುಣ ಪೂರ್ಣಕಟಾಕ್ಷದಿಂದಭಿಷೇಕ ನೀ ಮಾಡೆ ೭

ಅಂಬ ಎನಗೆ ಪ್ರಸನ್ನಳಾಗೀ
ತುಂಬಿ ಸೂಸುವ ಪರಮ ಕರುಣಾ –
ವೆಂಬ ಪೀಯೂಷಕಣದಿ ತುಂಬಿದ ದೃಷ್ಟಿ ತುದಿಯಿಂದ
ಅಂಬುಜಾಕ್ಷಿಯೆ ನೋಡಿ ಎನ ಮನಿ

ತುಂಬಿಸೀಗಲೆ ಧಾನ್ಯಧನಗಳ
ಹಂಬಲಿಸುವೆನು ಪಾದಪಂಕಜ ನಮಿಪೆನನವರತ ೮

ಶಾಂತಿನಾಮಕೆ ಶರಣ ಪಾಲಕೆ
ಕಾಂತಿನಾಮಕೆ ಗುಣಗಣಾಶ್ರಯೆ
ಕ್ಷಾಂತಿನಾಮಕೆ ದುರಿತನಾಶಿನ ಧಾತ್ರಿ ನಮಿಸುವೆನು
ಭ್ರಾಂತಿನಾಶನಿ ಭವದಶ್ರಮದಿಂ
ಶ್ರಾಂತನಾದೆನು ಭವದಿಎನಗೆ ನಿ –
ತಾಂತ ಧನನಿಧಿಧಾನ್ಯ ಕೋಶವನಿತ್ತು ಸಲಹುವದು ೯

ಜಯತು ಲಕ್ಷ್ಮಿ ಲಕ್ಷಣಾಂಗಿಯೆ
ಜಯತು ಪದ್ಮಾಪದ್ಮವಂದ್ಯಳೆ
ಜಯತು ವಿದ್ಯಾನಾಮೆ ನಮೋ ನಮೋ ವಿಷ್ಣು ವಾಮಾಂಕೆ
ಜಯಪ್ರದಾಯಕೆ ಜಗದಿ ವಂದ್ಯಳೆ
ಜಯತು ಜಯ ಚನ್ನಾಗಿ ಸಂಪದ
ಜಯವೆ ಪಾಲಿಸು ಎನಗೆ ಸರ್ವದ ನಮಿಪೆನನವರತ ೧೦

ಜಯತು ದೇವಿ ದೇವಪೂಜ್ಯಳೆ
ಜಯತು ಭಾರ್ಗವಿ ಭದ್ರರೂಪಳೆ
ಜಯತು ನಿರ್ಮಲಜ್ಞಾನ ವೇದ್ಯಳೆ ಜಯತು ಜಯದೇವಿ
ಜಯತು ಸತ್ಯಾಭೂತಿಸಂಸ್ಥಿತೆ
ಜಯತು ರಮ್ಯಾ ರಮಣ ಸಂಸ್ಥಿತೆ
ಜಯತು ಸರ್ವಸುರತ್ನ ನಿಧಿಯೊಳಗಿಪ್ಪೆ ನಿತ್ಯದಲಿ ೧೧

ಜಯತು ಶುದ್ಧಾ ಕನಕಭಾಸಳೆ
ಜಯತು ಕಾಂತಾ ಕಾಂತಿಗಾತ್ರಳೆ
ಜಯತು ಜಯ ಶುಭಶಾಂತೆ ಶೀಘ್ರವೆ ಸೌಮ್ಯ ಗುಣ ರಮ್ಯೆ
ಜಯತು ಜಯಗಳ ದಾಯಿ ಸರ್ವದ
ಜಯವೆ ಪಾಲಿಸು ಸರ್ವಕಾಲದಿ
ಜಯತು ಜಯ ಜಯ ದೇವಿನಿನ್ನನು ವಿಜಯ ಬೇಡಿದೆನು ೧೨

ಆವ ನಿನ್ನಯ ಕಳೆಗಳಿಂದಲಿ
ಆವಿರಿಂಚಿಯು ರುದ್ರಸುರಪತಿ
ದೇವವರ ಮುಖಜೀವರೆಲ್ಲರು ಸರ್ವಕಾಲದಲಿ
ಜೀವಧಾರಣೆ ಮಾಡೊರಲ್ಲದೆ
ಆವ ಶಕ್ತಿಯು ಕಾಣೆನವರಿಗೆ
ದೇವಿ ನೀ ಪ್ರಭು ನಿನ್ನ ಶಕ್ತಿಲಿ ಶಕ್ತರೆನಿಸುವರು ೧೩

ಆಯು ಮೋದಲಾಗಿಪ್ಪ ಪರಮಾ -
ದಾಯ ಸೃಷ್ಟಿಸುಪಾಲನಾದಿ ಸ್ವ -
ಕೀಯ ಕರ್ಮವ ಮಾಡಿಸುವಿ ನಿನಗಾರು ಸರಿಯುಂಟೆ
ತೊಯಜಾಲಯೆ ಲೋಕನಾಥಳೆ
ತಾಯಿ ಎನ್ನನು ಪೊರೆಯೆ ಎಂದೂ
ಬಾಯಿ ಬಿಡುವೆನು ನೋಕನೀಯನ ಜಾಯೆ ಮಾಂ ಪಾಹಿ ೧೪

ಬೊಮ್ಮ ಎನ್ನಯ ಫಣಿಯ ಫಲಕದಿ
ಹಮ್ಮಿನಿಂದಲಿ ಬರೆದ ಲಿಪಿಯನು
ಅಮ್ಮ ಅದನನು ತೊಡೆದು ನೀ ಬರಿ ಬ್ಯಾರೆ ವಿಧದಿಂದ
ರಮ್ಯವಾಗಿಹ ನಿನ್ನ ಕರುಣಾ -
ಹರ್ಮ್ಯದೊಳಗಿರುತಿಪ್ಪ ಬಾಗ್ಯವ
ಘಮ್ಮನೆ ದೊರೆವಂತೆ ಈ ಪರಿ ನಿರ್ಮಿಸೊತ್ತಮಳೆ ೧೫

ಕನಕಮುದ್ರಿಕೆ ಪೂರ್ಣಕಲಶವ
ಎನಗೆ ಅರ್ಪಿಸುಜನುಮ ಜನುಮದಿ
ಜನನಿ ಭಾಗ್ಯದಭಿಮಾನಿ ನಿನಗಭಿನಮಿಸಿ ಬಿನ್ನೈಪೆ
ಕನಸಿಲಾದರು ಭಾಗ್ಯಹೀನನು
ಎನಿಸಬಾರದು ಎನ್ನ ಲೋಕದಿ
ಎನಿಸು ಭಾಗ್ಯದ ನಿಧಿಯು ಪರಿಚರಿಉಣಿಸು ಸುಖಫಲವಾ ೧೬

ದೇವಿ ನಿನ್ನಯ ಕಳೆಗಳಿಂದಲಿ
ಜೀವಿಸುವದೀ ಜಗವು ನಿತ್ಯದಿ

ಭಾವಿಸೀಪರಿ ಎನಗೆ ಸಂತತ ನಿಖಿಳ ಸಂಪದವ
ದೇವಿರಮ್ಯ ಮುಖಾರವಿಂದಳೆ
ನೀ ಒಲಿದು ಸೌಭಾಗ್ಯ ಪಾಲಿಸು
ಸೇವಕಾಧಮನೆಂದು ಬ್ಯಾಗನೆ ಒಲಿಯೆ ನೀ ಎನಗೆ ೧೭

ಹರಿಯ ಹೃದಯದಿ ನೀನೆ ನಿತ್ಯದಿ
ಇರುವ ತೆರದಲಿ ನಿನ್ನ ಕಳೆಗಳು
ಇರಲಿ ಎನ್ನಯ ಹೃದಯ ಸದನದಿ ಸರ್ವಕಾಲದಲಿ
ನಿರುತ ನಿನ್ನಯ ಭಾಗ್ಯಕಳೆಗಳು
ಬೆರತು ಸುಖಗಳ ಸಲಿಸಿ ಸಲಹಲಿ
ಶಿರಿಯೆ ಶ್ರೀಹರಿರಾಣಿ ಸರಸಿಜನಯನೆ ಕಲ್ಯಾಣಿ ೧೮

ಸರ್ವಸೌಖ್ಯಪ್ರದಾಯಿ ದೇವಿಯೆ
ಸರ್ವ ಭಕ್ತರಿಗಭಯದಾಯಿಯೆ
ಸರ್ವಕಾಲದಲಚಲ ಕಳೆಗಳ ನೀಡು ಎನ್ನಲ್ಲಿ
ಸರ್ವ ಜಗದೊಳು ಘನ್ನನಿನ್ನಯ
ಸರ್ವಸುಕಳಾ ಪೂರ್ಣನೆನಿಸೇ
ಸರ್ವವಿಭವದಿ ಮೆರೆಸು ಸಂತತ ವಿಘ್ನವಿಲ್ಲದಲೆ ೧೯

ಮುದದಿ ಎನ್ನಯ ಫಾಲದಲಿ ಸಿರಿ
ಪದುಮೆ ನಿನ್ನಯ ಪರಮ ಕಳೆಯೂ
ವದಗಿ ಸರ್ವದ ಇರಲಿ ಶ್ರೀವೈಕುಂಠಗತಲಕ್ಷ್ಮೀ
ಉದಯವಾಗಲಿ ನೇತ್ರ ಯುಗಳದಿ
ಸದಯ ಮೂರ್ತಿಯೆ ಸತ್ಯಲೋಕದ
ಚದುರೆ ಲಕುಮಿಯೆ ಕಳೆಯು ವಾಕ್ಯದಿ ನಿಲಿಸಲನವರತ ೨೦

ಶ್ವೇತದಿವಿಯೊಳಗಿರುವ ಲಕುಮಿಯೆ
ನೀತವಾಗಿಹ ಕಳೆಯು ನಿತ್ಯದಿ
ಮಾತೆ ಎನ್ನಯ ಕರದಿ ಸಂತತ ವಾಸವಾಗಿರಲಿ
ಪಾಥೊನಿಧಿಯೊಳಗಿಪ್ಪ ಲಕುಮಿಯೆ

ಜಾತ ಕಳೆಯು ಮಮಾಂಗದಲಿ ಸಂ –
ಪ್ರೀತಿ ಪೂರ್ವಕವಿರಲಿ ಸರ್ವದ ಪಾಹಿ ಮಾಂ ಪಾಹಿ ೨೧

ಇಂದು ಸೂರ್ಯರು ಎಲ್ಲಿತನಕಾ
ಕುಂದದಲೆ ತಾವಿರುವರೋ ಶಿರಿ –
ಇಂದಿರೇಶನು ಯಾವ ಕಾಲದತನಕ ಇರುತಿಪ್ಪ
ಇಂದಿರಾತ್ಮಕ ಕಳೆಯರೂಪಗ
ಳಂದಿನದ ಪರಿಯಂತರಿಪ್ಪವು
ಕುಂದುಯಿಲ್ಲದೆ ಎನ್ನ ಬಳಿಯಲಿ ತಾವೆ ನೆಲಸಿರಲಿ ೨೨

ಸರ್ವಮಂಗಳೆ ಸುಗುಣ ಪೂರ್ಣಳೆ
ಸರ್ವದೈಶ್ವರ್ಯಾದಿ ಮಂಡಿತೆ
ಸರ್ವದೇವಗಣಾಭಿವಂದ್ಯಳೆ ಆದಿ ಮಹಲಕ್ಷ್ಮೀ
ಸರ್ವಕಳೆ ಸಂಪೂರ್ಣೆ ನಿನ್ನಯ
ಸರ್ವಕಳೆಗಳು ಎನ್ನ ಹೃದಯದಿ
ಸರ್ವಕಾಲದಲಿರಲಿ ಎಂದು ನಿನ್ನ ಪ್ರಾರ್ಥಿಸುವೆ ೨೩

ಜನನಿ ಎನ್ನಜ್ಞಾನ ತಿಮಿರವ
ದಿನದಿನದಿ ಸಂಹರಿಸಿ ನಿನ್ನನು
ನೆನಿಸಿ ಧ್ಯಾನವ ಮಾಳ್ಪ ನಿರ್ಮಲಜ್ಞಾನ ಸಂಪದವ
ಕನಕಮಣಿ ಧನಧಾನ್ಯ ಭಾಗ್ಯವ
ಇನಿತು ನೀ ಎನಗಿತ್ತು ಪಾಲಿಸು
ಮಿನುಗುತಿಹ ಘನವಾದ ನಿನ್ನಯ ಕಳೆಯು ಶೋಭಿಸಲಿ ೨೪

ನಿರುತ ತಮತತಿಹರಿಪ ಸೂರ್ಯನ
ತೆರದಿ ಕ್ಷಿಪ್ರದಿ ಹರಿಸಲಕ್ಷ್ಮಿಯ
ಸರಕು ಮಾಡದೆ ತರಿದು ಓಡಿಸು ದುರಿತರಾಶಿಗಳ
ಪರಿಪರಿಯ ಸೌಭಾಗ್ಯ ನಿಧಿಯನು
ಹರುಷದಿಂದಲಿ ನೀಡಿ ಎನ್ನನು
ಥರಥರದಿ ಕೃತಕೃತ್ಯ ನಿಳೆಯೊಳಗೆನಿಸು ದಯದಿಂದ ೨೫

ಅತುಳ ಮಹದೈಶ್ವರ್ಯ ಮಂಗಳ
ತತಿಯು ನಿನ್ನಯ ಕಳೆಗಳೊಳಗೇ
ವಿತತವಾಗಿ ವಿರಾಜಮಾನದಲಿಪ್ಪ ಕಾರಣದಿ
ಶ್ರುತಿಯು ನಿನ್ನಯ ಮಹಿಮೆ ತಿಳಿಯದು
ತುತಿಸಬಲ್ಲೆನೆ ತಾಯಿ ಪೇಳ್ವುದು
ಮತಿವಿಹೀನನು ನಿನ್ನ ಕರುಣಕೆ ಪಾತ್ರನೆನಿಸಮ್ಮ ೨೬

ನಿನ್ನ ಮಹದಾವೇಶ ಭಾಗ್ಯಕೆ
ಎನ್ನ ಅರ್ಹನ ಮಾಡು ಲಕುಮಿಯೆ
ಘನ್ನತರ ಸೌಭಾಗ್ಯನಿಧಿ ಸಂಪನ್ನನೆನಿಸೆನ್ನ
ರನ್ನೆ ನಿನ್ನಯ ಪಾದಕಮಲವ
ಮನ್ನದಲಿ ಸಂಸ್ತುತಿಸಿ ಬೇಡುವೆ
ನಿನ್ನ ಪರತರ ಕರುಣ ಕವಚವ ತೊಡಿಸಿ ಪೊರೆಯಮ್ಮ ೨೭

ಪೂತನರನನು ಮಾಡಿ ಕಳೆಗಳ
ವ್ರಾತದಿದಲಿ ಎನ್ನ ನಿಷ್ಠವ
ಘಾತಿಸೀಗಲೆ ಎನಗೆ ಒಲಿದೂ ಬಂದು ಸುಳಿ ಮುಂದೆ
ಮಾತೆಭಾರ್ಗವಿ ಕರುಣಿ ನಿನ್ನಯ
ನಾಥನಿಂದೊಡಗೂಡಿ ಸಂತತ
ಪ್ರೀತಳಾಗಿರು ಎನ್ನ ಮನೆಯೊಳು ನಿಲ್ಲು ನೀ ಬಿಡದೆ ೨೮

ಪರಮಶಿರಿ ವೈಕುಂಠಲಕುಮಿಯೆ
ಹರಿಯ ಸಹಿತದಲೆನ್ನ ಮುಂದಕೆ
ಹರುಷ ಬಡುತಲಿ ಬಂದು ಶೋಭಿಸು ಕಾಲ ಕಳೆಯದಲೆ
ವರದೆ ನಾ ಬಾರೆಂದು ನಿನ್ನನು
ಕರೆದೆ ಮನವನು ಮುಟ್ಟಿ ಭಕುತಿಯ
ಭರದಿ ಬಾಗಿದ ಶಿರದಿ ನಮಿಸುವೆ ಕೃಪೆಯ ಮಾಡೆಂದು ೨೯

ಸತ್ಯಲೋಕದ ಲಕುಮಿ ನಿನ್ನಯ
ಸತ್ಯ ಸನ್ನಿಧಿಯೆನ್ನ ಮನೆಯಲಿ

ನಿತ್ಯ ನಿತ್ಯದಿ ವೆರ್ಚಿಹಬ್ಬಲಿ ಜಗದಿ ಜನತತಿಗೆ
ಅತ್ಯಧಿಕ ಆಶ್ಚರ್ಯ ತೋರಿಸಿ
ಮರ್ತ್ಯರೋತ್ತಮನೆನಿಸಿ ನೀ ಕೃತ
ಕೃತ್ಯನೀಪರಿ ಮಾಡಿ ಶಿರಿ ಹರಿಗೂಡಿ ನಲಿದಾಡೆ ೩೦

ಕ್ಷೀರವಾರಿಧಿ ಲಕುಮಿಯೇ ಪತಿ
ನಾರಸಿಂಹನ ಕೂಡಿ ಬರುವುದು
ದೂರ ನೋಡದೆ ಸಾರೆಗರೆದು ಪ್ರಸಾದ ಕೊಡು ಎನಗೆ
ವಾರಿಜಾಕ್ಷಿಯೆ ನಿನ್ನ ಕರುಣಾ
ಸಾರಪೂರ್ಣ ಕಟಾಕ್ಷದಿಂದಲಿ
ಬಾರಿ ಬಾರಿಗೆ ನೋಡಿ ಪಾಲಿಸು ಪರಮ ಪಾವನ್ನೆ ೩೧

ಶ್ವೇತ ದ್ವೀಪದ ಲಕುಮಿ ತ್ರಿಜಗ –
ನ್ಮಾತೆ ನೀ ಎನಮುಂದೆ ಶ್ರೀಫ್ರದಿ
ನಾಥನಿಂದೊಡಗೂಡಿ ಬಾರೆ ಪ್ರಸನ್ನಮುಖ ಕಮಲೆ
ಜಾತರೂಪಸುತೇಜರೂಪಳೆ
ಮಾತರಿಶ್ವಮುಖಾರ್ಚಿತಾಂಘ್ರಿಯೆ
ಜಾತರೂಪೋದರಾಂಡ ಸಂಘಕೆ ಮಾತೆ ಪ್ರಖ್ಯಾತೆ ೩೨

ರತ್ನ ಗರ್ಭನ ಪುತ್ರಿ ಲಕುಮಿಯೆ
ರತ್ನ ಪೂರಿತ ಭಾಂಡನಿಚಯವ
ಯತ್ನ ಪೂರ್ವಕತಂದು ಎನ್ನಯ ಮುಂದೆ ನೀ ನಿಲ್ಲು
ರತ್ನ ಖಚಿತಸುವರ್ಣಮಾಲೆಯ
ರತ್ನ ಪದಕದಹಾರ ಸಮುದಯ
ಜತ್ನದಿಂದಲಿ ನೀಡಿ ಸರ್ವದ ಪಾಹಿ ಪರಮಾಪ್ತೆ ೩೩

ಎನ್ನ ಮನಿಯಲಿ ಸ್ಥೈರ್ಯದಿಂದಲಿ
ಇನ್ನು ನಿಶ್ಚಲಳಾಗಿ ನಿಂತಿರು
ಉನ್ನತಾದ್ಯೈಶ್ವರ್ಯವೃದ್ಧಿಯಗೈಸು ನಿರ್ಮಲಳೆ

ಸನ್ನು ತಾಂಗಿಯೆ ನಿನ್ನ ತುತಿಪೆ ಪ್ರ
ಸನ್ನಹೃದಯದಿ ನಿತ್ಯ ನೀ ಪ್ರಹ
ಸನ್ಮುಖದಿ ಮಾತಾಡು ವರಗಳ ನೀಡು ನಲಿದಾಡು ೩೪

ಶಿರಿಯೆ ಶಿರಿ ಮಹಭೂತಿದಾಯಕೆ
ಪರಮೆ ನಿನ್ನೊಳಗಿಪ್ಪ ಸುಮಹ
ತ್ತರ ನವಾತ್ಮಕ ನಿಧಿಗಳೂರ್ಧ್ವಕೆ ತಂದು ಕರುಣದಲಿ
ಕರದಿ ಪಿಡಿದದನೆತ್ತಿ ತೋರಿಸಿ
ತ್ವರದಿ ನೀ ಎನಗಿತ್ತು ಪಾಲಿಸು
ಧರಣಿರೂಪಳೆ ನಿನ್ನ ಚರಣಕೆ ಶರಣು ನಾ ಮಾಳ್ಪೆ ೩೫

ವಸುಧೆ ನಿನ್ನೊಳಗಿಪ್ಪ ವಸುವನು
ವಶವ ಮಾಳ್ಪುದು ಎನಗೆ ಸರ್ವದ
ವಸುಸುದೋಗ್ಧ್ರೀಯು ಎಂಬ ನಾಮವು ನಿನಗೆ ಇರುತಿಹದು
ಅಸಮಮಹಿಮಳೆ ನಿನ್ನ ಶುಭತಮ
ಬಸುರಿನೊಳಗಿರುತಿಪ್ಪ ನಿಧಿಯನು
ಬೆಸೆಸು ಈಗಲೆ ಹಸಿದು ಬಂದಗೆ ಅಶನವಿತ್ತಂತೆ ೩೬

ಹರಿಯ ರಾಣಿಯೆ ರತ್ನಗರ್ಭಳೆ
ಸರಿಯು ಯಾರೀ ಸುರರಸ್ತೋಮದಿ
ಸರಸಿ ಜಾಕ್ಷಿಯೆ ನಿನ್ನ ಬಸಿರೊಳಗಿರುವ ನವನಿಧಿಯ
ಮೆರೆವ ಹೇಮದ ಗಿರಿಯತೆರದಲಿ
ತೆರೆದು ತೋರಿಸಿ ಸಲಿಸು ಎನಗೆ
ಪರಮ ಕರುಣಾಶಾಲಿ ನಮೋ ನಮೋ ಎಂದು ಮೊರೆಪೊಕ್ಕೆ ೩೭

ರಸತಳದ ಶಿರಿ ಲಕುಮಿ ದೇವಿಯೆ
ಶಶಿ ಸಹೋದರಿ ಶೀಘ್ರದಿಂದಲಿ
ಅಸಮ ನಿನ್ನಯ ರೂಪ ತೋರಿಸು ಎನ್ನ ಪುರದಲ್ಲಿ
ಕುಸುಮಗಂಧಿಯೆ ನಿನ್ನನರಿಯೆನು

ವಸುಮತೀ ತಳದಲ್ಲಿ ಬಹುಪರಿ
ಪೊಸತು ಎನಿಪುದು ನಿನ್ನ ಒಲುಮೆಯು ಸಕಲ ಜನತತಿಗೆ ೩೮

ನಾಗವೇಣಿಯೆ ಲಕುಮಿ ನೀ ಮನೋ
ವೇಗದಿಂದಲಿ ಬಂದು ಎನ್ನಯ
ಜಾಗು ಮಾಡದೆ ಶಿರದಿ ಹಸ್ತವನಿಟ್ಟು ಮುದದಿಂದ
ನೀಗಿಸೀ ದಾರಿದ್ರ್ಯದುಃಖವ
ಸಾಗಿಸೀ ಭವಭಾರ ಪರ್ವತ
ತೊಗಿಸೋ ನೀಯೆನ್ನಸದನದಿ ಕನಕ ಭಾರಗಳಾ ೩೯

ಅಂಜಬೇಡವೊ ವತ್ಸ ಎನುತಲಿ
ಮಂಜುಳೋಕ್ತಿಯ ನುಡಿದು ಕರುಣಾ
ಪುಂಜ ಮನದಲಿ ಬಂದು ಶೀಘ್ರದಿ ಕಾರ್ಯಮಾಡುವುದು
ಕಂಜಲೋಜಚನೆ ಕಾಮಧೇನು ಸು
ರಂಜಿ ಪಾಮರತರುವು ಎನಿಸುವಿ
ಸಂಜಯಪ್ರದಳಾಗಿ ಸಂತತ ಪಾಹಿ ಮಾಂ ಪಾಹಿ ೪೦

ದೇವಿ ಶ್ರೀಘ್ರದಿ ಬಂದು ಭೂಮೀ
ದೇವಿ ಸಂಭವೆ ಎನ್ನ ಜನನಿಯೆ
ಕಾಮನಯ್ಯನ ರಾಣಿ ನಿನ್ನಯ ಭೃತ್ಯನಾನೆಂದು
ಭಾವಿಸೀಪರಿ ನಿನ್ನ ಪುಡಕಿದೆ
ಸೇವೆ ನೀ ಕೈಕೊಂಡು ಮನ್ಮನೊ
ಭಾವ ಪೂತಿಸಿ ಕರುಣಿಸೆನ್ನನು ಶರಣು ಶರಣೆಂಬೆ ೪೧

ಜಾಗರೂಕದಿ ನಿಂತು ಮತ್ತೆ
ಸಜಾಗರೂಕದಿ ಎನಗೆ ನಿತ್ಯದಿ
ತ್ಯಾಗ ಭೋಗಕೆ ಯೋಗ್ಯವೆನಿಪಾಕ್ಷಯ್ಯ ಹೇಮಮಯ
ಪೂಗಕನಕ ಸಂಪೂರ್ಣ ಘಟಗಳ
ಯೋಗಮಾಳ್ಪದು ಲೋಕಜನನೀ
ಈಶ ಎನ್ನಯಭಾರ ನಿನ್ನದು ಕರೆದು ಕೈ ಪಿಡಿಯೆ ೪೨

ಧರಣಿಗತ ನಿಕ್ಷೇಪಗಳನು
ದ್ಧರಿಸಿ ನೀ ಎನ ಮುಂದೆ ಸೇರಿಸಿ
ಕಿರಿಯ ನಗೆಮೊಗದಿಂದ ನೋಡುತ ನೀಡು ನವನಿಧಿಯ
ಸ್ಥಿರದಿ ಎನ ಮಂದಿರದಿ ನಿಂತೂ
ಪರಮಮಂಗಳ ಕಾರ್ಯಮಾಡಿಸು
ಶಿರಿಯೆ ನೀನೇ ಒಲಿದು ಪಾಲಿಸು ಮೋಕ್ಷಸುಖ ಕೊನಿಗೆ ೪೩

ನಿಲ್ಲೆ ಲಕುಮಿಸ್ಥೆರ್ಯಭಾವದಿ
ನಿಲ್ಲು ರತ್ನ ಹಿರಣ್ಯರೂಪಳೆ
ಎಲ್ಲ ವರಗಳನಿತ್ತು ಎನಗೆ ಪ್ರಸನ್ನ ಮುಖಳಾಗು
ಎಲ್ಲು ಇರುತಿಪ ಕನಕ ನಿಧಿಗಳ
ನೆಲ್ಲ ನೀತಂದು ನೀಡುವುದೈ
ಫುಲ್ಲ ಲೋಚನೆ ತೊರಿ ನಿಧಿಗಳ ತಂದು ಪೊರೆಯಮ್ಮ ೪೪

ಇಂದ್ರಲೋಕದಲಿದ್ದ ತೆರದಲಿ
ನಿಂದ್ರು ಎನ್ನಯ ಗೃಹದಿ ನಿತ್ಯದಿ
ಚಂದ್ರ ವದನೆಯೆ ಲಕುಮಿದೇವೀ ನೀಡೆ ಎನಗಭಯ
ನಿಂದ್ರಲಾರೆನು ಋಣದ ಬಾಧೆಗೆ
ತಂದ್ರ ಮತಿ ನಾನಾದೆ ಭವದೊಳು
ಪೇಂದ್ರ ವಲ್ಲಭೆ ಅಭಯ ಪಾಲಿಸುನಮಿಪೆ ಮಜ್ಜನನಿ ೪೫

ಬದ್ಧಸ್ನೇಹ ವಿರಾಜ ಮಾನಳೆ
ಶುದ್ಧ ಜಾಂಬೂನದದಿ ಸಂಸ್ಥಿತೆ
ಮುದ್ದು ಮೋಹನ ಮೂರ್ತಿ ಕರುಣದಿ ನೋಡೆ ನೀ ಎನ್ನ
ಬಿದ್ದೆ ನಾ ನಿನ ಪಾದ ಪದುಮಕೆ
ಉದ್ಧರಿಪುದೆಂದು ಬೇಡಿದೆನನಿ
ರುದ್ಧರಾಣಿ ಕೃಪಾಕಟಾಕ್ಷದಿ ನೋಡೆ ಮಾತಾಡೆ ೪೬

ಭೂಮಿಗತ ಶಿರಿದೇವಿ ಶೋಭಿತೆ
ಹೇಮಮಯೆ ಎಲ್ಲೆಲ್ಲಿ ಇರುತಿಹೆ

ತಾಮರಸ ಸಂಭೂತೆ ನಿನ್ನಯ ರೂಪ ತೋರೆನಗೆ
ಭೂಮಿಯಲಿ ಬಹುರೂಪದಿಂದಲಿ
ಪ್ರೇಮಪೂರ್ವಕ ಕ್ರೀಡೆಗೈಯುತ
ಹೇಮಮಯ ಪರಿಪೂರ್ಣ ಹಸ್ತವ ಶಿರದ ಮೇಲಿರಿಸು ೪೭

ಫಲಗಳೀವ ಸುಭಾಗ್ಯ ಲಕುಮಿಯೆ
ಲಲಿತಸರ್ವ ಪುರಾಧಿವಾಸಿಯೆ
ಕಲುಷಶೂನ್ಯಳೆ ಲಕುಮಿ ದೇವಿಯೆ ಪೂರ್ಣಮಾಡೆನ್ನ
ಕುಲಜೆ ಕುಂಕುಮ ಶೋಭಿಪಾಲಳೆ
ಚಲಿತಕುಂಡಲ ಕರ್ಣ ಭೂಷಿತೆ
ಜಲಜ ಲೋಚನೆ ಜಾಗ್ರಕಾಲದಿ ಸಲಿಸು ಎನಗಿಷ್ಟ ೪೮

ತಾಯೆ ಛಂದದಲಂದ ಯೋಧ್ಯದಿ
ದಯದಿ ನೀನೇ ನಿಂತು ಪಟ್ಟಣ
ಭಯವ ಓಡಿಸಿ ಜಾಗು ಮಾಡದೆ ಮತ್ತೆ ಮುದದಿಂದ
ಜಯವ ನೀಡಿದ ತೆರದಿ ಎನ್ನಾ
ಲಯದಿ ಪ್ರೇಮದಿ ಬಂದು ಕೂಡ್ವದು
ಜಯ ಪ್ರದಾಯಿನಿ ವಿವಿಧ ವೈಭವದಿಂದ ಒಡಗೂಡಿ ೪೯

ಬಾರೆ ಲಕುಮಿ ಎನ್ನ ಸದನಕೆ
ಸಾರಿದೆನು ತವಪಾದ ಪದುಮಕೆ
ತೋರಿ ಯೆನ್ನಯ ಗೃಹದಿ ನೀನೆ ಸ್ಥಿರದಿ ನೆಲಸಿದ್ದು
ಸಾರಕರುಣಾರಸವು ತುಂಬಿದ
ಚಾರು ಜಲರುಹನೇತ್ರಯುಗ್ಮಳೆ
ಪಾರುಗಾಣಿಸು ಪರಮತರುಣಿಯೆ ರಿಕ್ತತನದಿಂದ ೫೦

ಶಿರಿಯೆ ನಿನ್ನಯ ಹಸ್ತಕಮಲವ
ಶಿರದಿ ನೀನೇ ಇರಿಸಿ ಎನ್ನನು
ಕರುಣವೆಂಬಾಮೃತದ ಕಣದಲಿ ಸ್ನಾನಗೈಸಿನ್ನು
ಸ್ಥಿರದಿ ಸ್ಥಿತಿಯನು ಮಾಡು ಸರ್ವದ

ಸರ್ವರಾಜ ಗೃಹಸ್ಥಲಕುಮಿಯೆ
ತ್ವರದಿ ಮೋದದಿ ಯುಕ್ತಳಾಗಿರು ಎನ್ನ ಮುಂದಿನ್ನು ೫೧

ನೀನೆ ಆಶೀರ್ವದಿಸಿ ಅಭಯವ
ನೀನೆ ಎನಗೇ ಇತ್ತು ಸಾದರ
ನೀನೆ ಎನ ಶಿರದಲ್ಲಿ ಹಸ್ತವನಿರಿಸು ಕರುಣದಲಿ
ನೀನೆ ರಾಜರ ಗೃಹದ ಲಕ್ಷ್ಮಿಯು
ನೀನೆ ಸರ್ವ ಸುಭಾಗ್ಯ ಲಕ್ಷ್ಮಿಯು
ಹೀನವಾಗದೆ ನಿನ್ನ ಕಳೆಗಳ ವೃದ್ಧಿ ಮಾಡಿನ್ನು ೫೨

ಆದಿಸಿರಿ ಮಹಲಕುಮಿ ವಿಷ್ಣುನ
ಮೋದಮಯವಾಮಾಂಕ ನಿನಗನು
ವಾದಸ್ವಸ್ಥಳ ವೆಂದು ತಿಳಿದು ನೀನೆ ನೆಲಸಿದ್ದಿ
ಆದಿದೇವಿಯೆ ನಿನ್ನ ರೂಪವ
ಮೋದದಿಂದಲಿ ತೋರಿ ಎನ್ನೊಳು
ಕ್ರೋಧವಿಲ್ಲದೆ ನಿತ್ಯ ಎನ್ನನು ಪೊರಿಯೆ ಕರುಣದಲಿ ೫೩

ಒಲಿಯೆ ನೀ ಮಹಲಕುಮಿ ಬೇಗನೆ
ಒಲಿಯೆ ಮಂಗಳ ಮೂರ್ತಿ ಸರ್ವದ
ನಲಿಯೆ ಚಲಿಸಿದೆ ಹೃದಯ ಮಂದಿರದಲ್ಲಿ ನೀ ನಿರುತ
ಲಲಿತವೇದಗಳೆಲ್ಲಿತನಕಾ
ತಿಳಿದು ಹರಿಗುಣ ಪಾಡುತಿಪ್ಪವೊ
ಜಲಜಲೋಚನ ವಿಷ್ಣು ನಿನ್ನೊಳು ಅಲ್ಲಿ ನೀನಿಪ್ಪೆ ೫೪

ಅಲ್ಲಿ ಪರ್ಯಂತರದಿ ನಿನ್ನಯ
ಎಲ್ಲಿ ಕಳೆಗಳು ಎನ್ನ ಮನಿಯಲಿ
ನಿಲ್ಲಸೀ ಸುಖವ್ರಾತ ನೀಡುತ ಸರ್ವಕಾಲದಲಿ
ಎಲ್ಲ ಜನಕಾಹ್ಲಾದ ಚಂದಿರ
ಕುಲ್ಲದೆ ಶುಭಪಕ್ಷದಿನದೊಳು
ನಿಲ್ಲದಲೆ ಕಳೆವೃದ್ಧಿ ಎಯ್ದುವತೆರದಿ ಮಾಡೆನ್ನ ೫೫

ಶಿರಿಯೇ ನೀ ವೈಕುಂಠಲೋಕದಿ
ಶಿರಿಯೆ ನಿ ಪಾಲ್ಗಡಲ ಮಧ್ಯದಿ
ಇರುವ ತೆರದಲಿ ಎನ್ನ ಮನಿಯೊಳು ವಿಷ್ಣುಸಹಿತಾಗಿ
ನಿರುತ ಜ್ಞಾನಿಯ ಹೃದಯ ಮಧ್ಯದಿ
ಮಿರುಗುವಂದದಲೆನ್ನ ಸದನದಿ
ಹರಿಯ ಸಹಿತದಿ ನಿತ್ಯ ರಾಜಿಸು ನೀಡಿಕಾಮಿತವ ೫೬

ಶ್ರೀನಿವಾಸನ ಹೃದಯಕಮಲದಿ
ನೀನೆ ನಿಂತಿರುವಂತೆ ಸರ್ವದ
ಆ ನರಾಯಣ ನಿನ್ನ ಹೃದಯದಿ ಇರುವ ತೆರದಂತೆ
ನೀನು ನಾರಾಯಣನು ಇಬ್ಬರು
ಸಾನುರಾಗದಿ ಎನ್ನ ಮನದೊಳು
ನ್ಯೂನವಾಗದೆ ನಿಂತು ಮನೋರಥ ಸಲಿಸಿ ಪೊರೆಯೆಂದೆ ೫೭

ವಿಮಲತರ ವಿಜ್ಞಾನ ವೃದ್ಧಿಯ
ಕಮಲೆ ಎನ್ನಯ ಮನದಿ ಮಾಳ್ಪುದು
ಅಮಿತ ಸುಖ ಸೌಭಾಗ್ಯ ವೃದ್ಧಿಯ ಮಾಡು ಮಂದಿರದಿ
ರಮೆಯೆ ನಿನ್ನಯ ಕರುಣವೃದ್ಧಿಯ
ಸುಮನದಿಂದಲಿ ಮಾಡು ಎನ್ನಲಿ
ಅಮರಪಾದಪೆ ಸ್ವರ್ಣವೃಷ್ಟಿಯ ಮಾಡು ಮಂದಿರದಿ ೫೮

ಎನ್ನ ತೆಜನವ ಮಾಡಿದಿರು ಸುರ
ರನ್ನೆ ಆಶ್ರಿತ ಕಲ್ಪಭೂಜಳೆ
ಮುನ್ನ ಭಕ್ತರ ಚಿಂತಾಮಣಿ ಸುರಧೇನು ನೀನಮ್ಮ
ಘನ್ನ ವಿಶ್ವದಮಾತೆ ನೀನೆ ಪ್ರ
ಸನ್ನಳಾಗಿರು ಎನ್ನ ಭವನದಿ
ಸನ್ನುತಾಂಗಿಯೆ ಪುತ್ರಮಿತ್ರ ಕಳತ್ರಜನ ನೀಡೆ ೫೯

ಆದಿ ಪ್ರಕೃತಿಯೆ ಬೊಮ್ಮನಾಂಡಕೆ
ಆದಿಸ್ಥಿತಿಲಯಬೀಜ ಭೂತಳೆ

ಮೋದಚಿನ್ಮಯ ಗಾತ್ರೆ ಪ್ರಾಕೃತದೇಹವರ್ಜಿತಳೆ
ವೇದವೇದ್ಯಳೆ ಬೊಮ್ಮನಾಂಡವ
ಆದಿ ಕೂರ್ಮದ ರೂಪದಿಂದಲ
ನಾದಿ ಕಾಲದಿ ಪೊತ್ತು ಮೆರೆವದು ಏನು ಚಿತ್ರವಿದು ೬೦

ವೇದಮೊದಲು ಸಮಸ್ತಸುರರು
ವೇದಸ್ತೋಮಗಳಿಂದ ನಿನ್ನಯ
ಗಾಧಮಹಿಮವ ಪೊಗಳೆನೆಂದರೆ ಶಕ್ತರವರಲ್ಲ
ಓದುಬಾರದ ಮಂದಮತಿ ನಾ
ನಾದಕಾರಣ ಶಕ್ತಿ ಇಲ್ಲವು
ಬೋಧದಾಯಕೆ ನೀನೆಸ್ತವನವಗೈಸು ಎನ್ನಿಂದ ೬೧

ಮಂದನಿಂದಲಿ ಸುಗುಣ ವೃಂದವ
ಛಂದದಲಿ ನೀ ನುಡಿಸಿ ಎನ್ನಯ
ಮಂದಮತಿಯನು ತರಿದು ನಿರ್ಮಲ ಜ್ಞಾನಿ ಎಂದೆನಿಸು
ಇಂದಿರೆಯೆ ತವಪಾದ ಪದುಮದ
ದ್ವಂದ್ವಸ್ತುತಿಸುವ ಶಕುತಿಯಿತ್ತು
ಕುಂದುಬಾರದ ಕವಿತೆ ಪೇಳಿಸು ಎಂದು ವಂದಿಪೆನು ೬೨

ವತ್ಸನೊಚನವಕೇಳೆ ನೀ ಶಿರಿ
ವತ್ಸಲಾಂಛನ ವಕ್ಷಮಂದಿರೆ
ತುಚ್ಛಮಾಡದೆ ಮನಕೆ ತಂದೂ ನೀನೆ ಪಾಲಿಪುದು
ಸ್ವಚ್ಛವಾಗಿಹಸಕಲ ಸಂಪದ
ಉತ್ಸಹದಿ ನೀ ನೀಡಿ ಮನ್ಮನೊ
ಇಚ್ಛೆ ಪೂರ್ತಿಸು ಜನನಿ ಬೇಡುವೆ ನೀನೆ ಸರ್ವಜ್ಞೆ ೬೩

ನಿನ್ನ ಮೊರೆಯನು ಎಯ್ದಿ ಪೂರ್ವದಿ
ಧನ್ಯರಾದರು ಧರಣಿಯೊಳಗಾ
ಪ್ನನ ಪಾಲಕೆ ಎಂದು ನಿನ್ನನು ನಂಬಿ ಮೊರೆವೊಕ್ಕೆ
ನಿನ್ನ ಭಕುತಗನಂತ ಸೌಖ್ಯವು

ನಿನ್ನಲೇ ಪರಭಕುತಿ ಅವನಿಗೆ
ನಿನ್ನ ಕರುಣಕೆ ಪಾತ್ರನಾಗುವನೆಂದು ಶ್ರುತಿಸಿದ್ಧ ೬೪

ನಿನ್ನ ಭಕುತಿಗೆ ಹಾನಿ ಇಲ್ಲವು
ಬನ್ನ ಬಡಿಸುವರಿಲ್ಲವೆಂದಿಗು
ಮುನ್ನ ಭವಭಯವಿಲ್ಲವೆಂದಾ ಶ್ರುತಿಯು ಪೇಳುವುದು
ಎನ್ನ ಕರುಣಾಬಲವು ಅವನಲಿ
ಘನ್ನವಾಗೀ ಇರುವುದೆಂಬಾ
ನಿನ್ನ ವಚನವ ಕೇಳಿ ಈ ಕ್ಷಣ ಪ್ರಾಣ ಧರಿಸಿಹೆನು ೬೫

ನಾನು ನಿನ್ನಾಧೀನ ಜನನಿಯೆ
ನೀನು ಎನ್ನಲಿ ಕರುಣ ಮಾಳ್ಪುದು
ಹೀನ ಬಡತನ ದೋಷಕಳೆದೂ ನೀನೆ ನೆಲೆಸಿದ್ದೂ
ಮಾನಮನಿಧನಧಾನ್ಯ ಭಕುತಿ
ಜ್ಞಾನಸುಖ ವೈರಾಗ್ಯ ಮೂರ್ತಿ
ಧ್ಯಾನ ಮಾನಸಪೂಜೆ ಮಾಡಿಸು ಎನ್ನಿಂದ ೬೬

ನಿನ್ನ ಅಂತಃ ಕರುಣದಿಂದಲಿ
ಮುನ್ನ ನಾನೇ ಪೂರ್ಣಕಾಮನು
ಇನ್ನು ಆಗುವೆ ಪರಮ ಭಕ್ತ ಕುಚೇಲನಂದದಲಿ
ಬಿನ್ನೈಪೆ ತವ ಪಾದ ಪದ್ಮಕೆ
ಬನ್ನನಾ ಬಡಲಾರೆ ದೇವೀ
ಎನ್ನ ನೀ ಕರಪಿಡಿದು ಪಾಲಿಸು ರಿಕ್ತತನದಿಂದ ೬೭

ಕ್ಷಣವು ಜೀವಿಸಲಾರೆ ನಿನ್ನಯ ಕ
ರುಣವಿಲ್ಲದೆ ಅವನಿತಳದಲಿ
ಕ್ಷಣಿಕ ಫಲಗಳ ಬಯಸಲಾರೆನೆ ಮೋಕ್ಷ ಸುಖದಾಯಿ
ಗಣನೆ ಮಾಡದೆ ನೀಚದೇವರ

ಹಣಿದು ಬಿಡುವೀ ಬಾಧೆಕೊಟ್ಟರೆ
ಪಣವೆ ಮಾಡುವೆ ನಿನ್ನ ಬಳಿಯಲಿ ಮಿಥ್ಯವೇನಿಲ್ಲ ೬೮

ತನಯನಲಿ ವಾತ್ಸಲ್ಯದಿಂದಲಿ
ಜನಿತ ಪಾಲಲಿ ತುಂಬಿ ತುಳುಕುವ
ಸ್ತನವನಿತ್ತಾರಿಸಿ ಉಣಿಸುವ ಜನನಿ ತೆರದಂತೆ
ನಿನಗೆ ಸುರರೊಳು ಸಮರಕಾಣೆನು
ಅನಿಮಿಶೇಷರ ಪಡೆದು ಪಾಲಿಪಿ
ದಿನದಿನದಿ ಸುಖವಿತ್ತು ಪಾಲಿಸು ಕರುಣವಾರಿಧಿಯೇ ೬೯

ಏಸು ಕಲ್ಪದಿ ನಿನಗೆ ಪುತ್ರನೊ
ಆಸು ಕಲ್ಪದಿ ಮಾತೃನೀನೇ
ಲೇಶವಿದಕನುಮಾನವಿಲ್ಲವು ಸಕಲ ಶ್ರುತಿಸಿದ್ಧ
ಲೇಸುಕರುಣಾಸಾರವೆನಿಸುವ
ಸೂಸುವಾಮೃತ ಧಾರದಿಂದಲಿ
ಸೋಸಿನಿಂದಭಿಷೇಕ ಗೈದಭಿಲಾಷೆ ಸಲಿಸಮ್ಮ ೭೦

ದೋಷ ಮಂದಿರನೆನಿಪ ಎನ್ನಲಿ
ಲೇಶ ಪುಡಕಲು ಗುಣಗಳಿಲ್ಲ ವಿ
ಶೇಷ ವೃಷ್ಟಿ ಸುಪಾಂಸು ಕಣಗಳ ಗಣನೆ ಬಹು ಸುಲಭ
ರಾಶಿಯಂದದಲಿಪ್ಪ ಎನ್ನಘ
ರಾಶಿರಾಕ್ಷಗಶಕ್ಯ ಗಣಿಸಲು
ಏಸು ಪೇಳಲಿ ತಾಯೆ ತನಯನ ತಪ್ಪು ಸಹಿಸಮ್ಮ ೭೧

ಪಾಪಿಜನರೊಳಗಗ್ರಗಣ್ಯನು
ಕೋಪಪೂರಿತ ಚಿತ್ತ ಮಂದಿರ
ಈ ಪಯೋಜಭವಾಂಡ ಪುಡುಕಿದರಾರು ಸರಿಯಿಲ್ಲ
ಶ್ರೀಪನರಸಿಯೆ ಕೇಳು ದೋಷವು
ಲೋಪವಾಗುವ ತೆರದಿ ಮಾಡೀ
ರಾಪು ಮಾಡದೆ ಸಲಹು ಶ್ರೀಹರಿರಾಣಿ ಕಲ್ಯಾಣಿ ೭೨

ಕರುಣಶಾಲಿಯ ರೊಳಗೆ ನೀ ಬಲು
ಕರುಣ ಶಾಲಿಯು ಎಂದು ನಿನ್ನಯ
ಚರಣಯುಗಕಭಿನಮಿಸಿ ಸಾರ್ದೆನು
ಪೊರೆಯೆ ಪೊರೆಯೆಂದು
ಹರಣ ನಿಲ್ಲದು ಹಣವು ಇಲ್ಲದೆ
ಶರಣರನುದಿನ ಪೊರೆವೊ ದೇವಿ ಸು
ಪರಣವಾಹನರಾಣಿ ಎನ್ನನು ಕಾಯೆ ವರವೀಯೆ ೭೩

ಉದರ ಕರ ಶಿರ ಟೊಂಕಸೂಲಿಯ
ಮೊದಲೆ ಸೃಷ್ಟಿಯ ಗೈಯ್ಯದಿರಲೌ
ಷಧದ ಸೃಷ್ಟಿಯು ವ್ಯರ್ಥವಾಗುವ ತೆರದಿ ಜಗದೊಳಗೆ
ವಿಧಿಯು ಎನ್ನನು ಸೃಜಿಸದಿದ್ದರೆ
ಪದುಮೆ ನಿನ್ನ ದಯಾಳು ತನವೂ
ಪುದುಗಿ ಪೋದಿತು ಎಂದು ತಿಳಿದಾ ಬೊಮ್ಮಸೃಜಿಸಿದನು ೭೪

ನಿನ್ನ ಕರುಣವು ಮೊದಲೊ ದೇವಿಯೆ
ಎನ್ನ ಜನನವು ಮೊದಲೊ ಪೇಳ್ವದು
ಮುನ್ನ ಇದನನು ವಿಚಾರಗೈದು ವಿತ್ತ ಎನಗೀಯೆ
ಘನ್ನ ಕರುಣಾನಿಧಿಯು ಎನುತಲಿ
ಬಿನ್ನಹವ ನಾ ಮಾಡಿ ಯಾಚಿಪೆ
ಇನ್ನು ನಿಧಿಯನು ಇತ್ತು ಪಾಲಿಸು ದೂರ ನೋಡದಲೆ ೭೫

ತಂದೆತಾಯಿಯು ನೀನೆ ಲಕುಮೀ
ಬಂಧುಬಳಗವು ನೀನೆ ದೇವಿ
ಹಿಂದೆ ಮುಂದೇ ಎನಗೆ ನೀನೆ ಗುರುವು ಸದ್ಗತಿಯು
ಇಂದಿರೆಯೆ ಎನ ಜೀವ ಕಾರಿಣಿ
ಸಂದೇಹ ಎನಗಿಲ್ಲ ಪರಮಾ
ನಂದ ಸಮುದಯ ನೀಡೆ ಕರುಣವ ಮಾಡೇ ವರನೀಡೆ ೭೬

ನಾಥಳೆನಿಸುವಿ ಸಕಲ ಲೋಕಕೆ
ಖ್ಯಾತಳೆನಿಸುವಿ ಸರ್ವಕಾಲದಿ
ಪ್ರೀತಳಾಗಿರು ಎನಗೆ ಸಕಲವು ನೀನೆ ನಿಜವೆಂದೆ
ಮಾತೆ ನೀನೆ ಎನಗೆ ಹರಿ ನಿಜ
ತಾತ ಈರ್ವರು ನೀವೆ ಇರಲೀ
ರೀತಿಯಿಂದಲಿ ಭವದಿ ತೊಳಲಿಪುದೇನು ನಿಮ ನ್ಯಾಯ ೭೭

ಆದಿಲಕುಮಿ ಪ್ರಸನ್ನಳಾಗಿರು
ಮೋದಜ್ಞಾನ ಸುಭಾಗ್ಯಧಾತ್ರಿಯೆ
ಛೇದಿಸಜ್ಞಾನಾದಿ ದೋಷವ ತ್ರಿಗುಣವರ್ಜಿತಳೆ
ಸಾದರದಿ ನೀ ಕರೆದು ಕೈಪಿಡಿ
ಮಾಧವನ ನಿಜರಾಣಿ ನಮಿಸುವೆ
ಬಾಧೆಗೊಳಿಸುವ ಋಣವ ಕಳೆದೂ ಶಿರಿಯೆ ಪೊರೆಯೆಂದೆ ೭೮

ವಚನ ಜಾಡ್ಯವ ಕಳೆವ ದೇವಿಯೆ
ಎಚೆಯೆ ನೂತನ ಸ್ಪಷ್ಟವಾಕ್ಪದ
ನಿಚಯ ಪಾಲಿಸಿ ಎನ್ನ ಜಿಹ್ವಾಗ್ರದಲಿ ನೀನಿಂತು
ರಚನೆ ಮಾಡಿಸು ಎನ್ನ ಕವಿತೆಯ
ಪ್ರಚುರವಾಗುವ ತೆರದಿ ಮಾಳ್ಪುದು
ಉಚಿತವೇ ಸರಿ ಏನು ಪೇಳ್ವದು ತಿಳಿಯೆ ಸರ್ವಜ್ಞೆ ೭೯

ಸರ್ವ ಸಂಪದಿಂದ ರಾಜಿಪೆ
ಸರ್ವ ತೇಜೋರಾಶಿಗಾಶ್ರಯೆ
ಸರ್ವರುತ್ತಮ ಹರಿಯರಾಣಿಯೆ ಸರ್ವರುತ್ತಮಳೆ
ಸರ್ವಸ್ಥಳದಲಿ ದೀಪ್ಯ ಮಾನಳೆ
ಸರ್ವವಾಕ್ಯಕೆ ಮುಖ್ಯ ಮಾನಿಯೆ
ಸರ್ವಕಾಲದಲೆನ್ನ ಜಿಹ್ವದಿ ನೀನೆ ನಟಿಸುವದು ೮೦

ಸರ್ವ ವಸ್ತಪರೋಕ್ಷ ಮೊದಲೂ
ಸರ್ವ ಮಹಪುರುಷಾರ್ಥಧಾತಳೆ

ಸರ್ವಕಾಂತಿಗಳೊಳಗೆ ಶುಭಲಾವಣ್ಯ ದಾಯಕಳೆ
ಸರ್ವಕಾಲದಿ ಸರ್ವಧಾತ್ರಿಯೆ
ಸರ್ವರೀತಿಲಿ ಸುಮುಖಿಯಾಗೀ
ಸರ್ವಹೇಮ ಸುಪೂರ್ಣೆಎನ್ನಯ ನಯನದೊಳಗೆಸೆಯೆ ೮೧

ಸಕಲಮಹ ಪುರುಷಾರ್ಥದಾಯಿನಿ
ಸಕಲಜಗವನು ಪೆತ್ತ ಜನನಿಯೆ
ಸಕಲರೀಶ್ವರಿ ಸಕಲ ಭಯಗಳ ನಿತ್ಯ ಸಂಹಾರಿ
ಸಕಲ ಶ್ರೇಷ್ಟಳೆ ಸುಮುಖಿಯಾಗೀ
ಸಕಲ ಭಾವವ ಧರಿಸಿ ಸರ್ವದ
ಸಕಲ ಹೇಮಸುಪೂರ್ಣೆ ಎನ್ನಯ ನಯನದೊಳಗೆಸೆಯೆ ೮೨

ಸಕಲ ವಿಧ ವಿಘ್ನಾಪಹಾರಿಣಿ
ಸಕಲ ಭಕ್ತೋದ್ಧಾರಕಾರಿಣಿ
ಸಕಲ ಸುಖ ಸೌಭಾಗ್ಯದಾಯಿನಿ ನೇತ್ರದೊಳಗೆಸೆಯೆ
ಸಕಲ ಕಲೆಗಳ ಸಹಿತ ನಿನ್ನಯ
ಭಕುತನಾದವನೆಂದು ಸರ್ವದ
ವ್ಯಕುತಳಾಗಿರು ಎನ್ನ ಹೃದಯದ ಕಮಲ ಮಧ್ಯದಲಿ ೮೩

ನಿನ್ನ ಕರುಣಾಪಾತ್ರನಾಗಿಹ
ಎನ್ನಗೋಸುಗ ನೀನೆ ತ್ವರದಿ ಪ್ರ
ಸನ್ನಳಾಗ್ಯಧಿದೇವಗಣನುತೆ ಸುಗುಣಪರಿಪೂರ್ಣೆ
ಎನ್ನ ಪೆತ್ತಿಹ ತಾಯೆ ಸರ್ವದ
ಸನ್ನಿಹಿತಳಾಗೆನ್ನ ಮನಿಯೊಳು
ನಿನ್ನ ಪತಿಸಹಿತಾಗಿ ಸರ್ವದ ನಿಲಿಸು ಶುಭದಾಯಿ ೮೪

ಎನ್ನ ಮುಖದಲಿ ನೀನೆ ನಿಂತೂ
ಘನ್ನನಿವನೆಂದೆನಿಸಿ ಲೋಕದಿ
ಧನ್ಯಧನ್ಯನ ಮಾಡು ವರಗಳ ನೀಡು ನಲಿದಾಡು
ಅನ್ಯನಾನಿಗಲ್ಲ ದೇವೀ

ಜನ್ಯನಾದವನೆಂದು ತಿಳಿದೂ
ಅನ್ನ ವಸನವು ಧಾನ್ಯಧನವನು ನೀನೆ ಎನಗೀಯೆ ೮೫

ವತ್ಸಕೇಳೆಲೊ ಅಂಜಬೇಡವೊ
ಸ್ವಚ್ಛ ಎನ್ನಯ ಕರವ ಶಿರದಲಿ
ಇಚ್ಛೆಪೂರ್ವಕ ನೀಡ್ದೆ ನಡಿ ಸರ್ವತ್ರ ನಿರ್ಭಯದಿ
ಉತ್ಸಹಾತ್ಮ ಮನೋನುಕಂಪಿಯೆ
ಪ್ರೋತ್ಸಹದಿ ಕಾರುಣ್ಯದೃಷ್ಟಿಲಿ
ತುಚ್ಛಮಾಡದೆ ವೀಕ್ಷಿಸೀಗಲೆ ಲಕ್ಷ್ಮಿ ಒಲಿ ಎನಗೆ ೮೬

ಮುದದಿ ಕರುಣ ಕಟಾಕ್ಷ ಜನರಿಗೆ
ಉದಯವಾಗಲು ಸಕಲ ಸಂಪದ
ಒದಗಿ ಬಪ್ಪುವು ಮಿಥ್ಯವಲ್ಲವು ಬುಧರ ಸಮ್ಮತವು
ಅದಕೆ ನಿನ್ನಯ ಪದವನಂಬಿದೆ
ಮುದದಿ ಎನ್ನಯ ಸದನದಲಿ ನೀ
ನೊದಗಿ ಭಾಗ್ಯದ ನಿಧಿಯೆ ಪಾಲಿಸು ಪದುಮೆ ನಮಿಸುವೆನು ೮೭

ರಾಮೆ ನಿನ್ನಯ ದೃಷ್ಟಿ ಲೋಕಕೆ
ಕಾಮಧೇನೆಂದೆನಿಸಿ ಕೊಂಬದು
ರಾಮೆ ನಿನ್ನಯ ಮನಸು ಚಿಂತಾರತ್ನ ಭಜಿಪರಿಗೆ
ರಾಮೆ ನಿನ್ನಯ ಕರದ ದ್ವಂದ್ವವು
ಕಾಮಿತಾರ್ಥವ ಕೇಳ್ವ ಜನರಿಗೆ
ಕಾಮಪೂರ್ತಿಪ ಕಲ್ಪವೃಕ್ಷವು ತಾನೆ ಎನಿಸಿಹುದು ೮೮

ನವವೆನಿಪ ನಿಧಿ ನೀನೆ ಇಂದಿರೆ
ತವ ದಯಾಭಿದ ರಸವೆ ಎನಗೇ
ಧೃವದಿ ದೇವಿ ರಸಾಯನವೆ ಸರಿ ಸರ್ವಕಾಲದಲಿ
ಭುವನ ಸಂಭವೆ ನಿನ್ನ ಮುಖವೂ
ದಿವಿಯೊಳೊಪ್ಪುವ ಚಂದ್ರನಂದದಿ
ವಿವಿಧಕಳೆಗಣಪೂರ್ಣ ವಾಗ್ಯಖಿಳಾರ್ಥ ಕೊಡುತಿಹುದು ೮೯

ರಸದ ಸ್ಪರ್ಶದಲಿಂದ ಲೋಹವು
ಮಿಸುಣಿ ಭಾವವ ಐದೊ ತೆರದಲಿ
ಅಸಮ ಮಹಿಮಳೆ ನಿನ್ನ ಕರುಣ ಕಟಾಕ್ಷನೋಟದಲಿ
ವಸುಧೀ ತಳದೊಳಗಿಪ್ಪಜೀವರ
ಅಶುಭಕೋಟಿಗಳೆಲ್ಲಪೋಗೀ
ಕುಸುಮಗಂಧಿಯೆ ಮಂಗಳೋತ್ಸವ ಸತತವಾಗುವದು ೯೦

ನೀಡು ಎಂದರೆ ಇಲ್ಲವೆಂಬುವ
ರೂಢಿಜೀವರ ಮಾತಿಗಂಜುತ
ಬೇಡಿಕೊಂಬುದಕಿಗ ನಿನ್ನನು ಶರಣು ಪೊಂದಿದೆನು
ನೋಡಿ ಕರುಣ ಕಟಾಕ್ಷದಿಂ ದಯ
ಮಾಡಿ ಮನದಭಿಲಾಷೆ ಪೂರ್ತಿಸಿ
ನೀಡು ಎನಗಖಿಳಾರ್ಥ ಭಾಗ್ಯವ ಹರಿಯಸಹಿತದಲಿ ೯೧

ಕಾಮಧೇನು ಸುಕಲ್ಪತರು ಚಿಂ
ತಾಮಣೀ ಸಹವಾಗಿ ನಿನ್ನಯ
ಕಾಮಿತಾರ್ಥಗಳೀವ ಕಳೆಗಳುನಿಸಿ ಇರುತಿಹವು
ರಾಮೆ ನಿನ್ನಯ ರಸರಸಾಯನ
ಸ್ತೋಮದಿಂ ಶಿರಪಾದಪಾಣೀ
ಪ್ರೇಮಪೂರ್ವಕ ಸ್ಪರ್ಶವಾಗಲು ಹೇಮವಾಗುವದು ೯೨

ಆದಿವಿಷ್ಣುನ ಧರ್ಮಪತ್ನಿಯೆ
ಸಾದರದಿ ಹರಿ ಸಹಿತ ಎನ್ನಲಿ
ಮೋದದಿಂದಲಿ ಸನ್ನಿಧಾನವ ಮಾಡೆ ಕರುಣದಲಿ
ಆದಿಲಕ್ಷ್ಮಿಯೆ ಪರಮನುಗ್ರಹ
ವಾದ ಮಾತ್ರದಿ ಎನಗೆ ಪದೂಪದೆ
ಆದಪುದು ಸರ್ವತ್ರ ಸರ್ವದ ನಿಧಿಯ ದರ್ಶನವು ೯೩

ಆವ ಲಕ್ಷ್ಮೀ ಹೃದಯ ಮಂತ್ರವ
ಸಾವಧಾನದಿ ಪಠಣಗೈವನೊ

ಆವ ಕಾಲದಿ ರಾಜ್ಯಲಕ್ಷ್ಮಿಯನೈದು ಸುಖಿಸುವನು
ಆವ ಮಹಾದಾರಿದ್ರ್ಯದೋಷಿಯು
ಸೇವಿಸೇ ಮಹಧನಿಕನಾಗುವ
ದೇವಿಯವನಾಲಯದಿ ಸರ್ವದಿ ಸ್ಥಿರದಿ ನಿಲಿಸುವಳು ೯೪

ಲಕುಮಿ ಹೃದಯದ ಪಠಣೆ ಮಾತ್ರದಿ
ಲಕುಮಿ ತಾ ಸಂತುಷ್ಟಳಾಗೀ
ಸಕಲ ದುರಿತಗಳಳಿದು ಸುಖಸೌಭಾಗ್ಯ ಕೊಡುತಿಹಳು
ವಿಕಸಿತಾನನೆ ವಿಷ್ಣುವಲ್ಲಭೆ
ಭಕುತಜನರನು ಸರ್ವಕಾಲದಿ
ವ್ಯಕುತಭಾಗ್ಯವರನ್ನ ಪೊರೆವಳು ತನಯರಂದದಲಿ ೯೫

ದೇವಿಹೃದಯವು ಪರಮಗೋಪ್ಯವು
ಸೇವಕನಿಗಖಿಲಾರ್ಥ ಕೊಡುವುದು
ಭಾವಪೂರ್ವಕ ಪಂಚಸಾವಿರ ಜಪಿಸೆ ಪುನಶ್ಚರಣ
ಈ ವಿಧಾನದಿ ಪಠನೆ ಮಾಡಲು
ತಾ ಒಲಿದು ಸೌಭಾಗ್ಯ ನಿಧಿಯನು
ತೀವ್ರದಿಂದಲಿ ಕೊಟ್ಟು ಸೇವಕರಲ್ಲಿ ನಿಲಿಸುವಳು ೯೬

ಮೂರುಕಾಲದಿ ಜಪಿಸಲುತ್ತಮ
ಸಾರಭಕುತಿಲಿ ಒಂದು ಕಾಲದಿ
ಧೀರ ಮಾನವ ಪಠಿಸಲವನಖಿಲಾರ್ಥ ವೈದುವನು
ಆರು ಪಠಣವಗೈಯ್ಯಲಿದನನು
ಭೂರಿಶ್ರವಣ ಗೈದಮಾನವ
ಬಾರಿ ಬಾರಿಗೆ ಧನವ ಗಳಿಸುವ ಶಿರಿಯ ಕರುಣದಲಿ ೯೭

ಶ್ರೀ ಮಹತ್ತರ ಲಕ್ಷ್ಮೀಗೋಸುಗ
ಈ ಮಹತ್ತರ ಹೃದಯಮಂತ್ರವ
ಪ್ರೇಮಪೂರ್ವಕ ಭಾರ್ಗವಾರದ ರಾತ್ರಿ ಸಮಯದಲಿ
ನೇಮದಿಂದಲಿ ಪಂಚವಾರವ

ಕಾಮಿಸೀಪರಿ ಪಠಣೆ ಮಾಡಲು
ಕಾಮಿತಾರ್ಥವನೈದಿ ಲೋಕದಿ ಬಾಳ್ವ ಮುದದಿಂದ ೯೮

ಶಿರಿಯ ಹೃದಯ ಸುಮಂತ್ರದಿಂದಲಿ
ಸ್ಮರಿಸಿ ಅನ್ನವ ಮಂತ್ರಿಸಿಡಲೂ
ಶಿರಿಯಪತಿ ತಾನವರ ಮಂದಿರದೊಳಗೆ ಅವತರಿಪ
ನರನೆ ಆಗಲಿ ನಾರಿಯಾಗಲಿ
ಶಿರಿಯ ಹೃದಯ ಸುಮಂತ್ರದಿಂದಲಿ
ನಿರುತ ಮಂತ್ರಿತಜಲವ ಕುಡಿಯಲು ಧನಿಕಪುಟ್ಟುವನು ೯೯

ಆವನಾಶ್ವಿಜ ಶುಕ್ಲಪಕ್ಷದಿ
ದೇವಿ ಉತ್ಸವ ಕಾಲದೊಳು ತಾ
ಭಾವಶುದ್ಧಿಲಿ ಹೃದಯಜಪ ಒಂದಧಿಕ ದಿನದಿನದಿ
ಈ ವಿಧಾನದಿ ಜಪವ ಮಾಡಲು
ಶ್ರೀವರದಿ ಸಂಪದವನೈದುವ
ಶ್ರೀವನಿತೆ ತಾ ಕನಕವೃಷ್ಟಿಯ ಕರೆವಳನವರತ ೧೦೦

ಆವ ಭಕುತನು ವರುಷ ದಿನದಿನ
ಭಾವ ಶುದ್ಧಿಲಿ ಎಲ್ಲ ಪೊತ್ತು
ಸಾವಧಾನದಿ ಹೃದಯಮಂತ್ರವ ಪಠಿಸಲವನಾಗ
ದೇವಿ ಕರುಣ ಕಟಾಕ್ಷದಿಂದಲಿ
ದೇವ ಇಂದ್ರನಿಗಧಿಕನಾಗುವ
ಈ ವಸುಂಧರೆಯೊಳಗೆ ಭಾಗ್ಯದ ನಿಧಿಯು ತಾನೆನಿಪ ೧೦೧

ಶ್ರೀಶಪದದಲಿ ಭಕುತಿ ಹರಿಪದ –
ದಾಸಜನಪದ ದಾಸಭಾವವ
ಈ ಸುಮಂತ್ರಗಳರ್ಥ ಸಿದ್ಧಿಯು ಗುರುಪದಸ್ಮೃತಿಯು
ಲೇಸುಜ್ಞಾನ ಸುಬುದ್ಧಿಪಾಲಿಸು
ವಾಸವಾಗಿರು ಎನ್ನ ಮನಿಯಲಿ
ಈಶ ಸಹ ಎನತಾಯೆ ಉತ್ತಮಪದವು ನೀ ಸಿರಿಯೇ ೧೦೨

ಧರಣಿ ಪಾಲಕನೆನಿಸು ಎನ್ನನು
ಪುರುಷರುತ್ತಮನೆನಿಸು ಸರ್ವದ
ಪರಮ ವೈಭವ ನಾನವಿಧವಾದಾರ್ಥಸಿದ್ದಿಗಳಾ
ಪಿರಿದುಕೀರ್ತಿಯ ಬಹಳ ಭೋಗವ
ಪರಮ ಭಕ್ತಿಜ್ಞಾನ ಸುಮತಿಯ
ಪರಿಮಿತಿಲ್ಲದೆಯಿತ್ತು ಪುನರಪಿ ಸಲಹು ಶ್ರೀದೇವಿ ೧೦೩

ವಾದಮಾಡೊದರ್ಕರ್ಥ ಸಿದ್ಧಿಯು
ಮೋದತೀರ್ಥರ ಮತದಿ ದೀಕ್ಷವು
ಸಾದರದಿ ನೀನಿತ್ತು ಪಾಲಿಸು ವೇದದಭಿಮಾನೀ
ಮೋದದಲಿ ಪುತ್ರಾರ್ಥ ಸಿದ್ಧಿಯು
ಓದದಲೆ ಶಿರಿ ಬ್ರಹ್ಮವಿದ್ಯವು
ಆದಿಭಾರ್ಗವಿಯಿತ್ತು ಪಾಲಿಸು ಜನ್ಮಜನ್ಮದಲಿ ೧೦೪

ಸ್ವರ್ಣವೃಷ್ಟಿಯ ಎನ್ನ ಮನೆಯಲಿ
ಕರಿಯೆ ಧ್ಯಾನ್ಯಸುವೃದ್ಧಿ ದಿನದಿನ ಮಾಡೆ ಸಂಭ್ರಮದಿ
ಭರದಿ ನೀ ಕಲ್ಯಾಣ ವೃದ್ಧಿಯ
ಶಿರೆಯೆ ಅತುಳ ವಿಭೂತಿ ವೃದ್ಧಿಯ
ಹರುಷದಿಂದಲಿ ಗೈದು ಧರೆಯೊಳು
ಮೆರೆಯೆ ಸಂತತ ಉಪಮವಿಲ್ಲದೆ ಹರಿಯ ನಿಜರಾಣೀ ೧೦೫

ಮಂದಹಾಸ ಮುಖಾರವಿಂದಳೆ
ಇಂದು ಸೂರ್ಯರ ಕೋಟಿ ಭಾಸಳೆ
ಸುಂದರಾಂಗಿಯೆ ಪೀತವಸನಳೆ ಹೇಮಭೂಷಣಳೇ
ಕುಂದುಯಿಲ್ಲದ ಬೀಜಪೂರಿತ
ಛಂದವಾದ ಸುಹೇಮಕಲಶಗ –
ಳಿಂದ ನೀನೊಡಗೂಡಿ ತೀವ್ರದಿ ಬರುವುದೆನ ಮನಿಗೆ ೧೦೬

ನಮಿಪೆ ಶ್ರೀಹರಿರಾಣಿ ನಿನಪದ
ಕಮಲ ಯುಗಕನವರತ ಭಕುತಿಲಿ

ಕಮಲೆ ನಿನ್ನಯ ವಿಮಲ ಕರಯುಗ ಎನ್ನ ಮಸ್ತಕದಿ
ಮಮತೆಯಿಂದಲಿ ಇಟ್ಟು ನಿಶ್ಚಲ
ಅಮಿತಭಾಗ್ಯವನೀಡೆ ತ್ವರದೀ
ಕಮಲಜಾತಳೆ ರಮೆಯೆ ನಮೊ ನಮೊ ಮಾಳ್ಪೆನನವರತಾ ೧೦೭

ಮಾತೆ ನಿನ್ನಯ ಜಠರಕಮಲ ಸು -
ಜಾತನಾಗಿಹ ಸುತನ ತೆರದಲಿ
ಪ್ರೀತಿಪೂರ್ವಕ ಭಾಗ್ಯನಿಧಿಗಳನಿತ್ತು ನಿತ್ಯದಲಿ
ನೀತಭಕುತಿ ಜ್ಞಾನಪೂರ್ವಕ
ದಾತ ಗುರುಜಗನ್ನಾಥ ವಿಠಲನ
ಪ್ರೀತಿಗೊಳಿಸುವ ಭಾಗ್ಯ ಪಾಲಿಸಿ ಪೊರಿಯೇ ನೀಯೆನ್ನ ೧೦೮

## ಪ್ರಹ್ಲಾದ ಚರಿತ್ರೆ

## ೧೮೦

### ಕೋಲು ಪದ

ಹರಿಯು ಸರ್ವೋತ್ತುಮ ಶಿರಿಯೆ ಆತನ ರಾಣಿ
ಪರಮೇಷ್ಠಿ ಮರುತರು ತನಯರು ಕೋಲೆ
ಪರಮೇಷ್ಠಿ ಮರುತರು ತನಯರು ಈರ್ವರು
ಅರಸೇರು ವಾಣೀ ಭಾರತಿ ಕೋಲೆ ೧

ಗರುಡಾಹಿಪ ಮೃಡ ಮೂವರು ಮೊಮ್ಮರು
ಅರಸಿಯರೆನಿಪಾ ಸೌಪರ್ಣಿ ಕೋಲೆ
ಅರಸಿಯರೆನಿಪಾ ಸೌಪರ್ಣಿ ವಾರುಣಿ
ಗಿರಿರಾಜ ಪುತ್ರಿ ಪಾರ್ವತಿ ಕೋಲೆ ೨

ಪಾಕಶಾಸನ ಮುಖ್ಯಾನೇಕ ದಿವಿಜಗಣ -
ಕೇಕಚಿತ್ತದಿ ನಮಿಸುವೆ ಕೋಲೆ
ಏಕಚಿತ್ತದಿ ನಮಿಸುವೆ ಗಂಧರ್ವ ಧರಣಿಪಾ -
ಲಕರಾ ಸ್ತುತಿಸಿ ನಮಿಸುವೆ ಕೋಲೆ ೩

ಗುರುರಾಯರ ಮಹಿಮೆ ತಿಳಿದಷ್ಟು ಪೇಳುವೆ
ಗುರುಪಾದ ಭಜಕರರಿವೋದು ಕೋಲೆ
ಗುರುಪಾದ ಭಜಕರರಿವೋದು ನಮ್ಮ ಶಿರಿ –
ಗುರುರಾಜ ಪ್ರೀತವನಾಗುವ ಕೋಲೆ ೪

ಗುರುರಾಜನಂಶ ಅವೇಶ ಅವತಾರ
ಅರಹುವೆ ಸಾಧು ಜನರಿಗೆ ಕೋಲೆ
ಅರಹುವೆ ಸಾಧು ಜನರಿಗೆ ಸಮ್ಮತ
ಹರಿದಾಸ ಜನರಿಗೆ ಮುಖ್ಯವು ಕೋಲೆ ೫

ಶೇಷಾಖ್ಯ ವಿಷ್ವಕ್ಸೇನಾಭಿಧಾನದಿ
ಕೀಶೇಶನಾವೇಶಯುತನಾಗಿ ಕೋಲೆ
ಕೀಶೇಶನಾವೇಶಯುತನಾಗಿ ಭಾರ –
ತೀಶನ ಸುತನಾಗಿ ಜನಿಸಿದ ಕೋಲೆ ೬

ಹರಿಪಾದ ಸೇವೆಯ ಪರಿಪರಿ ಮಾಡುತ
ಪರಮ ವೈಕುಂಠ ಪುರದಲ್ಲಿ ಕೋಲೆ
ಪರಮ ವೈಕುಂಠ ಪುರದಲ್ಲಿ ದಿನದಿನ
ಪರಮ ಹರುಷದಿ ಇರುತಿರೆ ಕೋಲೆ ೭

ಆದಿದೈತೇಯರ ಬಾಧೆ ತಾಳದೆ ತ್ವರ
ವೇಧ ಮೊದಲಾದ ಸುರರೆಲ್ಲ ಕೋಲೆ
ವೇಧ ಮೊದಲಾದ ಸುರರೆಲ್ಲ ಪಯೋನಿಧಿ –
ತೀರ ನಾರಾಯಣನ ಸಾರ್ದರು ಕೋಲೆ ೮

ಸುರರ ಪ್ರಾರ್ಥನೆ ಕೇಳಿ ಧರೆಯೊಳು ತಾನೇವೆ
ಬರುವೋದಕುಪಾಯ ಮಾಡಿದ ಕೋಲೆ
ಬರುವೋದಕುಪಾಯ ಮಾಡಿದ ನಮ್ಮ ಶಿರಿ
ಹರಿಯ ಮಹಿಮೆಗೆ ನಮೊ ನಮೊ ಕೋಲೆ ೯

ಪ್ರಾಣತನಯ ವಿಷ್ವಕ್ಸೇನಗೆ ಪೇಳಿದ
ಕ್ಷೋಣಿಯೊಳಸುರ ಕುಲದಲ್ಲಿ ಕೋಲೆ

ಕ್ಷೋಣಿಯೊಳಸುರ ಕುಲದಲ್ಲಿ ಶ್ರೇಷ್ಠನಾದ
ಸ್ವರ್ಣಕಶಿಪುವಿನ ಸತಿಯಲ್ಲಿ ಕೋಲೆ ೧೦

ಪ್ರಲ್ಹಾದ ನಾಮದಿ ಜನಿಸೆಲೊ ನೀ ಮುಂದೆ
ಉಲ್ಲಾಸದಿಂದ ಬರುವೆನು ಕೋಲೆ
ಉಲ್ಲಾಸದಿಂದ ಬರುವೆನು ನಿನ್ನ ವೈರಿ
ಬಲ್ಲಿದ ಪಿತನ ಕೊಲ್ಲುವೆ ಕೋಲೆ ೧೧

ನಿನ್ನಗೋಸುಗ ನಾನು ಘನ್ನ ನರಮೃಗರೂಪ -
ವನ್ನೆ ಧರಿಸಿ ಬರುತೀನಿ ಕೋಲೆ ರೂಪ -
ವನ್ನೆ ಧರಿಸಿ ಬರುತೀನಿ ಪ್ರಲ್ಹಾದ
ಮುನ್ನೇನು ನಿನಗೆ ಭಯವಿಲ್ಲ ಕೋಲೆ ೧೨

ನಿನ್ನಲ್ಲಿ ನನ್ನ ಪರಿವಾರ ಸಹಿತದಿ
ಚೆನ್ನಾಗಿ ಇಪ್ಪೆನನುಗಾಲ ಕೋಲೆ
ಚೆನ್ನಾಗಿ ಇಪ್ಪೆನನುಗಾಲ ಮುಖ್ಯ ಪ್ರಾಣ
ನಿನ್ನನು ಬಿಟ್ಟರೆ ಎಂದೆಂದು ಕೋಲೆ ೧೩

ಎಲ್ಲ ಮಹಿಮವ ನಿನ್ನಲ್ಲಿ ತೋರಿಪೆ
ಎಲ್ಲರಕಿಂತ ಕರುಣವ ಕೋಲೆ
ಎಲ್ಲರಕಿಂತ ಕರುಣವ ಮಾಳ್ಪೆನು
ಇಲ್ಲಿಂದಧರೆಗೆ ನಡೆ ಎಂದ ಕೋಲೆ ೧೪

ಈರೀತಿ ವರಗಳ ಹರಿಯಿಂದ ಪಡಕೊಂಡು
ಸಾರಿ ಬಂದಾನು ಧರೆಯಲ್ಲಿ ಕೋಲೆ
ಸಾರಿ ಬಂದಾನು ಧರೆಯಲ್ಲಿ ದೈತೇಯ
ವೈರಿ ತಾನಾಗಿ ಮೆರೆದನು ಕೋಲೆ ೧೫

ಸುರಮುನಿಮುಖದಿಂದ ಪರತತ್ವಸಾರವ
ಅರಿತನು ತಾಯಿಗರ್ಭದಿ ಕೋಲೆ

ಅರಿತನು ತಾಯಿಗರ್ಭದಿ ತಾನಿದ್ದು
ಮರೆಯದೆ ಬಾಲರಿಗೆ ಪೇಳಿದ ಕೋಲೆ ೧೬

ಗುರುಗಳು ಪೇಳಿದ ನುಡಿಗಳು ಕೇಳದೆ
ಪರದೈವ ನಮ್ಮ ಹರಿಯೆಂದು ಕೋಲೆ
ಪರದೈವ ನಮ್ಮ ಹರಿಯೆಂದು ಪೇಳಲು
ಗುರುಗಳು ನೃಪಗೆ ತಿಳಿಸಲು ಕೋಲೆ ೧೭

ತನ್ನ ತನಯನ ವಿನಯಪೂರ್ವಕ ಕರೆದು
ಮನ್ನಿಸಿ ತೊಡೆಯ ಮೇಲಿಟ್ಟು ಕೋಲೆ
ಮನ್ನಿಸಿ ತೊಡೆಯ ಮೇಲಿಟ್ಟು ಪರಿಪರಿ
ಬಣ್ಣಿಸಿ ಮಗನಾ ಬೆಸಕೊಂಡ ಕೋಲೆ ೧೮

ಚಿನ್ನಾ ನಿನ್ನಗುರು ಏನೇನು ಪೇಳ್ಯಾನೆ
ಚೆನ್ನಾಗಿ ಎನಗೆ ತಿಳಿಸಯ್ಯ ಕೋಲೆ
ಚೆನ್ನಾಗಿ ಎನಗೆ ತಿಳಿಸಯ್ಯ ಪ್ರಹ್ಲಾದ
ಎನ್ನ ಮನಸಿಗೆ ಬರುವಂತೆ ಕೋಲೆ ೧೯

ತಾತನೆ ನಿನ್ನಯ ಪೋತನು ಪೇಳಿದ
ಮಾತನು ನಿನ್ನ ಮನಸಿಗೆ ಕೋಲೆ
ಮಾತನು ನಿನ್ನ ಮನಸಿಗೆ ಬ್ಯಾರೊಂದು -
ರೀತಿಂದ ನೀನು ತಿಳಿಬ್ಯಾಡ ಕೋಲೆ ೨೦

ಓಂ ನಮೋ ನಾರಾಯಣಾಯೇತಿ ಸಿದ್ಧಂ
ತನ್ನಾಮ ವೇದಾವಳಿಗರ್ಥ ಕೋಲೆ
ತನ್ನಾಮ ವೇದಾವಳಿಗರ್ಥವೆನಿಪುದು
ಮನ್ನಾದಭಿಷ್ಟೆಯ ಕೊಡುವೋದು ಕೋಲೆ ೨೧

ಅರಸುವಿರುದ್ಧ ಗುಣಗಳಿಗಾಶ್ರಯ
ಅರಗಳಿಗಾಶ್ರಯನಾಗನು ಕೋಲೆ

ಅರಗಳಿಗಾಶ್ರಯನಾಗನು ಎಂದಿಗು
ನರನ ಸಂಭಂಧೀ ಅದು ನಾರ ಕೋಲೆ ೨೨

ನಿರ್ದುಷ್ಟ ವೇದೋದ್ಭವ ಜ್ಞಾನನಾರಂ
ನಿರ್ದುಷ್ಟ ವಿಜ್ಞಾನ ವಿಷಯನು ಕೋಲೆ
ನಿರ್ದುಷ್ಟ ವಿಜ್ಞಾನ ವಿಷಯನು ಸದ್ಗುಣ –
ವರ್ಧಿಷ್ಣು ತಾನಾಗಿ ಇರುವೋನು ಕೋಲೆ ೨೩

ಜ್ಞಾನಿಜನಗಮ್ಯ ಜ್ಞಾನಾತ್ಮ ಸುಖಮಯ
ಹೀನನಾಗನು ಕರ್ಮತತಿಯಿಂದ ಕೋಲೆ
ಹೀನನಾಗನು ಕರ್ಮತತಿಯಿಂದ ಸರ್ವಜ್ಞ
ಏನು ಮಾಡಿದರು ಸುಖಪೂರ್ಣ ಕೋಲೆ ೨೪

ಶಿರದಿಂದ ಪೂರ್ಣನು ಕರದಿಂದ ಪೂರ್ಣನು
ಚರಣಾದಿ ಅವಯವ ಪರಿಪೂರ್ಣ ಕೋಲೆ
ಚರಣಾದಿ ಅವಯವ ಪರಿಪೂರ್ಣ ಕಾಲದೇಶ
ಪರಮಗುಣಗಣ ಪರಿಪೂರ್ಣ ಕೋಲೆ ೨೫

ಶಿರಿಬೊಮ್ಮ ಶಿವಮುಖ್ಯ ಸುರಗಣ ಯಾವತ್ತು
ಅರಿಯಾದು ಶ್ರೀಹರಿ ಗುಣಲೇಶ ಕೋಲೆ
ಅರಿಯಾದು ಶ್ರೀಹರಿ ಗುಣಲೇಶವೆಂದಿಗು
ಹರಿಗೀಸುರಗಣ ಸರಿಯೇನು ಕೋಲೆ ೨೬

ಜನುಮಾದಿ ಅಷ್ಟಕ ಕಾರಣ ಶ್ರೀವಿಷ್ಣು
ಜನನಾಮಯ ಸ್ಥಿತಿ ಮೃತಿ ದೂರ ಕೋಲೆ
ಜನನಾಮಯ ಸ್ಥಿತಿ ಲಯ ದೂರ ಜಗಕೆಲ್ಲ
ಜನಕನಾಗಿಪ್ಪ ಜಗದೀಶ ಕೋಲೆ ೨೭

ಏಕೋ ನಾರಾಯಣನೇಕ ಸುರಗಣ
ಸಾಕುವೋ ದಾತಾ ಸುರನಾಥ ಕೋಲೆ

ಸಾಕುವ್ರೋ ದಾತಾ ಸುರನಾಥ ಜಗದೊಳು
ಖ್ಯಾತಮಹಿಮನ ನತಿಸುವೆ ಕೋಲೆ ೨೮

ಕರುಣಾಸಾಗರ ನಿಜಶರಣ ಪಾಲಕಸ್ವಾಮಿ
ಶರಣು ಪೊಕ್ಕವರ ಪೊರೆವೋನು ಕೋಲೆ
ಶರಣು ಪೊಕ್ಕವರ ಪೊರೆವೋನು ಮಹಾಮಹಿಮ
ಚರಣಪಂಕಜಯುಗ ಭಜಿಸುವೆ ಕೋಲೆ ೨೯

ಮಹದಾದಿ ತೃಣಾಂತ ಈ ಮಹಾ ವಿಶ್ವದೊಳು ಆ
ಮಹಾ ಮಹಿಮನಿರುವೋನು ಕೋಲೆ ಆ
ಮಹಾ ಮಹಿಮನಿರುವೋನು ಸರ್ವದ
ಗಹನ ಮಹಿಮನ ನಮಿಸುವೆ ಕೋಲೆ ೩೦

ಮಾಲೋಲ ಹರಿಗುಣಜಾಲವ ಪೊಗಳುವ
ಬಾಲನ ನುಡಿ ಕೇಳಿ ಖಳನಾಗ ಕೋಲೆ
ಬಾಲನ ನುಡಿ ಕೇಳಿ ಖಳನಾಗ ಕೋಪದಿ
ಜಾಳಿಸಿ ನುಡಿಯಾ ನುಡಿದನು ಕೋಲೆ ೩೧

ಎನಗಿಂತ ಉತ್ತಮನವನಾವ ದೇವನು
ಎನಮುಂದೆ ಎನ್ನ ಹಗೆಯನು ಕೋಲೆ
ಎನಮುಂದೆ ಎನ್ನ ಹಗೆಯನು ಬಣ್ಣಿಸಿ
ತನಯನೆ ಎನಗೆ ವೈರ್ಯಾದಿ ಕೋಲೆ ೩೨

ಕಂದಾ ದೈತ್ಯರ ಕುಲಚಂದನವನದೊಳು
ನಿಂದ್ಯಾದ ಕಂಟಕತರುವಂತೆ ಕೋಲೆ
ನಿಂದ್ಯಾದ ಕಂಟಕತರುವಂತೆ ಪುಟ್ಟಿದ್ಯೊ
ಮಂದ ಪ್ರಹ್ಲಾದ ಪೇಳುವೆ ಕೋಲೆ ೩೩

ನಾರಾಯಣಾನೆಂಬೊ ಸುರರಾಧಮಾಧಮ
ಧೀರ ದೈತೇಯರ ಸರಿಯೇನು ಕೋಲೆ

ಧೀರ ದೈತೇಯರ ಸರಿಯೇನೋ ಪ್ರಲ್ಹಾದ
ತೋರದೆ ಎಲ್ಲಿ ಸೇರಿದ ಕೋಲೆ ೩೪

ಬಲವಂತನಾದರೆ ಬಯಲಿಗೆ ಬಾರದೆ
ಕಳತನದಿಂದ ತಿರಿಗ್ಯಾನೆ ಕೋಲೆ
ಕಳತನದಿಂದ ತಿರುಗುವ ಪ್ರಹ್ಲಾದ
ಛಲವ್ಯಾಕೊ ದೈತ್ಯರ ಕುಲದೊಳು ಕೋಲೆ ೩೫

ಹಿಂದಕೆ ನಮ್ಮ ಹಿರಣ್ಯನಯನನ
ಹಂದಿರೂಪದಿಂದ ಕೊಂದನು ಕೋಲೆ
ಹಂದಿರೂಪದಿಂದ ಕೊಂದವನ ಸುದ್ದಿ ಎನ್ನ
ಮುಂದೆ ಪೇಳದಿರೊ ಪ್ರಲ್ಹಾದ ಕೋಲೆ ೩೬

ಆ ಕಾಲದಲ್ಲಿ ನಾನಿಲ್ಲದ ಕಾರಣ
ಏಕಾಕಿಯಾದವನ ಸವರಿದ ಕೋಲೆ
ಏಕಾಕಿಯಾದವನ ಸವರಿದ ತ್ವರದಿಂದ
ಲೋಕಾಂತರದಲ್ಲಿ ಸೇರಿದ ಕೋಲೆ ೩೭

ಅಂದಿನದಾರಭ್ಯ ಒಂದಿನಕಾದರು
ಇಂದಿನವರೆಗೂ ಎನಮುಂದೆ ಕೋಲೆ
ಇಂದಿನವರೆಗೂ ಎನಮುಂದೆ ಅವನು
ಬಂದು ತೋರಿದರೆ ಕೊಂದೇನು ಕೋಲೆ ೩೮

ನೀಚನ ಗುಣಗಳ ವಾಚಿಸಬೇಡವೊ
ಯೋಚಿಸು ನಿನ್ನ ಗತಿಯೇನು ಕೋಲೆ
ಯೋಚಿಸು ನಿನ್ನ ಗತಿಯೇನು ಪ್ರಹ್ಲಾದ
ಮೋಚಕನವನೇನೊ ಪೇಳೆಲೊ ಕೋಲೆ ೩೯

ನಿನಗಾವ ಬಲವುಂಟೊ ನಿನಗಾವ ಸಹಕಾರಿ
ಎನಗಿನ್ನ ಬಲವಂತನಾವನು ಕೋಲೆ

ಎನಗಿನ್ನ ಬಲವಂತನಾವನು ಲೋಕದೊಳು
ನಿನಗಿನ್ನು ತಿಳಿಯದು ಹಸುಗೂಸು ಕೋಲೆ ೪೦

ಈ ರೀತಿ ನಿನ್ನ ಮಾತು ಆರಾರು ಒಪ್ಪರು
ಆರೊಂದು ಲೋಕದ ಅಧಿಪತಿ ಕೋಲೆ
ಆರೊಂದು ಲೋಕದ ಅಧಿಪತಿ ಶ್ರೀಹರಿ
ಮೂರು ರಹಿತನಾಗಿ ನಿರ್ದುಷ್ಟ ಕೋಲೆ ೪೧

ಸೃಷ್ಟ್ಯಾದಿಕಾರಣ ಸರ್ವೇಷ್ಟದಾಯಕ
ಶಿಷ್ಠೇಷ್ಟಪ್ರಿಯ ಸುರಗೇಯ ಕೋಲೆ
ಶಿಷ್ಠೇಷ್ಟಪ್ರಿಯ ಸುರಗೇಯ ನಮ್ಮಪರ –
ಮೇಷ್ಟಿಯ ತಾತ ಸುಖದಾತ ಕೋಲೆ ೪೨

ನೀನು ಮೊದಲಾಗಿ ನಾನು ಕಡೆಯಾಗಿ (ದ)
ಅನೇಕ ಚೇತನ ಜಡದೊಳು ಕೋಲೆ
ಅನೇಕ ಚೇತನ ಜಡದೊಳು ತಾನೇವೆ
ನಾನಾರೂಪದಿ ನಿಂತು ಪ್ರೇರಿಪ ಕೋಲೆ ೪೩

ಪ್ರೇರಕ ಪ್ರೇರ್ಯನು ವ್ಯಾಪಕ ವ್ಯಾಪ್ತನು
ತೋರಿಕೊಳ್ಳದೆ ತಾನಿರುತಿಪ್ಪ ಕೋಲೆ
ತೋರಿಕೊಳ್ಳದೆ ತಾನಿರುತಿಪ್ಪ ಶ್ರೀಹರಿ
ಗಾರಾರ ಭಯವು ಮೊದಲಿಲ್ಲ ಕೋಲೆ ೪೪

ಏಕರೂಪದಿಂದನೇಕ ಬೊಮ್ಮಾಂಡಗಳ
ಏಕಾಪೋಶನ ಮಾಡಿ ಏಕಾಕಿ ಕೋಲೆ
ಏಕಾಪೋಶನ ಮಾಡಿ ಏಕಾಕಿ ತಾನಾಗಿ
ಏಕಮೇವಾದ್ವಿತೀಯನೆನಿಸಿದ ಕೋಲೆ ೪೫

ದೇಶಕಾಲದಿಂದ ಈಶಗೆ ಸಮಳೆನಿಪ
ಶ್ರೀಶನರಾಣಿ ಗುಣಮಣಿ ಕೋಲೆ

ಶ್ರೀಶನರಾಣಿ ಗುಣಮಣಿ ಮಹಾಲಕ್ಷ್ಮಿ
ವಾಸುದೇವಗೆ ಸರಿಯಲ್ಲ ಕೋಲೆ ೪೬

ಆವಾವ ದೇಶದಿ ಆವಾವ ಕಾಲದಿ
ಆವಾವರೂಪ ಧರಿಸುವ ಕೋಲೆ
ಆವಾವರೂಪ ಧರಿಸುವ ಹರಿ ಮನೋ -
ಭಾವ ತಿಳಿದು ತಾ ಉದಿಸೋಳು ಕೋಲೆ ೪೭

ಶ್ರೀದೇವಿ ಕಾರುಣ್ಯ ಕುಡಿನೋಟ ಬಲದಿಂದ
ವೇದಾದಿ ತೃಣಾಂತ ಜಗವೆಲ್ಲ ಕೋಲೆ
ವೇಧಾದಿ ತೃಣಾಂತ ಜಗವೆಲ್ಲ ಸೃಷ್ಟ್ಯಾದಿ ಜಾಲವ
ನೈದೋದು ಸಟಿಯಲ್ಲ ಕೋಲೆ ೪೮

ಹರಿಗೆ ಸಮರಾದ ಸುರರಿಲ್ಲ ಜಗದೊಳು
ಸರಿಯಾಗುವೊರೆ ಅಸುರಾರು ಕೋಲೆ
ಸರಿಯಾಗುವೋರೆ ಅಸುರಾರು ಎಂದಿಗನ್ನ
ಅರಿತು ಮಾತೊಡೊ ಅಸುರೇಶ ಕೋಲೆ ೪೯

ಜನನಾಮಯ ಮರಣ ಮೊದಲಾದ ದೋಷಗಳು
ವನಜನಾಭನಿಗೆ ಘಟಿಸವು ಕೋಲೆ
ವನಜನಾಭನಿಗೆ ಘಟಿಸವು ಅಸುರೇಶ
ಘನವಾದ ಮಹಿಮಗೆ ನಮೊ ನಮೊ ಕೋಲೆ ೫೦

ಜನರೊಳು ತಾನಿದ್ದು ಜನರಂತೆ ಜನಿಸುವ
'ಜನಿತೋಽಥವಿಷ್ಣು' ಶ್ರುತಿಪಾದ್ಯ ಕೋಲೆ
'ಜನಿತೋಽಥವಿಷ್ಣು' ಶ್ರುತಿಪಾದ್ಯ ನಮ್ಮ ಹರಿ
ಜನಜಾತಿಜಡ ವಿಲಕ್ಷಣ ಕೋಲೆ ೫೧

ಅನಂತಗುಣರೂಪ ಅನಂತ ಅವಯವ
ಅನಂತಶೀರ್ಷಾ ಕರಣಾಕ್ಷಿ ಕೋಲೆ

ಅನಂತಶೀರ್ಷಾ ಕರಣಾಕ್ಷಿ ನಾಸಿಕ
ಅನಂತಕಾಯ ಕರಪಾದ ಕೋಲೆ ೫೨

ಅನಂತವೇದಾಗಮವೇದ್ಯ ಸದ್ಗುಣ
ಅನಂತ ವಿಜ್ಞಾನ ಸುಖಾತ್ಮ ಕೋಲೆ
ಅನಂತ ವಿಜ್ಞಾನ ಸುಖಾತ್ಮ ಶ್ರೀಹರಿ
ಅನಂತ ವಿಶ್ವೋದರ ವಿಷ್ಣು ಕೋಲೆ ೫೩

ಒಂದುಗುಣದೊಳಗಾನಂತ ಗುಣಗಳು
ಒಂದು ರೂಪದೊಳಗಾನಂತ ಕೋಲೆ
ಒಂದು ರೂಪದೊಳಗಾನಂತ ರೂಪ ಉಳ್ಳ
ಇಂದಿರೆರಮಣನ ವಂದಿಪೆ ಕೋಲೆ ೫೪

ಎಲ್ಲೆಲ್ಲಿ ನೋಡಲಲ್ಲಲ್ಲೆ ಇರುತಿಪ್ಪ
ಬಲ್ಲಿದರಿಗತಿ ಬಲ್ಲಿದ ಕೋಲೆ
ಬಲ್ಲಿದರಿಗತಿ ಬಲ್ಲಿದ ನಮ್ಮ ಸಿರಿ
ನಲ್ಲಗೆ ಸಮರುಂಟೆ ಧರೆಯೊಳು ಕೋಲೆ ೫೫

ಮೇರುಗಿರಿಯು ಎತ್ತ ನಾರುವೊ ಮಲವೆತ್ತ
ನೀರಜನಾಭನೆತ್ತ ನಿರ್ಭಾಗ್ಯರೆತ್ತ ಕೋಲೆ
ನೀರಜನಾಭನೆತ್ತ ನಿರ್ಭಾಗ್ಯ ದಿತಿಜರು
ದೂರಿದರಾತಗೆ ಕೊರತೇನು ಕೋಲೆ ೫೬

ಅಜಗಜನ್ಯಾಯದಂತೆ ರಜತಾತವರದಂತೆ
ಗಜಗೂಗಜದಂತೆ ಸಮವೇನೋ ಕೋಲೆ
ಗಜಗೂಗಜದಂತೆ ಸಮವೇನೋ ಅಪ್ಪಯ್ಯ
ಅಜನಪಿತಗೆ ನಿನಗೆ ಸಮವೇನೊ ಕೋಲೆ ೫೭

ಕ್ಷಿರಸಾಗರವೆತ್ತ ಮೂತ್ರಜಲವು ಎತ್ತ
ಮಾರನಯ್ಯನು ಎತ್ತ ಅಸುರರು ಕೋಲೆ

ಮಾರನಯ್ಯನು ಎತ್ತ ಅಸುರರು ಸಮವೇನೊ
ಈರೇಳು ಲೋಕದಧಿನಾಥ ಕೋಲೆ ೫೮

ಬಲವದ್ವಿರೋಧವು ಕುಲನಾಶ ಮಾಳ್ಪೋದು
ಕುಲನಾಶ ಪಾಪ ಘಟಿಸೋದು ಕೋಲೆ
ಕುಲನಾಶ ಪಾಪ ಘಟಿಸೋದು ದೈತ್ಯೇಶ
ಛಲವ್ಯಾಕೊ ನಮ್ಮ ಹರಿಯೊಳು ಕೋಲೆ ೫೯

ಸ್ವಾಮಿಯ ದ್ರೋಹವು ನಿನಗೇನು ಥರವಲ್ಲ
ಆ ಮಹಾ ಹರಿಯ ನೆರೆನಂಬು ಕೋಲೆ
ಆ ಮಹಾ ಹರಿಯ ನೆರೆನಂಬು ನಿನಗಿಹ –
ಆಮುಷ್ಮಿಕಾರ್ಥ ಸಲಿಸುವ ಕೋಲೆ ೬೦

ಶ್ರವಣ ಕೀರ್ತನ – ವಿಷ್ಣು ಸ್ಮರಣ – ಪಾದಯುಗ –
ಸೇವಾರ್ಚನ ದಾಸ್ಯ ವಂದನ ಕೋಲೆ
ಸೇವಾರ್ಚನ ದಾಸ್ಯ ವಂದನ ಸಖ್ಯವಾತ್ಮ –
ನೀವೇದನೆಂಬ ನವಭಕುತಿ ಕೋಲೆ ೬೧

ನವವಿಧಭಕುತಿಯ ನೆವದಿಂದ ಹರಿತನ್ನ
ಭವನದೊಳಗಿಟ್ಟು ಪಾಲಿಪ ಕೋಲೆ
ಭವನದೊಳಗಿಟ್ಟು ಪಾಲಿಪ ಹರಿಯೊಳು
ನವವಿಧ ದ್ವೇಷ ಮಾಳ್ಪರೆ ಕೋಲೆ ೬೨

ಭಕ್ತ ವತ್ಸಲನೆಂಬ ಬಿರುದು ಪೊತ್ತುಕೊಂಡು
ಭಕ್ತಾಧೀನನೆನಿಪ ಭಗವಂತ ಕೋಲೆ
ಭಕ್ತಾಧೀನನೆನಿಪ ಭಗವಂತ ಭಾಗ್ಯನಿಧಿ
ಭಕ್ತರನೆಂದೆಂದು ಬಿಡನಯ್ಯ ಕೋಲೆ ೬೩

ಸರ್ವಾಂತರಾತುಮ ಸರ್ವತ್ರ ವ್ಯಾಪ್ತನು
ಸರ್ವರಾಧಾರ ಸರ್ವೇಶ ಕೋಲೆ
ಸರ್ವರಾಧಾರ ಸರ್ವೇಶ ಸುಖಪೂರ್ಣ
ಸರ್ವೋತ್ತುಮಾ ನಮ್ಮ ಶ್ರೀಹರಿ ಕೋಲೆ ೬೪

ಹರಿಯೆ ಸರ್ವೋತ್ತುಮ ಹರಿಯೆ ಪರದೈವ
ಪರಮಗುರು ಮುಖ್ಯಪ್ರಾಣನು ಕೋಲೆ
ಪರಮಗುರು ಮುಖ್ಯಪ್ರಾಣನು ಪ್ರಸಾದ -
ಪರನಾದನವಗೆ ಪರಮೋಕ್ಷ ಕೋಲೆ ೬೫

ಎಂಥ ಬಾಲನೊ ಪರಪಂಥ ಪಕ್ಷಪಾತಿ
ಇಂಥ ವ ನೀ ಎನ್ನ ಮಗನೇನೊ ಕೋಲೆ
ಇಂಥ ವ ನೀ ಎನ್ನ ಮಗನೇನೊ ಎನ್ನ ವೈರಿ
ಪಂಥಮಾಡಿ ನಿನ್ನ ಕೊಲ್ಲುವೆ ಕೋಲೆ ೬೬

ದುರುಳ ಬಾಲಕನ ಕೊರಳು ಕತ್ತರಿಸೆಂದು
ತರಳನ ದೈತ್ಯರ ಕರದಲ್ಲಿ ಕೋಲೆ
ತರಳನ ದೈತ್ಯರ ಕರದಲ್ಲಿ ಕೊಟ್ಟು ತಾನು
ತೆರಳೆಂದು ನುಡಿದಾ ದುರುಳನು ಕೋಲೆ ೬೭

ಶತ್ರು - ಮಿತ್ರೋದಾಸೀನರು ಆರಯ್ಯ
ವೃತ್ರಾಹನನುಜನವರೊಳು ಕೋಲೆ
ವೃತ್ರಾಹನನುಜನವರೊಳು ಇರುತಿರೆ
ಶತ್ರು ಎನ್ನೇನು ಮಾಡ್ಯಾನು ಕೋಲೆ ೬೮

ಕರಿಗಳು ಎನ್ನಮೇಲೆ ತುಳಿದಾಡಲೇನು ಭಯ
ಕರಿರಾಜವರದ ಎನ ಮಿತ್ರ ಕೋಲೆ
ಕರಿರಾಜ ವರದ ಎನ ಮಿತ್ರನಾಗಿರೆ
ಕರಿಗಳು ಎನ್ನ ಕೊಲ್ಲವು ಕೋಲೆ ೬೯

ಗಿರಿಯಿಂದ ಧರೆಗೆ ಉರುಳಿಸಲವರನ್ನೆ
ಗಿರಿಧರೆಯೊಳಗೆ ಹರಿಯುಂಟು ಕೋಲೆ
ಗಿರಿಧರೆಯೊಳಗೆ ಹರಿಯುಂಟು ಎನ್ನ ಸ್ವಾಮಿ
ಪೊರೆವೋನು ನಿತ್ಯಾ ಇದು ಸತ್ಯ ಕೋಲೆ ೭೦

ಬಾಧ್ಯಾದಿಗತತಾನೆ ಬಾಧಕಸ್ಥಿತ ತಾನೆ
ಬಾಧ್ಯಾಬಾಧಕನು ತಾನೇವೆ ಕೋಲೆ

ಬಾಧ್ಯಾಬಾಧಕನು ತಾನೇವೆ ಶ್ರೀಹರಿ
ಭಾದಕನಾಗದೆ ಪೊರೆವ್ಹೋನು ಕೋಲೆ ೭೧

ಸ್ವತಂತ್ರನಾತನು ಸರ್ವದ ಶ್ರೀಹರಿ
ಅತಂತ್ರ ಜೀವರನುಗಾಲ ಕೋಲೆ
ಅತಂತ್ರ ಜೀವರನುಗಾಲ ಮಾಡಿದ
ಯತನವು ಎಂದಿಗು ನಡೆಯದು ಕೋಲೆ ೭೨

ಎಲೋ ಬಾಲ ನಿಮ್ಮಹರಿ ಎಲ್ಲಿ ಇರುವನೋ
ಬಲುಪರಿ ಅವನ ಪೊಗಳುವಿ ಕೋಲೆ
ಬಲುಪರಿ ಅವನ ಪೊಗಳುವಿ ಪ್ರಹ್ಲಾದ
ಕುಲಗೇಡಿ ಅವನ ತೋರಿಸು ಕೋಲೆ ೭೩

ಎನ್ನ ಹಿರಣ್ಯಕನಯನನ ಕೊಂದ ಕಳ್ಳ
ಎನ್ನ ಕಣ್ಣಿಗೆ ತಾ ತೋರದೆ ಕೋಲೆ
ಎನ್ನ ಕಣ್ಣಿಗೆ ತಾ ತೋರದೆ ಅಡಗಿದ –
ನನ್ನು ತೋರಿದರೆ ಬಿಡುವೆನೆ ಕೋಲೆ ೭೪

ಈ ಪರಿ ಬಾಲನ ಪರಿಪರಿ ಬಾಧಿಸಲು
ಅಪಾರಮಹಿಮನ ಸ್ಮರಿಸಲು ಕೋಲೆ
ಅಪಾರ ಮಹಿಮನ ಸ್ಮರಿಸಲು ಬಾಲನ
ಕಾಪಾಡಲೋಸುಗ ಬಂದನು ಕೋಲೆ ೭೫

ನರಮೃಗರೂಪಧರಿಸಿ ಸಿರಿವತ್ಸ ಕೌಸ್ತುಭ
ದರಚಕ್ರಪದುಮಗದಧಾರಿ ಕೋಲೆ
ದರಚಕ್ರಪದುಮಗದಧಾರಿ ತಾನಾಗಿ
ವರವಜ್ರಕಂಭದಿ ನೆಲಸಿದ ಕೋಲೆ ೭೬

ಪರಿಪರಿವಿಧದಿಂದ ತರಳನಬಾಧಿಸಿ
ಥರ ಥರ ಮಾತುಗಳಾಡುತ ಕೋಲೆ
ಥರ ಥರ ಮಾತುಗಳಾಡುತ ದೈತ್ಯನು
ಭರದಿಂದ ಕಂಭವ ಬಡಿದನು ಕೋಲೆ ೭೭

ಸರ್ವತ್ರ ವ್ಯಾಪ್ತಿಯ ಪೇಳಿದ ಭಕುತನ
ಸರ್ವವು ಸತ್ಯ ವಚನವು ಕೋಲೆ
ಸರ್ವವು ಸತ್ಯ ವಚನವು ಮಾಡ್ವೋ ಹರಿ
ಸರ್ವ ಜನರಿಗೆ ತೋರಿದ ಕೋಲೆ ೭೮

ಧೃಢವಜ್ರಕಂಭವು ಒಡೆದು ಬರುವಾಗ
ಜಡಜಭವಾಂಡ ಒಡೆದಂತೆ ಕೋಲೆ
ಜಡಜಭವಾಂಡ ಒಡೆದಂತೆ ಶಬ್ದವಾಗಿ
ಒಡೆದು ಮೂಡಿದ ಶ್ರೀನರಹರಿಕೋಲೆ ೭೯

ಸಿಡಿಲು ಗರ್ಜಿಸಿದಂತೆ ಒಡೆದು ಗರ್ಜಿಸಿ ವೇಗ
ಕುಡಿ ಜಿಹ್ವೆಚಾಚಿ ಕಿಡಿಗಳು ಕೋಲೆ
ಕುಡಿ ಜಿಹ್ವೆಚಾಚಿ ಕಿಡಿಗಳುಗುಳುತ್ತ
ಕಡುಕೋಪದಿಂದ ಮೃಡನಂತೆ ಕೋಲೆ ೮೦

ಅಡಿಗಡಿಗೆಗರುತ ಖಡು ಖಡು ಚೀರುತ
ಧಡಧಡ ನಡೆಯುತ ಪುಟಿಯುತ ಕೋಲೆ
ಧಡಧಡ ನಡೆಯುತ ಪುಟಿಯುತ ದೈತ್ಯನ
ತೊಡೆಯ ಮೇಲವನ ಕೆಡಹಿದ ಕೋಲೆ ೮೧

ಒಡಲು ಬಗೆದು ಕರುಳು ಕೊರಳಲ್ಲಿ ಧರಿಸಿ ರಕುತ
ಕುಡಿದಂತೆ ತೋರಿ ದಿಶೆಗೆ ಚೆಲ್ಲಿದ ಕೋಲೆ
ಕುಡಿದಂತೆ ತೋರಿ ದಿಶೆಗೆ ಚೆಲ್ಲಿದ ಸುರರೆಲ್ಲ
ಗಡಿಬಿಡಿಸ್ಯಾಕಾಶ ಸೇರ್ದರು ಕೋಲೆ ೮೨

ಜಯ ಜಯ ಸರ್ವೇಶ ಜಯ ಜಯ ಸ್ವಾತಂತ್ರ್ಯ
ಜಯ ಜಯ ಲಕುಮಿರಮಣನೆ ಕೋಲೆ
ಜಯ ಜಯ ಲಕುಮಿರಮಣನೆ ಜಯವೆಂದು
ಜಯಶಬ್ದನುಡಿದಾರಮರರು ಕೋಲೆ ೮೩

ವಾರಿಜಭವಸುರರಾಡಿದ ನುಡಿ ಮನಕೆ
ತಾರದೆ ಕ್ರೂರದಿ ತೋರುವ ಕೋಲೆ

ತಾರದೆ ಕ್ರೂರದಿ ತೋರುವ ನರಹರಿಯ
ಸಾರಿಬಾರದೆ ದೂರ ಸೇರ್‍ಯಾರು ಕೋಲೆ ೮೪

ಸಿರಿದೇವಿ ಬಳಿಗೆ ಸುರರಾಗ ಬಂದು
ಪರಿ ಪರಿ ಸ್ತುತಿಸಿ ನುಡಿದರು ಕೋಲೆ
ಪರಿ ಪರಿ ಸ್ತುತಿಸಿ ನುಡಿದರು ಹರಿಕೋಪ
ಪರಿಹಾರ ಮಾಡೆಂದು ಎರಗ್ಯಾರು ಕೋಲೆ ೮೫

ಸುರರ ಪ್ರಾರ್ಥನೆ ಕೇಳಿ ಸಿರಿದೇವಿ ನುಡಿದಳು
ಹರಿಕೋಪ ಎನಗೆ ವಶವಲ್ಲ ಕೋಲೆ
ಹರಿಕೋಪ ಎನಗೆ ವಶವಲ್ಲ ಕೇಳಿರೊ
ತರಳಾನೆ ಕೋಪ ಕಳೆವೋನು ಕೋಲೆ ೮೬

ಈ ರೀತಿ ಸಿರಿದೇವಿ ಸುರರಿಗಭಯವಿತ್ತು
ತರಳನ ಎತ್ತಿ ನಡೆದಳು ಕೋಲೆ
ತರಳನ ಎತ್ತಿ ನಡೆದೊಯ್ದು ತೋರಿ ಹರಿಗೆ
ಮರೆಯಾಗಿ ನಿಂತು ಸ್ತುತಿಸ್ಯಾಳು ಕೋಲೆ ೮೭

ಪ್ರಲ್ಹಾದನಾನನ ನೋಡುತ ಶ್ರೀಹರಿ
ಉಲ್ಲಾಸದಿಂದ ನಗುತಲಿ ಕೋಲೆ
ಉಲ್ಲಾಸದಿಂದ ನಗುತಲಿ ತನ್ನ ಕರ
ಪಲ್ಲವ ಶಿರದಿ ಇಟ್ಟನು ಕೋಲೆ ೮೮

ವರವ ಬೇಡೆನೆ ಮಗು ವರವೇನು ಬೇಕಿಲ್ಲ
ವರಕೊಡುವದೆನ್ನ ಪಿತನಿಗೆ ಕೋಲೆ
ವರಕೊಡೊ ಸ್ವಾಮಿ ಅಲ್ಲ ವರಬೇಡೊ ಭೃತ್ಯನಲ್ಲ
ವರರಾಜ್ಯ ಮನ್ವಂತರಾಳೆಲೊ ಕೋಲೆ ೮೯

ಸುರನಾಥ ಮೊದಲಾದ ಸುರರಾಗ ನಭದಲ್ಲಿ
ನೆರೆದು ಕುಸುಮವೃಷ್ಟಿಗರೆದರು ಕೋಲೆ
ಕುಸುಮವೃಷ್ಟಿ ಗರೆದರು ಶ್ರೀಹರಿ
ತರಳ ಪ್ರಹ್ಲಾದನ ಶಿರದಲ್ಲಿ ಕೋಲೆ ೯೦

ನರಹರಿನತಜನ ದುರಿತವಿಭಂಜನ
ಧರೆಯ ಭಾರವನು ಇಳುಹಿದ ಕೋಲೆ
ಧರೆಯ ಭಾರವನು ಇಳುಹಿದ ಸುರನಾಥ
ಚರಣಸೇವಕನ ಪೊರೆದೀಯ ಕೋಲೆ ೯೧

ಈ ರೀತಿ ಸುರರೆಲ್ಲ ಸಾರಲು ನರಹರಿ
ಪೋರ ಪ್ರಹ್ಲಾದಗೆ ನುಡಿದನು ಕೋಲೆ
ಪೋರ ಪ್ರಲ್ಹಾದಗೆ ನುಡಿದನು ನರಹರಿ
ಧಾರುಣಿ ಪೊರೆಯೆನ್ನ ಕರುಣದಿ ಕೋಲೆ ೯೨

ಹರಿಯ ವಚನವ ಶಿರದಲ್ಲಿ ತಾ ಧರಿಸಿ
ಧರಣಿ ಮಂಡಲವ ಪೊರೆದನು ಕೋಲೆ
ಧರಣಿ ಮಂಡಲವ ಪೊರೆಯುತ್ತ ಪ್ರಹ್ಲಾದ
ಹರಿಯ ಮಹಿಮವನರುಹಿದ ಕೋಲೆ ೯೩

ಹರಿಯೆ ಸರ್ವೋತ್ತಮ ಹರಿಯೆ ಪರದೈವ
ಹರಿಯೆ ಮಮಕುಲ ಧೊರೆ ಎಂದು ಕೋಲೆ
ಹರಿಯೆ ಮಮಕುಲ ಧೊರೆ ಎಂದು ಜಗದೊಳು
ಬಿರುದಿನ ಕಹಳೀ ಹಿಡಿಸ್ಯಾನು ಕೋಲೆ ೯೪

ಹರಿಯೆ ಸರ್ವೋತ್ತಮ ನರನೆ ಜೀವೋತ್ತಮ
ಹರಮುಖ ಸುರರೆಲ್ಲ ಚರರೆಂದು ಕೋಲೆ
ಹರಮುಖ ಸುರರೆಲ್ಲ ಚರರೆಂದು ದಿನದಿನ
ಬಿರುದಿನ ಭೇರಿ ಹೊಡಸಿದ ಕೋಲೆ ೯೫

ಸ್ವತಂತ್ರ ಶ್ರೀಹರಿ ಪರತಂತ್ರ ಜೀವರು
ಇತರರಿಗೆ ಸ್ವಾತಂತ್ರ್ಯ ಲೇಶಿಲ್ಲ ಕೋಲೆ
ಇತರರಿಗೆ ಸ್ವಾತಂತ್ರ್ಯ ಲೇಶಿಲ್ಲ ಜಗದೊಳು
ಪರತತ್ವಸಾರ ಪೇಳಿದ ಕೋಲೆ ೯೬

ಭೇದ ಮತವು ಸತ್ಯ ಅಭೇದ ಮತವು ಮಿಥ್ಯ
ಸಾಧಿಸಿ ಭೋಧವ ಮಾಡಿದ ಕೋಲೆ

ಸಾಧಿಸಿ ಭೋಧವ ಮಾಡಿದ ಪ್ರಹ್ಲಾದ –
ಗಾಧ ಮಹಿಮವ ತೋರಿದ ಕೋಲೆ ೯೭

ಹೃದಯ ಸದನದಿ ಪದುಮನಾಭನ ಪೂಜ
ಸದಾಕಾಲ ಮಾಡಿ ಸುಖಿಸಿದ ಕೋಲೆ
ಸದಾಕಾಲ ಮಾಡಿ ಸುಖಿಸಿದ ಪ್ರಹ್ಲಾದ
ಮದಕವಿಲ್ಲದೆ ಸಹಿಸಿದ ಕೋಲೆ ೯೮

ಹರಿಮೂರ್ತಿನೋಡುತ ಹರಿನಾಮ ಪಾಡುತ
ಹರಿಪಾದಧ್ಯಾನ ಮಾಡುತ ಕೋಲೆ
ಹರಿಪಾದಧ್ಯಾನ ಮಾಡುತ ಸಂತತ
ಹರಿಭಕ್ತರಾಗ್ರಣಿ ಎನಿಸಿದ ಕೋಲೆ ೯೯

ವಿಷ್ಣು ಭಕ್ತನಾದ ವೈಷ್ಣವಾಗ್ರಗಣ್ಯ
ವಿಷ್ಣು ತತ್ವವ ನಿರ್ಣಯಿಸಿ ಕೋಲೆ
ವಿಷ್ಣು ತತ್ವವ ನಿರ್ಣಯಿಸಿ ಪ್ರಹ್ಲಾದ
ವಿಷ್ಣು ಸಾಯುಜ್ಯಗಧಿಕಾರಿ ಕೋಲೆ ೧೦೦

ಆಸೇತು ಹಿಮಾಂತ ಶಾಸನ ಮಾಡುತ
ಲೇಸಾಗಿ ಸಾರ್ವಭೌಮನು ಕೋಲೆ
ಲೇಸಾಗಿ ಸಾರ್ವಭೌಮನು ತಾನಾಗಿ
ಕೀಶೇಶ ಕರುಣಾ ಪಾತ್ರನು ಕೋಲೆ ೧೦೦

ಪ್ರಹ್ಲಾದ ರಾಯನು ಉಲ್ಲಾಸದಿಂದಲಿ
ಆಹ್ಲಾದಬಡುತ ಪಾತಾಳ ಕೋಲೆ
ಆಹ್ಲಾದಬಡುತ ಪಾತಾಳ ಲೋಕದಿ
ಪ್ರಹ್ಲಾದನಾಗಿ ಇರುತಿಪ್ಪ ಕೋಲೆ ೧೦೨

ದಿಟ್ಟ ಪ್ರಹ್ಲಾದಗಭೀಷ್ಟದಾಯಕ ಪ್ರಾಣಾ –
ಧಿಷ್ಟಾನನಿಷ್ಟಾ ಸರ್ವೇಷ್ಟ ಕೋಲೆ
ಧಿಷ್ಟಾನನಿಷ್ಟಾ ಸರ್ವೇಷ್ಟ ದಾಯಕ
ದಿಟ್ಟ ಗುರುಜಗನ್ನಾಥವಿಠಲ ಕೋಲೆ ೧೦೩

# ಶ್ರೀ ಹರಿ ಸಂಕೀರ್ತನೆ

೧

ಏಸೇಸು ಕಲ್ಪಕ್ಕು ಈಶನು ನೀನಯ್ಯಾ
ಆಸಾಸು ಕಲ್ಪಕ್ಕು ದಾಸನು ಇವನಯ್ಯಾ
ಉದಾಸೀನ ಮಾಡದೆ ಪೋಷಿಸಬೇಕಯ್ಯ
ವಾಸನ ನೀ ಮಾಡಿ ವಾಸನ ಮಯರೂಪ
ಸೋಸಿಲಿ ತೋರಿಸಿ ದಾಸನ ಮಾಡಿಕೊ
ಆಸೆ ಬಿಡಿಸಿ ವಿಶೇಷ ಭಕುತಿ ಜ್ಞಾನ
ಲೇಸಾಗಿ ನೀನಿತ್ತು ಶ್ರೀಶಗುರು ಜಗನ್ನಾಥ ವಿಠಲ ವರ–
ದೇಶ ವಿಠಲನೆನಿಸಿದಾಸನ ಪರಿ ಪರಿ ದೇಶದಲ್ಲಿ ಮೆರಿಸಿ
ಆಶೆಯ ಪೂರ್ತಿಸು ವಾಸವನನುಜಾ

೨

ಘನ್ನ ಮಹಿಮನೆ ನಿನಗೆ ಇವನು ಅನ್ಯನಲ್ಲವೊ ಸ್ವಾಮಿ
ನಿನ್ನ ವರವನು ಜನ್ಮಜನ್ಮದಿ ಮನ್ನಿಸಿ ಪಾಲಿಸಬೇಕಾ
ಪನ್ನ ಜನರ ಪಾಲಾ ನಿನ್ನುಳಿದು ಮತ್ತಾರಿಲ್ಲವೆಂಬುವದು
ಎನ್ನ ಮಾತಲ್ಲ ದೇವ ಯನ್ನ ಪಿರಿಯರ ಮಾತು
ನಿನ್ನಯ ದಿವ್ಯ ಮನಕೆ ಚನ್ನಾಗಿ ನೀತಂದು
ನಿನ್ನಯ ಜ್ಞಾನ ಭಕುತಿ ವೈರಾಗ್ಯಗಳನ್ನು
ಅನ್ನ ವಸನ ಧನ – ಧಾನ್ಯವೇ ಮೊದಲಾದ
ಘನ್ನ ಸಂಪತ್ತುವಿತ್ತು
ಅನ್ಯಜನಕ ಭಾವದಿಂದ ಮುನ್ನ ಧನ್ಯನಮಾಡು
ಸೊನ್ನೊಡಲ ಪಿತ ಸರ್ವದಾ ತಾ
ಚಿನ್ನಗೊಲಿದ ವರದೇಶ ವಿಠಲನೆ
ಮನ್ನದೊಳಗೆ ಪೊಳೆಯೊಯನ್ನನುಡಿ ಲಾಲಿಸು

೩

ದಾಸನೆನಿಸು ಜೀಯಾ ಶ್ರೀ ವರದೇಶ ವಿಠಲರಾಯಾ
ದಾಸರಥಿಯೆ ಯನ್ನಾಶೆ ತಳೆದು ನಿರ್ದೋಷನೆನಿಸಿ
ಬಹು ಮೀಸಲು ಮನವಿತ್ತು ಪ

ವರದೇಂದ್ರರ ಆಜ್ಞಾದಿಂದಲಿ
ಗುರುವರ ಮಹಾಪ್ರಾಜ್ಞಾ
ವರದೇಶ ವಿಠಲೆಂಬ ಗುರುತಿನ ಮುದ್ರಿಕೆ
ಪರಮ ಪಾಮರಗೆ ತ್ವರ ಕರುಣಿಸಿದಕೆ ೧

ಜ್ಞಾನ ಶೂನ್ಯ ನಾನು ಸರ್ವದ
ಹೀನ ವಿಷಯ – ರತನು
ವಾನರನ ತರದಿ ಮಾಣಿಕೆಂಬ ತೆರ
ಹೀನನೆನಿಸದಲೆ ಪೋಣಿಸು ಸನ್ಮತಿ ೨

ಏಸು ಪೇಳಲಿನ್ನಾ ಶ್ರೀ ವರ–
ದೇಶ ವಿಠಲ ನಿನ್ನಾ
ದಾಸರ ವಚನಕೆ ದೋಷ ಬಾರದಂತೆ
ಲೇಸು ಭಕುತಿ ಜ್ಞಾನ ದಾಸ್ಯವಿತ್ತು ತವ ೩

೪

ಬಾರೋ ನೂತನ ಗೃಹಕೆ ಹರಿಯೆ ಸಿರಿ
ಮಾರುತ ಮುಖಸುರರೊಡಗೂಡಿ ಧೊರಿಯೆ ಪ

ಯಾರು ಕೇಳದಲಿಹ ಸ್ಥಳವ ನೀನೆ
ಪ್ರೇರಿಸಿ ಗೃಹವ ನಿರ್ಮಿಸಿದೆಯೋ ದೇವ
ನೂರಾರು ಪರಿರೂಪಾಂತರವ ಪೊಂದಿ
ಈ ರೀತಿ ನವಸುಸಂಸ್ಕೃತವಾದ ಗೃಹವ ೧

ಈರಪ್ಪ ಬಡಿಗನೆಂಬುವನು ಮನಿಯ
ಚಾರುತನದಲಿಂದ ನಿರ್ಮಿಸಿರುವನು
ತೋರುವ ಸಿಂಹಾಸನವನು ಮಧ್ಯಾ
ಗಾರದಿನಿನಗಾಗಿ ವಿರಿಚಿಸಿಹನು ೨

ಸುತ್ತಲು ನಿರ್ಭಯವಿಹುದು ವಂ –
ಭತ್ತು ದ್ವಾರಗಳಿಂದ ಶೋಭಿಸುತಿಹುದು
ಹತ್ತಿರೆ ಗುರುಗೃಹ ವಿಹುದು ಮುಂದೆ
ಚಿತ್ತಜನಯ್ಯನ ಮಂದಿರ ವಿಹುದು ३

ಉತ್ತಮ ಗೃಹವೆನಿಸುವದು ಇ –
ಪ್ಪತ್ತುನಾಲಕುವಸ್ತುಗಳಕೂಡಿಹುದು
ಸುತ್ತೇಳು ಪ್ರಾಕಾರವಿಹುದು ಸುತ್ತು
ಮುತ್ತಲು ದ್ವಿಜಜನಹೊಂದಿ ಕೊಂಡಿಹುದು ೪

ಗೃಹವುನಾಲ್ಕು ವಿಧವಿಹುದು ಸೂಕ್ಷ್ಮ
ಗೃಹ ನಿನಗಾಗಿಯೆ ನೇಮಿಸಿಯಿಹುದು
ಬಹಿರದಿ ಪಾಕಗೃಹ ವಿಹುದು ಅಲ್ಲಿ
ಗೃಹಿಣಿಯಿಂ ತ್ರಿವಿಧಾನ್ನ ಪಕ್ವಗೈತಿಹುದು ೫

ನಡುಮನೆ ದೊಡ್ಡದಾಗಿಹುದು ಅಲ್ಲಿ
ಸಡಗರದಲಿ ಬ್ರಹ್ಮವೃಂದ ಕೂಡುವದು
ಬಿಡದೆ ಸತ್ಕಥೆನಡೆಯುವದು ಮುಂದೆ
ಪಡಸಾಲೆಯಲಿ ಸರ್ವಜನ ಸಭೆಯಹುದು ೬

ಶ್ವಸನ ಮಾರ್ಗವಲಂಬಿಸಿರುವೆ ಮನಿಯ
ಹಸನ ಮೆಹದೀನಾದಿಯಿಂ ಮಾಡಿಸಿರುವೆ
ಹೊಸಸುಣ್ಣವನು ಹಚ್ಚಿಸಿರುವೆ ಏಕಾ
ದಶ ಸೇವಕರ ನಿನ್ನ ವಶದೊಳಿರುಸುವೆ ೭

ನಾನಾಧನ ನಿನಗರ್ಪಿಸುವೆನು ತನು
ಮಾನಿನಿಸಹ ನಿನ್ನಾಧೀನ ಮಾಡುವೆನು
ಜ್ಞಾನಭಕ್ತಿಯೆ ಇಚ್ಛಿಸುವೆನು ನಿನ್ನ
ಧ್ಯಾನಾನಂದದಿ ಧನ್ಯನೆಂದಿನಿಸುವೆನು ೮

ಹರಿಯೆ ಲಾಲಿಸು ಎನ್ನ ಸೊಲ್ಲಾ ಮುಂದೀ –
ಪರಿಗ್ಯಹದೊರೆವುದು ಸುಲಭವೇನಲ್ಲಾ
ಬರೆ ನಿನ್ನ ಬಿಡೆನೊ ಶ್ರೀ ನಲ್ಲಾ ಎನ್ನ
ಮೊರೆಯ ನಾಲಿಸಿ ನೋಡೋ ವರದೇಶವಿಠಲಾ ೯

೫೫

ಯಾಚಿಸುವೆನು ನಿನ್ನನಿದಕೆ ಕರುಣಸಾಗರ
ಖೇಚರೇಶ ಗಮನ ಜಗತ್ಪಾಲ ಪ್ರಭುವರ ಪ

ದೈನ್ಯರಾಹಿತ್ಯ ರಹಿತ ಜಾಡ್ಯರಹಿತವು
ನಿನ್ನ ಪಾದ ಕಮಲರತಿ ಸದಾವಕಾಲವು ೧

ಪ್ರಭುವೆ ನಿನ್ನ ಭೃತ್ಯನಾನಾದಿಕಾಲದಿ
ಅಭಯವಿತ್ತು ಪಾಲಿಸೆನ್ನ ಹೇ ದಯಾನಿಧೆ ೨

ತುಷ್ಟನಾದರೇನುರುಷ್ಟನಾರೇನೊಲೊ
ಇಷ್ಟದೈವ ನಿನ್ನ ಹೊರತು ಗತಿಯ ಇಲ್ಲೆಲೊ ೩

ತುಷ್ಟನಾದ ಬಳಿಕ ನೀನೆ ಹೇ ಕೃಪಾಕರ
ಬಿಟ್ಟುನಿನ್ನ ಭಜೀಸಲ್ಯಾಕೆ ಯಿತರಕಾಯ್ವರ ೪

ನೀನೆ ರೋಷವನ್ನು ತಾಳೆ ಸುಜನಬಂಧುವೆ
ದೀನನನ್ನು ಕಾಯ್ವರಾರು ನೀನೆಯಲ್ಲವೆ ೫

ದೋಷ ಕ್ಷಮಿಸುವಲ್ಲಿ ನಿನ್ನ ಪೋಲ್ವ ಅರಸರು
ದೇಶಸರ್ವಗಳಲಿ ಪುಡುಕಲಲ್ಲೆ ದೊರಕರು ೬

ಎನ್ನಸರಿ ಕೃತಘ್ನ ವಂಚನೀಯ ಮಾಳ್ವನ
ವನ್ನಜಾಭವಾಂಡದೊಳಾವಲ್ಲಿ ಕಾಣೆನಾ ೭

ದೀನ ದಾಸ ನಿನಗೆ ನಾನು ಹೇ ಜಗತ್ಪತೆ
ಮಾಣದೆಲ್ಲಿರಲ್ಲಿ ತೋರಿ ಪ್ರೇಮ ಸಾಮ್ಯತೆ ೮

ಎನ್ನ ವಿಷಯ ಭಯವು ನಿನಗೆ ಲಕ್ಷವಾವುದು
ಮನ್ನಿಸೆನ್ನ ಪೊರೆವ ಸರ್ವಭಾರ ನಿನ್ನದು ೯

ಈಶಪೂರ್ಣಕಾಯ ನಿನಗಸಾಧ್ಯವಾವುದು
ಆಶೆಯನ್ನದಾವಘನವು ನಿನಗೆ ತೋರ್ಪುದು ೧೦

ದಾಸನಾಶೆಪೂರ್ತಿಸಲ್ಕಾಲಸ್ಯವುಚಿತವೋ?
ಅಶಿಶಿಸುವನು ದಾಶಗೈವುದೇನು ನೀತವೋ? ೧೧

ಲೋಕನಾಥ ಕರುಣ ಪೂರ್ಣನೇ ಪರಾತ್ಪರ
ಯಾಕೆ ಯೊನ್ನೊಳಿನಿತು ನೀನು ನಿರ್ದಯಾಪರ ೧೨

ಗರವತಾಯಿತನನುಜಗೀಯೆ ಅವುದೋಗತಿ
ತರುಳನಲ್ಲಿ ಕರುಣಿಸುವದು ಕೃಷ್ಣ ಮೂರುತಿ ೧೩

ನೀನೆ, ಓರ್ವ ಜಗತ್ರಾತ ದಾತ ಜ್ಞಾತನು
ನಿನ್ನ ವಿನಹಾಭಿಷ್ಟಫಲದ ಕರ್ತೃ ಆವನು ೧೪

ಲಕ್ಷ್ಮಿಪತಿಯ ಪೋಲ್ವೋದಾರ ಸುಗುಣ ಶೀಲನ
ಈಕ್ಷಿಸಲ್ಕೆ ಜಗದೊಳಾರನೆಲ್ಲಿ ಕಾಣೆನಾ ೧೫

ನಿನ್ನ ಔದಾರ್ಯ ಸರ್ವರಲ್ಲಿ ಸಾಮ್ಯವು
ಎನ್ನೊಳಿನಿತ್ತು ನಿನ್ನದ್ಯಾಕೆ ಕಾರ್ಪಣ್ಯವು ೧೬

ಆರ್ತಬಂಧುವೆಂದು ನಿನಗೆ ಶರಣುಬಂದೆನು
ಸಾರ್ಥಕವನು ಮಾಡುವಿಯೊ ಜರಿದೆ ಬಿರುದನು ೧೭

ದೀನ ಬಂಧು ಕರುಣಸಿಂಧು ಸುಹೃದ್ಬಾಂಧವ
ಹೀನ ಭವಾರ್ಣವದಿ ಮಗ್ನನಿರುವೆ ಭೂಧವ ೧೮

ತಾರಿಸೈ ಭವಾಬ್ಧಿಯಿಂದ ಇಂದಿರಾವರ
ಸೂರಿಜನರ ಸಂಗವೆನ್ನಗೀಯೋಗಿರಿಧರ ೧೯

ಶ್ರೀನೃಸಿಂಹ ಸತತ ನೀನು ಸದಯ ಮೂರುತಿ
ದೀನ ನನ್ನೊಳ್ಯಾಕೆ ನಿರ್ದಯವ ತೋರುತಿ ೨೦

ಸಾಧುಗಳು ನಿರ್ಗುಣಿಗಳಲ್ಲಿ ದಯವ ಮಾಳ್ಪರು
ಸಾದರದಲಿ ಸರ್ವರಲ್ಲಿ ಸದಯರಿಪ್ಪರು ೨೧

ಧನ್ಯಜನಕೆ ನಿನ್ನನೀವುದೇನು ಅಚ್ಚರ
ದೈನ್ಯ ಬಡುವನನ್ನು ಪಾಲಿಸುವದು ಪರತರ ೨೨

ಚಂದ್ರಚಾಂಡಾಲಗೃಹದ ಮೇಲೆಯಾದರು
ಚಂದ್ರಿಕೆಯ ಪ್ರಭೆಯ ಹರಹದಿಹನೆ ಸುರತರು ೨೩

ಈತೆರ ಶ್ರೀ ಪತಿಯೆ ಎನಗೆ ಪ್ರೀತನಾಗೆಲೋ
ನೀತವಾಗಿ ಕರುಣದಿಂದ ಕರವಪಿಡಿಯಲೊ ೨೪

ಪುನಃ ಪುನಃ ನಿನ್ನನಿದನೆ ಬೇಡಿಕೊಂಬೆನಾ
ಮನದೊಳು ಪ್ರಸನ್ನನಾಗು ಜನಕಜಾರಮಣ ೨೫

ಪಂಚರಾತ್ರಾಗಮೋಕ್ತ ಈಸ್ತುತಿಯನು
ಪಂಚವದನ ವಿನುತ ಶ್ರೀ ರಾಮಚಂದ್ರನು ೨೬

ಮುದದಿ ಮನಸಿನೊಳಗೆ ತಾನೆವದಗಿ ಪೇಳಿದ
ಅದನೆ ಶ್ರೀವರದೇಶ ವಿಠಲ ನುಡಿಸಿ ಬರೆಸಿದ ೨೭

೬

ರಾಮಚಂದ್ರನೆ ನಿನ್ನ ಪದಯುಗ ತಾಮರಸ ನೆರೆನಂಬಿದೆ
ಸೋಮಶೇಖರ ಪೂಜಿತಾಂಘ್ರಿ ಮಹಾಮಹಿಮ
ಪೊರೆಯೆನ್ನನು ಪ

ಜನನ ಮರಣವಿದೂರ ನೀನಾಜನಪತಿಯ ತನುಜಾತನೆ
ಅನಿಮಿಷೇಶರಿಗೊಡೆಯನೆನಿಸಿದೆ ೧

ಶ್ರೀರಮಣಿಯನಾದಿಕಾಲದಿ ನಾರಿಯನಿಪಳು ನಿನ್ನಗೆ
ಮಾರಹರಶರಮುರಿದು ಹರುಷದಿ ವಾರಿಜಾಕ್ಷಿಯ ವರಿಸಿದೆ ೨

ಮೂಜಗತ್ಪತಿಯಂದಿಗೆಂದಿಗು ರಾಜ್ಯತೊಲಗಿದನೆನಿಸಿದೆ
ಈ ಜಗದೊಳಿಹ ಅಜ್ಞಜನರಿಗೆ ಸೋಜಿಗವ ನೀತೋರಿದೆ ೩

ಶ್ರೀಲಕುಮಿ ಪತೆ ನಿನ್ನ ಮಹಿಮಾ ಜಾಲದಿವಿಜರು ತಿಳಿಯರು
ನೀಲಮೇಘಶ್ಯಾಮ ಶಿಲೆಬಾಲೆ ಮಾಡಿದು ಚೋದ್ಯವೆ ೪

ಮುತ್ತುರತ್ನ ಕಿರೀಟ ಶಿರದಲಿ ಇತ್ತಿಹ್ಯರ್ಕಶತಪ್ರಭಾ
ನೆತ್ತಿಯಲಿ ಜಡೆಧರಿಸಿ ವಲ್ಕಲ ಪೊತ್ತು ತಿರುಗುವುದುಚಿತವೇ ೫

ಕುಜಭವ ಭವರರ್ಪಿಸಿದ ಎಡೆ ಭುಂಜಿಪುದು ನೀವಿರಲವ್ವೋ
ಅಂಜಿಕಿಲ್ಲದೆ ಭಿಲ್ಲಹೆಂಗಳೆಯಂಜಲವ ನೀ ಮೆದ್ದಿಯಾ ೬

ಮಂಗಳಾಂಘ್ರಿಯ ಭಜಿಪಯೋಗಿ ಜನಂಗಳಿಗೆ ನೀನಿಲುಕದೆ
ಹಿಂಗದತಿ ವನವನವ ಚರಿಸುವ
ಮಂಗಗಳಿಗೆ ನೀನೊಲಿದಿಯಾ ೭

ಹಾಟಕಾಂಬರ ತಾಟಕಾರಿ ವಿರಾಟ ಮೂರುತಿ ಎನ್ನಯ
ಕೋಟಲೆಯ ಕಡುತಾಪದಿಂಕಡೆದಾಟಿಸೆನ್ನನು ಜವದಲಿ ೮

ಭಾರವಿಲ್ಲದೆ ಅಖಿಲಜಗಸಂಹಾರ ಮಾಡುವಿಯನುದಿನ
ಕ್ರೂರರಾವಣ ಮುಖ್ಯದನುಜರಹೀರಿ ಬಿಸುಟಿದು ಜೋದ್ಯವೆ ೯

ಹರಿಯೆ ನಿನ್ನಯ ನಾಮಧ್ಯಾನದಿ ಹರನು
ಶಾಂತಿಯ ಪೊಂದಿದ
ಧರಿಯ ದನುಜರ ಮೋಹಿಸಲು ನೀ
ಹರನ ಪೂಜಿಯಗೈದಿಯಾ ೧೦

ವಾರಿಜಾಭವ ಮುಖ್ಯದಿವಿಜರು ಪಾರುಗಾಣದೆ ಮಹಿಮನೆ
ಸಾರಿ ಭಜಿಸುವ ಭಕ್ತರಿಗೆ ಕೈವಾರಿಯಂದದಿ ತೋರುವಿ ೧೧

ತಾಮಸರ ಸಂಗದಲಿ ನೊಂದೆನು ಕಾಮಕ್ರೋಧದಿ ಬೆಂದೆನು
ಈ ಮಹಿಗೆ ನಾಭಾರವಾದೆನು ಪ್ರೇಮದಿಂದಲಿ ಪಾಲಿಸು ೧೨

ನಿನ್ನಧ್ಯಾನವ ತೊರೆದು ನಾಬಲು ಅನ್ಯವಿಷಯದಿ ರಮಿಸಿದೆ
ಎನ್ನ ದೋಷಗಳೆಣಿಸದಲೆ ಕಾರುಣ್ಯಸಾಗರ ಕರುಣಿಸು ೧೩

ಹೀನ ವಿಷಯಾಪೇಕ್ಷೆ ಬಿಡಿಸಜ್ಞಾನತಿಮಿರವ ನೋಡಿಸು
ಮೌನಿ ಮಧ್ವಾರ್ಯರ ಮತದ ವಿಜ್ಞಾನ ತತ್ವವ ಬೋಧಿಸು ೧೪

ಸಾಮಗಾನವಿಲೋಲ ರಘುಜನೆ ನೇಮದಿಂದಲಿನೀಯನ್ನ
ನಾಮವನೆ ಪಾಲಿಪುದು ಸಚಿದ್ಧಾಮ ವರದೇಶ ವಿಠಲನೆ ೧೫

## ೭

ರಾಮ ಹರೇ ಹರೇ ರಾಮ ಹರೇ ಕೃಷ್ಣ
ಹರೇ ಹರೇ ಕೃಷ್ಣ ಹರೇ
ರಾಮ ರಾಮ ಹರೇ ಹರೇ ಹರೇ ಕೃಷ್ಣ
ಕೃಷ ಹರೇ ಹರೇ ಹರೇ ಪ

ಕೌಸಲ್ಯ ವರವಂಶೋದ್ಭವ ಸುರ
ಸಂಸೇವಿತ ಪದರಾಮ ಹರೇ
ಕಂಸಾದ್ಯಸುರರ ಧ್ವಂಸಗೈದಯದು
ವಂಶೋದ್ಭವ ಶ್ರೀ ಕೃಷ್ಣಹರೇ ೧

ಮುನಿಮುಖರಕ್ಷಕ ದನುಜರಶಿಕ್ಷಕ
ಫಣಿಧರ ಸನ್ನುತರಾಮಹರೇ
ಘನವರ್ಣಾಂಗ ಸುಮನಸರೊಡೆಯ ಶ್ರೀ –
ವನಜಾಸನ ಪಿತ ಕೃಷ್ಣ ಹರೇ ೨

ಶಿಲೆಯ ಪಾದರಜದಲಿ ಸ್ತ್ರೀ ಮಾಡಿದ
ಸುಲಲಿತ ಗುಣನಿಧಿ ರಾಮ ಹರೇ
ಬಲುವಕ್ರಾಗಿದ್ದ ಬಲೆಯ ಕ್ಷಣದಲಿ
ಚಲುವೆಯ ಮಾಡಿದ ಕೃಷ್ಣ ಹರೇ ೩

ಹರಧನುಭಂಗಿಸಿ ಹರುಷದಿಜಾನಕಿ
ಕರವಪಿಡಿದ ಶ್ರೀರಾಮ ಹರೇ
ಸಿರಿ ರುಕ್ಮಿಣಿಯನು ತ್ವರದಲಿ ವರಿಸಿದ
ಶರಣರ ಪಾಲಕ ಕೃಷ್ಣ ಹರೇ ೪

ಜನಕ ಪೇಳೆ ಲಕ್ಷ್ಮಣ ಸೀತಾ ಸಹ
ವನಕೆ ತೆರಳಿದ ರಾಮ ಹರೇ
ವನಕೆ ಪೋಗಿ ತನ್ನಣುಗರೊಡನೆ ಗೋ –
ವನು ಪಾಲಿಪ ಶ್ರೀ ಕೃಷ್ಣ ಹರೇ ೫

ತಾಟಕೆ ಖರಮಧು ಕೈಟಭಾರಿಪಾ
ಪಾಟವಿ ಸುರಮುಖ ರಾಮಹರೇ
ಆಟದಿ ಫಣಿಮೇಲ್ ನಾಟ್ಯವನಾಡಿದ
ಖೇಟವಾಹ ಶ್ರೀ ಕೃಷ್ಣ ಹರೇ ೬

ಚದುರೆ ಶಬರಿಯಿತ್ತ ಬದರಿಯ ಫಲವನು
ಮುದದಿ ಸೇವಿಸಿದ ರಾಮ ಹರೇ
ವಿದುರನ ಕ್ಷೀರಕೆ ವದಗಿ ಪೋದ ಶ್ರೀ
ಪದುಮನಾಭ ಜಯ ಕೃಷ್ಣ ಹರೇ ೭

ಸೇವಿತ ಹನುಮ ಸುಗ್ರೀವನ ಸಖಜಗ –
ತ್ಪಾವನ ಪರತರ ರಾಮಹರೇ
ದೇವಕಿ ವಸುದೇವರ ಸೆರೆಬಿಡಿಸಿದ
ದೇವ ದೇವ ಶ್ರೀ ಕೃಷ್ಣ ಹರೇ ೮

ಗಿರಿಗಳಿಂದ ವರಶರಧಿ ಬಂಧಿಸಿದ
ಪರಮ ಸಮರ್ಥ ಶ್ರೀರಾಮ ಹರೇ
ಗಿರಿಯ ತನ್ನ ಕಿರಿ ಬೆರಳಿಲೆತ್ತಿ ಗೋ –
ಪರನ ಕಾಯ್ದ ಶ್ರೀ ಕೃಷ್ಣ ಹರೇ ೯

ಖಂಡಿಸಿದಶಶಿರ ಚಂಡಾಡಿದ ಕೋ –
ದಂಡಪಾಣಿ ಶ್ರೀ ರಾಮ ಹರೇ
ಪಾಂಡುತನಯರಿಂ ಚಂಡಕೌರವರ
ದಿಂಡುಗೆಡಹಿಸಿದ ಕೃಷ್ಣ ಹರೇ ೧೦

ತವಕದಯೋಧ್ಯಾ ಪುರಕೈದಿದ ತ –
ನ್ನುವತಿಯೊಡನೆ ಶ್ರೀ ರಾಮ ಹರೇ
ರವಿಸುತ ತನಯಗೆ ಪಟ್ಟವಗಟ್ಟಿದ
ಭವತಾರಕ ಶ್ರೀ ಕೃಷ್ಣ ಹರೇ ೧೧

ಭರತನು ಪ್ರಾರ್ಥಿಸಲರಸತ್ವವ ಸ್ವೀ –
ಕರಿಸಿದತ್ವರದಲಿ ರಾಮ ಹರೇ
ವರಧರ್ಮಾದ್ಯರ ಧರಿಯೊಳು ಮೆರೆಸಿದ
ಪರಮಕೃಪಾಕರ ಕೃಷ್ಣ ಹರೇ ೧೨

ಧರೆಯೊಳಜ್ಞಜನರನು ಮೋಹಿಪುದಕೆ
ಹರನ ಪೂಜಿಸಿದರಾಮ ಹರೇ
ಹರನ ಪ್ರಾರ್ಥಿಸಿವರವನು ಪಡೆದಾ
ಚರಿತೆಯಗಾಧವು ಕೃಷ್ಣ ಹರೇ ೧೩

ಅತುಳಮಹಿಮ ಸದ್ಯತಿಗಳ ಹೃದಯದಿ
ಸತತ ವಿರಾಜಿಪರಾಮಹರೇ
ಸಿತವಾಹನ ಸಾರಥಿಯೆನಿಸಿದ
ಸುರತತಿ ಪೂಜಿತ ಪದ ಕೃಷ್ಣ ಹರೇ ೧೪

ರಾಮ ರಾಮ ಯಂದ್ನೇಮದಿ ಭಜಿಪರ
ಕಾಮಿತ ಫಲದ ಶ್ರೀ ರಾಮಹರೇ
ಪ್ರೇಮದಿ ಭಕ್ತರ ಪಾಲಿಪ ಶ್ರೀ ವರ –
ದೇಶವಿಠಲ ಶ್ರೀ ಕೃಷ್ಣ ಹರೇ ೧೫

೮

ವರದೇಶ ವಿಠಲರಾಯಾ ಗುರು
ವರದೇಂದ್ರರ ಪ್ರೀಯಾ
ಮರಿಯದೆ ನೀಯನ್ನ ಕೈಯ್ಯಾ
ಪಿಡಿದು ಪೊರೆಯಬೇಕು ಜೀಯಾ ಪ

ಒಂದು ದಿನ ನಿನ್ನ ಮನದಲಿ
ನೊಂದು ನುಡಿದ ಯನ್ನ

ಮಂದನ್ನ ಮಾಡಿದ್ಯೊ ಇನ್ನ ನಿನ್ನ
ಸುಂದರ ಮೂರುತಿ ತೋರೆಲೋಘನ್ನ ೧

ಏನು ತಿಳಿಯೆ ಮೂಢ ತನದಿ ನಾ
ಹೀನಭವದಿಗಾಢ
ಮಾನವ ಜನರೊಳಕ್ರೀಡಾ –
ಪರನಾ ಜ್ಞಾನಕಳಿಯೊ ಪ್ರೌಢ ೨

ಹರಿಪರಜನಸಂಗ ಮಾಡದೆ
ನರರೊಳಗಾದೆನು ಮಂಗ
ಸುರವರ ಸಹಿತಾಂತ ರಂಗ –
ದೊಳು ವರದೇಶ ವಿಠ್ಠಲರಂಗ ೩

೬

ಶ್ರೀ ಪತಿಯೆ ನಿನ್ನ ದಯವೆಂತಾಹದೋ
ಪಾಪಕರ್ಮವ ಮಾಡಿ ಜೀವಿಸುವೆ ನಿರುತ ಪ

ಬಾಲತನವನು ಬಾಲಲೀಲೆಯಿಂದಲಿ ಕಳೆದೆ
ಕೀಳು ಜನರೊಡನೆ ಸ್ನೇಹವ ಬೆರಸಿದೆ
ಹಾಳು ಹರಟೆಗೆ ಹೊತ್ತು ಸಾಲದೋಯಿತು ಯನಗೆ
ಶ್ರೀ ಲೋಲ ನಿನ್ನಡಿಗೆ ದೂರಾದೆ ನಾನು ೧

ಬುದ್ಧಿ ಪೂರ್ವಕದಿ ಸದ್ವಿದ್ಯೆಯನು ಕಲಿಯದಲೆ
ಶುದ್ಧ ತಾಮಸ ವಿದ್ಯದೊಳು ರಮಿಸಿದೆ
ಮಧ್ವಶಾಸ್ತ್ರದಸಾರವನ್ನು ತಿಳಿಯದೆ ನಾನು
ಕದ್ದಕಳ್ಳನ ತೆರದಿ ಬಾಳಿದೆನು ಬರಿದೆ ೨

ಪ್ರಾಯತನವೆ ವಿಷ ಪ್ರಾಯವಾಯಿತು ಎನಗೆ
ಕಾಯಜನ ಉಪಟಳದಿ ಮತ್ತನಾದೆ

ತೋಯಜಾಕ್ಷಿಯರ ದುರ್ಮಾಯ ಜಾಲಕೆ ಸಿಲುಕಿ
ನೋಯಿಸಿದೆ ನಿಜ ಸತಿಯ ಪರಿಪರಿಯಲಿಂದ ೩

ಮದನ ಜನಕನೆ ನಿನ್ನ ಮಧುರನಾಮವ ಮರೆದು
ಸುದತಿಯರ ಅಧರಾಮೃತಕೆ ಬೆರೆದು
ವಿಧಿಕುಲಾಚರಣೆ ಜರೆದ್ಹಗಲಿರುಳು ನಾರಿಯರ
ವದನವನು ನೋಡಿ ಮೋದಿಪನರಾಧಮನೊಳ್ ೪

ಉದರ ಗೋಸುಗ ಪರರ ಹೃದಯ ದ್ರವಿಸುವ ತೆರದಿ
ವಿಧ – ವಿಧದಿ, ಆತ್ಮ ಸ್ತೋತ್ರವನೆ ಪೊಗಳಿ
ಸದ–ಸದ್ವಿ ವೇಕವನು ತೊರೆದನ್ಯರ್ಹಳಿದು ಬಲು
ಚದುರ ನಾನೆಂಧೇಳಿ ಮೋಸಗೊಳಿಸುತ ಜನರ ೫

ಕರಿವರದ ನಿನ್ನ ಸಿರಿ ಚರಣಕ್ಕೆ ಶಿರ ಬಾಗ
ದ್ಹರಿ ಭಕುತರಿಗೆ ವಿನಯದಿಂದೆರಗದೆ
ನಿರುತದಲಿ ನಾಚಿಕಿಲ್ಲದಲೆ ಭೂದನುಜಯ ವಾನರಿಗೆ
ಕರಮುಗಿದು ಜೀವಿಪಖೂಳ ಮನುಜನೊಳು ೬

ಸತ್ಯಧರ್ಮವ ತ್ಯಜಿಸಿ ಮತ್ತೆಯುತ್ತಮರಜಾ –
ನ್ನತ್ಯವನು ಸಹಿಸದಲೆ ತತ್ತಳಿಸುವೆ
ಪೆತ್ತವರ ಸೇವಿಸದೇ ಮಿಥ್ಯವನೆ ಬೊಗಳಿದು –
ಷ್ಕೃತ್ಯದಿಂಬಾಳ್ವ ಉನ್ಮತ್ತನರ ಪಶುವಿನೊಳು ೭

ಹರಿಗೆರಗದಿರುವ ಶಿರ ಹರಿಯ ಸ್ಮರಿಸದ ಜಿಂಹೆ
ಹರಿವಾರ್ತೆಯಾಲಿಸದ ಕರ್ಣಂಗಳು
ಹರಿಯ ಪೂಜಿಸದ ಕರ ಹರಿಯ ನೋಡದ ಚಕ್ಷು
ಸರುವ ಪರಿಯ ಪವಿತ್ರದೇಹಧರಿಸಿದ ನರಗೆ ೮

ಪರರ ಹಿಂಸೆಯಗೈಸಿ ಪರರ ವಿತ್ತ ಪಹರಿಸಿ
ಪರರ ನಿಂದಿಸಿ ಪರರ ಬಲುವಂಚಿಸಿ

ಪರಮೇಷ್ಠಿ ಜನಕನೆ ಪರತರ ಪರಂಜ್ಯೋತಿ
ಪರದೈವನೆಂದರಿಯದಿರುವ ಪಾಮರನಿಗೆ ೯

ನಾಮಾಡದಿಹ ಪಾಪ ವೀಮಹಿಯೊಳೊಂದಿಲ್ಲ
ಸೀಮೆಗಾಣಲು ರವಿಜನಿಗೆ ಸಾಧ್ಯವಿಲ್ಲ
ಆ ಮಹಾನರಕಂಗಳೆನಗೆ ತಕ್ಕವು ಅಲ್ಲ
ಸ್ವಾಮಿ ನೀಪೊರೆಯದಿರೆ ಯನಗಾರು ಗತಿಯಿಲ್ಲ ೧೦

ಏನಾದರೊಳಿತೆ ವರದೇಶ ವಿಠಲ ನಿನ್ನಾ
ಜ್ಞಾನುಸಾರದಿ ಕರ್ಮಗಳ ಮಾಡಿದೆ
ದೀನರಕ್ಷಕನೆಂಬ ಬಿರಿದು ನಿಜ ವಿದ್ದರಾ -
ದೀನನಾದವನನುದ್ಧರಿಸಲರಿಯಾ ೧೧

## ೧೦

ಶ್ರೀರಾಮ ಜಯರಾಮ ಜಯ ಜಯತು ರಾಮ
ಶ್ರೀರಾಮ ಜಯರಾಮ ಜಯ ಜಯತು ರಾಮ ಪ

ನಮೋ ರಾಮಚಂದ್ರ ಸದಾಪೂರ್ಣಾನಂದ
ನಮೋ ಸುಗುಣ ಸಾಂದ್ರ ಕೌಸಲ್ಯಕಂದ
ನಮೋ ರಾಘವೇಂದ್ರ ಸೀತಾ ಕುಮುದ ಚಂದ್ರ
ನಮೋ ಅಜಭವೇಂದ್ರಾದ್ಯಖಿಲ ಸುರವಂದ್ಯ ೧

ನಿನ್ನ ಉದಯದಿರವಿಯು ಉನ್ನತಿಯನೈದಿಹನು
ಘನ್ನತೆಯ ಪೊಂದಿಹರು ಕೌಸಲ್ಯದಶರಥರು
ನಿನ್ನ ಅನುಜರು ಜಗದಿ ಪರಮ ಪಾವನ್ನರು
ನಿನ್ನರಸಿ ಶ್ರೀಸೀತೆ ತ್ರೈಲೋಕ್ಯ ಮಾತೆ ೨

ನಿನ್ನ ಕರುಣದಿ ಹನುಮ ಬ್ರಹ್ಮತ್ವ ವೈದಿದನು
ನಿನ್ನ ನಾಮದಿ ವ್ಯಾಧ ವಾಲ್ಮೀಕನಾದ

ನಿನ್ನ ಪದರಜ ಸೋಂಕಿ ಶಿಲೆಯಬಲೆಯಾದುದು
ನಿನ್ನ ಪ್ರೇರಣೆಯಿಂದ ಪ್ರಣವೆ ಜ್ವಾಲಾಯಿತು ೩

ನಿನ್ನ ಪ್ರೇಮದಿ ಶಬರಿ ಮುನ್ನ ಸವಿನೋಡಿ ಫಲ
ನಿನ್ನ ಪದಕರ್ಪಿಸಲು ಘನಪದವಿಯಿತ್ತೆ
ನಿನ್ನ ಸಖ್ಯವನೆ ಬೆರಸಿದವ ಸುಗ್ರೀವನು
ಧನ್ಯವಾಗಿರುತಿಪ್ಪ ನಿಹಪರಂಗಳಲಿ ೪

ನಿನ್ನ ದಾಸ್ಯವನೈದಿ ಅನಂತ ಕಪಿವರರು
ಉನ್ನತೋನ್ನತ ಯೋಗ್ಯತೆಗಳ ಪಡೆದಿಹರು
ನಿನ್ನ ದ್ವೇಷದಿ ರಾವಣಾದಿಗಳು ಮಡಿದರು
ನಿನ್ನ ಪೊಂದಿದ ವಿಭೀಷಣ ರಾಜ್ಯಪಡೆದ ೫

ಚತುರಾಸ್ಯ ಮುಖ ಸುರರು ಕೃತ ಪುಟಾಂಜಲಿಯಲ್ಲಿ
ಸ್ಥಿತರಾಗಿ ಇರುತಿಹರು ನಿನ್ನಾಜ್ಞದಿ
ಇತರ ಮನುಜರ ತೆರದಿ ಪಿತನಾಜ್ಞೆ ಪಾಲಿಸಲು
ವ್ರತವನೇ ಕೈಕೊಂಡು ವನಕೈದಿದೆ ೬

ಜಾನಕಿಯು ಅವಿಯೋಗಿ ನಿನ್ನ ಬಳಿಯಿರುತಿರಲು
ವಾನರರ ಭಲ್ಲೂಕಗಳ ಸೇನೆನೆರಹಿ
ಕಾನನವ ಸಂಚರಿಸಿ ಖಳರನ್ನು ಮೋಹಿಸಿದೆ
ಶ್ರೀನಿಧಿಯೆ ತವ ಲೀಲೆ ಬಹು ಚೋದ್ಯವು ೭
ತಾಮಸರ ಸಂಹರಿಸಿ ಭೂಮಿ ಭಾರವನಿಳಿಸಿ

ನೇಮದಿಂ ಕೈಕೊಂಡು ರಾಜ್ಯವನ್ನು
ಪ್ರೇಮದಿಂ ಪಾಲಿಸಿದೆ ಪ್ರಜೆಗಳನು ವಿಧವಿಧದಿ
ತಾಮರಸಜನ ಪ್ರಾರ್ಥನೆಯ ಮನ್ನಿಸಿ ೮

ನಿನ್ನ ರಾಜ್ಯವೆ ಸಕಲ ಸುಖದ ಸಾಮ್ರಾಜ್ಯವು
ನಿನ್ನ ಯಾಜ್ಞವೆ ವೇದವಾಣಿಯಿಂದಧಿಕವು

ನಿನ್ನನಂತವತಾರಗಳ ಚರಿತೆ ಸೋಜಿಗವು
ನಿನ್ನಯವತಾರಕ್ಕು ಮೂಲಕ್ಕಭೇದವು ೯

ನಿನ್ನ ಮಹಿಮಾ ಜಲಧಿಯೊಳು ರಮೆಯು ಮುಳುಗಿಹಳು
ನಿನ್ನ ಸ್ತುತಿಗೈವ ನಾಲ್ಮೊಗನು ನಾಲ್ಮೊಗದಿಂ
ನಿನ್ನ ಧ್ಯಾನದಿ ಸದಾ ಮೋದಿಪನು ಮಾರುತನು
ನಿನ್ನನೇ ಪಾಡುವರು ಅಜಪವನ ಪತ್ನಿಯರು ೧೦

ನಿನ್ನ ನಾಮವ ಸವಿದು ಭವನು ನಲಿನಲಿಯುತಿಹ
ಪನ್ನಗನು ಖಗರಾಜ ರತಿ ವರ್ಣಿಸುವರು
ಚನ್ನೆ ಪಾರ್ವತಿಯು ವಾರುಣಿಯು ಸೌಪರ್ಣಿಯು
ಚನ್ನಾಗಿ ಪಾಡುವರು ನಿನ್ನ ಗುಣಗಳನು ೧೧

ಇಂದ್ರಾದಿ ಸುರರು ನಾರದಾದಿ ಋಷಿವರರು
ವಂದಿಸುತ ಭಕ್ತಿಯಲಿ ನಿನ್ನ ಪದಗಳಿಗೆ
ಅಂದದಲಿ ವೀಣಾ ಸುಗಾನ ಸಂಗೀತದಲಿ
ಒಂದೊಂದೇ ಮಹಿಮೆಗಳ ಪೊಗಳಿ ಕುಣಿಯುವರು ೧೨

ಸುಖತೀರ್ಥಮುನಿರಾಜ ಗುರುರಾಘವೇಂದ್ರಾರ್ಯ
ಅಕಳಂಕ ವರದೇಂದ್ರ ಯತಿಸಾರ್ವಭೌಮರು
ಮುಕುತಿದಾಯಕ ನಿನ್ನ ಪದಕಮಲ ಪೂಜಿಸುತ
ಪ್ರಖರ ಕಿರಣದಿ ಜಗವ ಬೆಳಗುತ್ತಲಿಹರು ೧೩

ತಾಳತಂಬೂರಿ ಸಮ್ಮ್ಯಾಳದಿಂದಲಿ ಕೂಡಿ
ಕಾಲುಗೆಜ್ಜೆಯ ಕಟ್ಟಿ ಮೇಲು ಸ್ವರದಿಂದ
ಶ್ರೀಲೋಲ ಪರನೆಂದು ಹರಿದಾಸವರ್ಯರು
ಮೇಲಾದ ಭಕ್ತಿಯಲಿ ವಾಲ್ಗೈಸುತಿಹರು ೧೪

ನಿನ್ನ ಲೀಲೆಯ ಕಥೆಯು ಮುಕ್ತಿಗೆ ಸತ್ಪಥವು
ನಿನ್ನ ನಾಮದ ಮಹಿಮೆ ನಿಗಮಗಮ್ಯ

ನಿನ್ನ ಚರಣೋದಕವು ತ್ರಿಜಗಪಾವನ್ನವು
ನಿನ್ನ ನೇಮವೇ ಸೃಷ್ಟಿ ಸ್ಥಿತಿಲಯಕೆ ಕಾರಣವು ೧೫

ನಿನ್ನ ನಾಮದಿ ಭರದಿ ಶುಕನು ಕುಣಿದಾಡುತಿಹ
ನಿನ್ನ ಧ್ಯಾನದಿ ಯೋಗಿವೃಂದ ಸಂದಿಪು (ದು)
ನಿನ್ನ ತೋಷದಿ ತೃಣವು ಬ್ರಹ್ಮನಿಂದಧಿಕವು
ನಿನ್ನ ರೋಷದಿ ಅಜಭವಾದ್ಯರು ತೃಣರು ೧೬

ನಿನ್ನ ಸುಂದರ ಮೂರ್ತಿ ಕಣ್ಣಿಗಲ್ಹಾದಕರ
ನಿನ್ನಂಘ್ರಿ ಸೇವೆ ಸಾಮ್ರಾಜ್ಯಗಿಂ ಪರತರವು
ನಿನ್ನ ನಾಮದ ಘೋಷ ಕಿವಿಗೆ ಸಂತೋಷವು
ನಿನ್ನ ನಾಮದ ರುಚಿಯು ಅಮೃತಕಿಂತಧಿಕ ೧೭

ನಿನ್ನ ಧ್ಯಾನವೆ ಸಕಲ ಸಾಧನದ ಸಾರವು
ನಿನ್ನ ಗುಣಗಾನವೆ ಶಾಸ್ತ್ರಗಳ ಭೂಷಣವು
ನಿನ್ನ ಮಹಿಮಾರಹಿತ ಕಾವ್ಯವಗ್ರಾಹ್ಯವು
ನಿನ್ನ ಲೀಲಾ ರಹಿತ ಶಾಸ್ತ್ರವೆ ಕುಶಾಸ್ತ್ರ ೧೮

ನಿನ್ನ ನಾಮಧ್ಯಾನವೇ ದೇಹ ಸಾರ್ಥಕವು
ನಿನ್ನ ನಾಮವೆ ವಿವಿಧ ರೋಗನಿರ್ಮೂಲಕವು
ನಿನ್ನ ನಾಮವೆ ದುರಿತರಾಶಿಗೆ ಪಾವಕವು
ನಿನ್ನ ನಾಮವೆ ಸಕಲಭವಬಂಧ ಮೋಚಕವು ೧೯

ನಿನ್ನ ವ್ಯಾಪ್ತತೆಯು ಅಣು – ರೇಣು ತೃಣ ಕಾಷ್ಟದಲಿ
ನಿನ್ನ ದಯಪರಮೇಷ್ಠಿಯಿಂದಿರುವೆಗಳಲಿ
ನಿನ್ನ ಪ್ರೇಮದಿ ನಲಿದ ಮಂದಮತಿ ವಂದ್ಯನು
ನಿನ್ನಲ್ಲಿ ಮಮತೆಯಿಲ್ಲದವದೂಷಿತನು ೨೦

ಅಜಭವಗಿರೀಶಾ ಭಜಕಜನ ದಾಸಾ
ಸುಜನಮನತೋಷಾ ಕುಜನ ಮನಕ್ಲೇಶ

ದ್ವಿಜತತಿಯ ಪೋಷ, ರಜನಿಚರನಾಶ
ರಜತಪುರಧೀಶ, ಭುಜಗಗಿರಿ ವಾಸ ೨೧

ತಂದೆ ತಾಯಿಯು ನೀನೆ, ಬಂಧು ಬಳಗವು ನೀನೆ
ಹಿಂದು ಮುಂದು ನೀನೆ, ಎಂದೆಂದು ನೀನೆ
ಬಂದಭಯ ಪರಿಹರಿಸಿ ಕುಂದದಲೆ ಕಾಯ್ವಸಂ –
ಬಂಧಿಗನು ಆಪ್ತ ಗೋವಿಂದ ನೀನೆ ೨೨

ಸೃಜಿಸಿದವನು ನೀನೆ ಪೋಷಿಸಿದವನು ನೀನೆ
ನಿಜಗತಿಯ ಜೀವರಿಗೆ ನೀಡುವವನು ನೀನೆ
ಅಜಪಿತನೆ ನಿನ್ನ ಪದ ಭಜನೆ ಮಾಳ್ಪವರನ್ನು
ನಿಜವಾಗಿ ಕಾಪಾಡಿ ಪೊರೆವ ಪ್ರಭುನೀನೆ ೨೩

ಕೊಡುವವನು ನೀನೆ ಕೋಳುವವನು ನೀನೆ
ಅಡಿಗಡಿಗೆ ಸುಖದುಃಖ ನೀಡುವವ ನೀನೆ
ಕೊಡುವದಾತನು ನೀನೆ ಕೊಟ್ಟದ್ದು ಕೊಂಡರೆ
ಹೊಡಕೊಂಡು ಅಳುವದ್ಯಾತಕೆ ಮೂಢಪ್ರಾಣಿ ೨೪

ಈ ಪೊಡವಿಯೊಳು ಮೊದಲು ನಾನು ಬಹು ಕಾಲದಿ
ಕೌಪೀನ ಸಹ ಯನ್ನ ಸಂಗಡಿರಲಿಲ್ಲ
ಈ ಪೊಡುವಿಯನು ಬಿಟ್ಟು ನಾ ಪೋಪಕಾಲಕ್ಕು
ಈ ಪರಿಯೆ ಪೋಪೆನೆಂಬುದು ಸಟಿಯು ಅಲ್ಲ ೨೫

ಗಾಡಿ ವಾಜಿಯು ಮತ್ತೆ ಬೆಡಗಿನ ವಸನಗಳು
ಕೇಡುಯಿಲ್ಲದವಾ ಭರಣ ವಸ್ತುಗಳು
ನಾಡಿನೊಳು ಬಹುಮನ್ನಣೆಯು ಯೆಂಬರೆಲ್ಲೆನ್ನ
ಕೂಡಬರಬಹುದಾದುದೊಂದುಯಿಲ್ಲ ೨೬

ಎಷ್ಟುಗಳಿಸಿದರೆನ್ನ ಹೊಟ್ಟೆಗೊಂದೇ ರೊಟ್ಟಿ
ಸೃಷ್ಟಿಪತಿ ನಿನ್ನಂಘ್ರಿ ನಿಷ್ಠೆ ತೊರೆದು

ಕಷ್ಟ ನಷ್ಟಗಳನ್ನು ಸಹಿಸಿ ನಿಷ್ಠುರನಾಗಿ
ದುಷ್ಟತನದಿಂದ ನಾನಿಷ್ಟುಪರಿಗಳಿಸಿ ೨೭

ದಾನಧರ್ಮಗಳಿಲ್ಲ ವ್ರತನೇಮಗಳುಯಿಲ್ಲ
ಆನಮಿಸಿಕೊಡಲಿಲ್ಲ ಮಾನಿ ವಿಪ್ರರಿಗೆ
ಧೇನುಪಾಲನೆ ನಿನ್ನಧ್ಯಾನವನ್ನೇ ಮರೆದು
ಶ್ವಾನನಂದದಿ ಕಾದು ಕೊಂಡು ಕುಳಿತಿಪ್ಪೆ ೨೮

ವಾರನಾರಿಯರಲ್ಲಿ ವೇಷಧಾರಿಗಳಲ್ಲಿ
ಸೂರೆಮಾಡಿದೆ ಕರ್ಣನೆನಿಸ ಬೇಕೆಂದು
ಶ್ರೀರಮಾಪತಿ ನಿನ್ನ ಚರಣ ಕಮಲಗಳನ್ನು
ಆರಾಧಿಪರಿಗೆ ನಾರುಪ್ವಿ ಕೊಡಲಿಲ್ಲ ೨೯

ಸತಿಸುತರು ಹಿತದವರು ಹಿತವ ಮೇಲ್ತೋರಿದು -
ರ್ಗತಿಗೆನ್ನ ಗುರಿಮಾಡುತಿಪ್ಪರಲ್ಲದಲೇ
ಕ್ಷಿತಿ ಪತಿಯೆ ನಿನ್ಹೊರತು ಹಿತವ ನಿಜ ತೋರಿ ಪರ -
ಗತಿಗೆ ಸಾಧನ ತೋರ್ಪರಾರು ಯನಗಿಲ್ಲ ೩೦

ಈ ಮಹಾಜ್ವರದಿಂದ ನೊಂದು ನಿನ್ನನು ನೆನೆವೆ
ನಾಮಹಾಭಕ್ತಿಯಲಿ ನಂಬಿದವನಲ್ಲ
ನಾ ಮಾಡಿದ ಪಾಪರಾಶಿಗಳ ಪರಿಹರಿಸಿ
ಪ್ರೇಮದಿಂದಲಿ ಪೊರೆಯೋ ಪರಮಕರುಣಿ ೩೧

ರೋಗವನೆ ಹೆಚ್ಚಿಸು ನಿರೋಗಿಯನು ಮಾಡು ಭವ
ರೋಗದಿಂದಗತೀ ಕಡೆದಾಂಟಿಸು
ಯೋಗಿವರ ನಿನ್ನಿಚ್ಛೆ ಹೇಗೆಮಾಡಿದರುಸರಿ
ಆಗದೆಳ್ಳಿನಿತು ಸಂಕೋಚವೆನಗೆ ೩೨

ನೀಕೊಟ್ಟಕವಚವಿದು ನೀ ತೆಗೆದು ಹಾಕಲ್ಕೆ
ನಾಕೆಟ್ಟುದುದುಯೇನು ಕರುಣಾಳುವೆ

ಈ ಕವಚ ಕೆಲಕಾಲ ಬಿಟ್ಟಮಾತ್ರಕೆ ಮುಂದೆ
ನೂಕಬೇಡೆನ್ನ ಮನ ಪಾಪಗಳ ಕಡೆಗೆ ೩೩

ತನುಮನವು ನಿನ್ನದು ಧನಧಾನ್ಯ ನಿನ್ನದು
ವನಿತೆ ನಿನ್ನವಳು ಮನೆ ಮಾರು ನಿನ್ನದು ದೇವ
ಎನಗಾಪ್ತರೆಂಬುವರು ನಿನ್ನದಾಸರು ರಾಮ
ಎನದೆಂಬ ವಸ್ತುವೆಲ್ಲವು ನಿನ್ನದು ೩೪

ನಿನ್ನ ನಂಬಿದಯನೆಗೆ ಪಾಪದಂಜಿಕೆಯಿಲ್ಲ
ಪುಣ್ಯದಾಶೆಯು ಇಲ್ಲ ಪರಮಪುರುಷ
ನಿನ್ನ ಪ್ರೇರಣೆಯಿಂದ ಯನ್ನಿಂದ ಮಾಡಿಸುವ
ಪುಣ್ಯಪಾಪದ ಫಲವು ನಿನ್ನದಯ್ಯಾ ೩೫

ನೀನೆ ಸರ್ವೇಶ ಪವಮಾನನೆ ಪರಮಗುರು
ಪೂರ್ಣಪ್ರಜ್ಞರ ಮತವೆ ಸ್ಥಿರವೆಂಬ ಮತಿಯ
ಸಾನುರಾಗದಿ ರಾಘವೇಂದ್ರರಾಯರು ಮೇಣ್
ಜ್ಞಾನಿ ವರದೇಂದ್ರಾರ್ಯ ಗುರುಗಳಲಿ ಭಕುತಿ ೩೬

ಗುರುಪರಕ್ಷೆಪರವಾಗಿ ದಾಸವರ್ಗದಲೆನಗೆ
ಸ್ಥಿರಮತಿಯ ಪಾಲಿಸೊ ಸರಸಿಜಾಕ್ಷ
ವರಗುರು ಪ್ರಾಣೇಶ ದಾಸಾರಾಯರೆ ಯನಗೆ
ಪರಮಗುರುವೆಂಬ ಮತಿ ನೆಲೆಗೊಂಡುಯಿರಲಿ ೩೭

ಮುಂದೆ ಹೌದೆಂದೆನ್ನ ಹಿಂದೆ ಜನ ನಿಂದಿಸಲಿ
ಇಂದಿರೇಶನೆ ನಿನ್ನ ಕರುಣ ಮಾತ್ರಿರಲಿ
ಮಂದಜಾಸನ ಜನಕ ಇಂದಿರಾಪತಿಯಾಪ –
ದ್ಬಂಧು ನೀನೆಂದು ಮನಕರಿಕೆ ಇರಲಿ ೩೮

ದೇಶವನೆ ತೊಲಗಿಸು ವಿದೇಶದೊಳಗೆ ಕಳಿಸು
ಗಾಸಿಯನು ಮಾಡಿಯಪಹಾಸಗೊಳಿಸು

ದಾಶರಥೆಯ್ನದೊಂದೇ ಪ್ರಾರ್ಥನೆಯು ನಿನ್ನ
ದಾಸ್ಯವಂದೆನಗೆ ಕೊಟ್ಟಾಶೆ ಬಿಡಿಸು ೩೯

ನಿನ್ನ ದಾಸಸಂಗ ಸರ್ವದಾ ದೊರಕಲಿ
ನಿನ್ನ ಸೇವೆಯೊಳೆನ್ನ ದೇಹವೇ ಕೊರಗಲಿ
ನಿನ್ನ ನಾಮದಲೆನ್ನ ಜಿಹ್ವೆನಲಿದಾಡಲಿ
ಎನ್ನ ಹೃದಯದಿ ನಿನ್ನ ರೂಪಸ್ಥಿರಲಿ ೪೦

ರಾಮಸುಸ್ತವಕವನು ಜಾಡ್ಯದಲಿ ಶ್ರೀ ಕುಪ್ಪೀ
ಭೀಮನುತ ವರದೇಶ ವಿಠಲ ನುಡಿಸಿದುದು
ಪ್ರೇಮದಿಂದೆಮ್ಮಗುರು ಪ್ರಾಣೇಶ ದಾಸಾರ್ಯ
ರಾಮಹಾಗುರುವರ್ಯರಿಗೆ ಸಮರ್ಪಿಸುವೆ ೪೧

## ೧೧

ಸ್ಮರಿಸುವೆನು ಸದ್ಭಕ್ತಿಯಲಿ ಶ್ರೀರಾಮನ ಗುಣಧಾಮನ
ಸಿರಿವಿರಿಂಚಾದ್ಯಮರಗಣ ಸಂಸ್ತುತ್ಯನ ಸಂತೃಪ್ತನಾ ಪ

ಆದಿಯಲಿ ಝಷನಾಗಿ ನಿಗಮವ ತಂದನ ಮುನಿವಂದ್ಯನ
ಭೂಧರಾಧರ ದಿವಿಜರಿಗೆ ಸುಧೆಗರೆದನ ಸುರವರದನ
ಕಾದು ಕಿಟರೂಪದಲಿ ಭೂಮಿಯ ತಂದನ ಗುಣವೃಂದನ
ಬಾಧಿಸಿದ ರಕ್ಕಸನ ತರಿದು ಪ್ರಲ್ಹಾದನ ತಾ ಪೊರೆದನ ೧

ಪೊಡವಿ ಮೂರಡಿ ಮಾಡಿಬಲಿಯನು
ತುಳಿದನ ಅವಗೊಲಿದನ
ಕೊಡಲಿ ಪಿಡಿದಾ ಕ್ಷತ್ರಿಕುಲ ವಿರಾಮನ ಭೃಗು ರಾಮನ
ಮೃಡನೊರದಿ ಯುನ್ಮತ್ತ ದೈತ್ಯರು ಬಾಧಿಸೆ ಧರಿ ಪ್ರಾರ್ಥಿಸೆ
ಜಡಜ ಪೀಠಾದ್ಯಮರರಾ ಮೊರೆ ಕೇಳ್ದನ ಧರೆಗಿಳಿದನ ೨

ದಶರಥನ ಸತಿಯುದರದಲಿಯವತರಿಸಿದ ಮುದಗರಿಸಿದ
ಬಿಸರುಹಾಪ್ತನ ವಂಶವನು ಉದ್ಧರಿಸಿದ ಮೈಮರಸಿದ

ದಶದಿಶೆದಿ ಸುರರೆಲ್ಲ ಪೂಮಳೆಗರೆದರು ಸುಖಸುರಿದರು
ಅಸಮಲೀಲೆಯ ತೋರ್ದರಘುಕಲಚಂದ್ರನ ಸುಖಸಾಂದ್ರನ ೩

ಗಾಧಿಸುತನಧ್ವರವ ಕಾಯ್ದ ಸಮರ್ಥನ ಜಗಕರ್ತನ
ವೇದಧನು ಮೊದಲಾದ ಕಲೆಗಳ ತಿಳಿದನ ಮುನಿಗೊಲಿದನ
ಹಾದಿಯಲಿ ಶಿಲೆಯಾದ ಅಹಲ್ಯಳ ಪೊರೆದನ ಸಿರಿವರದನ
ಮೋದದಲಿ ಹರಧನು ಮುರಿದ ಗಂಭೀರನ ಬಹುಶೂರನ ೪

ಜನಕಭೂಪತಿ ತನುಜಳೆನಿಸಿದಸೀತೆಯ ಭೂಜಾತೆಯಾ
ಘನಹರುಷದಲಿ ವಲಿಸಿಕರವನು ಪಿಡಿದನ ಯಶಪಡೆದನ
ದನುಜರುಪಟಳತೋರಲಾಕ್ಷಣ ಸೀಳ್ದನ ಸುರರಾಳ್ದನ
ತನಗೆ ತಾನೇ ಸೋಲಿಸಿದ ಜನಮೋಹನ ಖಗವಾಹನ ೫

ಜನಕನಾಜ್ಞವ ಪಾಲಿಸಿದ ದಯವಂತನ ಅಘಶಾಂತನ
ಅನುಜಸತಿಸಹ ಪುರದಿ ತಾಪೊರಮಟ್ಟನ ಅತಿಧಿಟ್ಟನ
ವನದಿ ಬಹು ಮುನಿಗಳ ಕಾರಾರ್ಚಿತನಾದನ ಸುಪ್ರಸಾದನ
ಅನುಜ ಭರತಗೆ ದಯದಿ ಪಾದುಕೆ ಕೊಟ್ಟನ ಸಂತುಷ್ಟನ ೬

ಮನುಜರಂದದಿ ಸತಿವಿಯೋಗವತೋರ್ದನ ಕುಜನಾರ್ದನ
ವನಿತೆಯಂಜಲ ಫಲಗಳನು ತಾಮೆದ್ದನ ಶ್ರುತಿಸಿದ್ಧನ
ದನುಜರಿಪು ಹನುಮಂತನನು ಸಾರೆ ಗರೆದನ ಕರುಣಿಸಿದನ
ವನಜ ಸಖಸುತನೊಡನೆ ಸಖ್ಯವ ಮಾಡ್ದನ ವರನೀಡ್ದನ ೭

ಲೀಲೆಯಿಂದಲಿ ತಾಳ ಮರಗಳ ಸೀಳ್ದನ ನೆರೆಬಾಳ್ದನ
ವಾಲಿಯನು ಸಂಹರಿಸಿದತಿಬಲವಂತನ ಶ್ರೀಕಾಂತನ
ಮೇಲೆನಿಪ ರಕ್ಕಸರನೆಲ್ಲರ ತುಳಿದನ ಅಸುಸೆಳೆದನ
ಶ್ರೀಲತಾಂಗಿಯ ಕ್ಷೇಮವಾರ್ತೆಯ ಕೇಳ್ದನ ಮುದತಾಳ್ದನ ೮

ಗಿರಿಗಳಿಂದಲಿ ಶರಧಿಯನು ಬಂಧಿಸಿದನ ಸಂಧಿಸಿದನ
ಹರಿಗಳೆಲ್ಲರ ಕೂಡಿಲಂಕೆಯ ಸಾರ್ದನ ರಣದಿರ್ದನ

ಉರುಪರಾಕ್ರಮಿ ರಾವಣನ ಶಿರಕಡಿದನ ಹುಡಿಗೆಡೆದನ
ವರವಿಭೀಷಣ ಭಕ್ತಗಭಿಷೇಚಿಸಿದನ ಪೋಷಿಸಿದನ ೯

ಸಿರಿಸಹಿತ ಪುಷ್ಪಕವನೇರಿದ ಚಲುವನ ಅತಿ ಪೊಳೆವನ
ತ್ವರದಿಶೃಂಗರಿಸಿದ ಅಯೋಧ್ಯಕೆ ಬಂದನ ಅಲ್ಲಿ ನಿಂದನ
ಭರತ ಪ್ರಾರ್ಥಿಸಲಾಕ್ಷಣದಿ ಮೊರೆ ಕೇಳ್ದನ ಧರಿಯಾಳ್ದನ
ಸರಸಿಜಾಸನ ಪ್ರಮುಖರಾರ್ಚನೆ ಕೊಂಡನ ಕೋದಂಡನ ೧೦

ಮರುತಸುತನಿಗೆ ಅಜನ ಪದವಿಯನಿತ್ತನ ಬಹುಶಕ್ತನ
ಚರಣಸೇವಕ ಜನಕಭೀಷ್ಟದಾತನ ವಿಖ್ಯಾತನ
ನಿರುತ ಸನ್ಮುನಿಹೃದಯ ಮಂದಿರ ವಾಸನ ಜಗದೀಶನ
ಸ್ಮರಣೆ ಮಾತ್ರದಿ ದುರಿತರಾಶಿಯ ತರಿದನ ಸುಖಗರೆವನ ೧೧

ದೇವಕೀ ವಸುದೇವ ಸುತನೆಂದೆನಿಪನ ಜಗಕಧಿಪನ
ಮಾವನನು ಸಂಹರಿಸಿ ಶಕಟನ ಕೊಂದನ ಆನಂದನ
ಗೋವು ಕಾಯುತ ಗಿರಿಯ ಬೆರಳಲಿ ಆಂತನ ಬಹುಶಾಂತನ
ಗೋವ್ರಜದಿ ಗೋಪಿಯರ ವಸನವ ಕಳೆದನ ಅಹಿತುಳಿದನ ೧೨

ಲೋಕನಾಥನು ಪಾರ್ಥಸಾರಥಿಯಾದನ ಸುಪ್ರಮೋದನ
ನೇಕ ಪರಿಭಗವತ್ಸುಗೀತೆಯ ಪೇಳ್ದನ ತಮಸೀಳ್ದನ
ಆ ಕುರು ಕುಲವ ತರಿದ ಪಾಂಡವ ಪ್ರಾಣನ ಸುಪ್ರವೀಣನ
ಆಕುರುಪ ಭೀಷ್ಮನಿಗೆ ಮುಕ್ತಿಯ ಕೊಟ್ಟನ ಅತಿಶ್ರೇಷ್ಟನ ೧೩

ಕಪಟನಾಟಕ ನಗ್ನರೂಪದಿ ನಿಂತನ ನಿಶ್ಚಿಂತನ
ತ್ರಿಪುರದಲಿ ಜಲಜಾಕ್ಷಿಯರ ವ್ರತ ಭಂಗನ ನಿಸ್ಸಂಗನ
ಕೃಪಣವತ್ಸಲ ತುರಗವೇರಿ ತಾನಡೆದನ ಅಸಿಪಿಡಿದನ
ಅಪರಿಮಿತ ಬಹುಕ್ರೂರ ಯವನ ವಿಘಾತನ ಪ್ರಖ್ಯಾತನ ೧೪

ಈ ವಿಧದಿ ಬಹುಲೀಲೆ ಗೈವ ಸುಚರಿತನ ಜಗಭರಿತನ
ಭಾವಶುದ್ಧಿಲಿ ಭಜಿಸುವವರಘಕಡಿವನ ಗತಿಕೊಡುವನ

ಪಾವಮಾನಿ ಮತಾನುಗರ ಕರಪಿಡಿವನ ಭವತಡೆವನ
ದೇವತತಿ ಸದ್ವಿನುತ ವರದೇಶ ವಿಠಲನ ನಿಷ್ಕುಟಿಲನ ೧೫

## ೧೨

ಹರಿನಿನ್ನ ಕರುಣವಿರಾಲಾವ ಭಯವು
ಸ್ಮರಣೆ ಮಾತ್ರದಿ ಸಕಲದುರಿತಗಳ ಪರಿಹರಿಪ ಪ

ಸಣ್ಣ ವಯದಲಿ ಶ್ರೀ ಜಗನ್ನಾಥದಾಸಾರ್ಯ
ಬನ್ನ ಬಡುತಿರೆ ವ್ಯಾಧಿ ಪೀಡೆಯಿಂದ
ಘನ್ನ ಕರುಣಾಬ್ಧಿ ಶ್ರೀ ಗೋಪಾಲದಾಸರಾ –
ಬಿನ್ನಪವನಾಲಿಸಿ ರೋಗಮೋಚನ ಗೈದ ೧

ದಾಸಕುಲರತ್ನ ಪ್ರಾಣೇಶ ದಾಸಾರ್ಯರ
ಆಸುವಂಶದ ತರುಳ ರೋಗದಿಂದಾ
ಯಾಸ ಬಡುವದು ಕೇಳಿ, ಆಶೆಯನೆ ತೊರೆದಿಹನು
ನೀ ಸಲಹ ಬೇಕಯ್ಯಾ ಕರುಣದಿಂದಲಿ ನೋಡಿ ೨

ವರದೇಂದ್ರ ಗುರುವರರ ಸುರುಚಿರಾಲಯದಲ್ಲಿ
ಇರಳ್ಹಗಲು ನಿಮ್ಮ ನಾಮ ಸ್ಮರಿಸುವಂಥ
ತರುಳ ನೀ ಪರಿ ಪೀಡಿಸುವದುಚಿತವೇನೊ ಶ್ರೀ
ಹರಿ ವಿಚಾರಿಸಿ ನೀನೆಸಿದಯದಿಂದ ನೋಡೊ ೩

ವಾಸವಾದ್ಯಮರನುತ ವಾಸುದೇವನೆ ನೀನು
ಈ ಸಮಯದೊಳಗಿವನ ಕರುಣದಿಂದ
ಪೋಷಿಸಲು ನಿನ್ನ ಪೊಂದಿರುವ ಸದ್ಭಕ್ತರ
ದಾಸನೆಂದೆನಿಸಿ ಜೀವಿಸಲಿಯನವರತ ೪

ನಿನ್ನನೇ ನಂಬಿರುವೆ ನಿನ್ನನೇ ಪ್ರಾರ್ಥಿಸುವೆ
ಧನ್ವಂತ್ರಿ ನೀನೆನ್ನ ಮೊರೆಯಾಲಿಸೊ

ನಿನ್ನ ಸೇವಕರ ಬಲು ಬನ್ನ ಬಡಿಸಲು ಸಲ್ಲ
ಇನ್ನು ನೀ ಕರುಣಿಪುದು ವರದೇಶವಿಠಲ ೫

## ಶ್ರೀ ಮಹಾಲಕ್ಷ್ಮಿ

### ೧೩

ಭಾಗ್ಯವೆ ಪಾಲಿಸೆನ್ನಗೆ
ಶ್ರೀ ಭಾರ್ಗವಿ ಜನನಿ ಪ

ಭಾಗ್ಯವೆ ಪಾಲಿಸು ಭಾರ್ಗವಿ, ಕಮಲಜ
ಭಾರ್ಗಾದ್ಯನಿಮಿಷ ವರ್ಗಸೇವಿತೆ ಅ.ಪ

ಹರಿಸರ್ವೋತ್ತಮ ಗುರುಸುಖತೀರ್ಥರು
ಹರಫಣಿ ವಿಪಶಕ್ರಾದಿಗಳು
ತರತಮ ಭೇದ ಮೂರೆರಡು ಸತ್ಯ ವೆಂ -
ದರಿತು ಮನದಿ ಬಲು ಹರುಷ ಬಡುತಲಿಹ ೧

ಕಾಮಕ್ರೋಧಗಳ ಗೆಲಿದು ಸತತನಿ -
ಷ್ಕಾಮ ಭಕ್ತಿಯಲಿ ಮನವುಬ್ಬಿ
ರಾಮ ರಾಮ ಎಂದ್ ಪ್ರೇಮದಿ ಪಾಡುತ
ರೋಮಾಂಚಿತ ತನುವಿಲಿನರ್ತಿಪ ಸೌ ೨

ದುರ್ಜನ ಸಂಗ ವಿವರ್ಜಿಸಿ ನಿರುತದಿ
ಸಜ್ಜನಸಂಗಸುಖವ ಬಯಸಿ
ಅರ್ಜುನಸಖನ ಪದಾಬ್ಜಧ್ಯಾನ ದೊಳು
ಗರ್ಜಿಸುತಲಿ ನಿರ್ಲಜ್ಜನೆನಿಪ ಸೌ ೩

ನಾನುನನ್ನದೆಂಬೊಹೀನ ಮತಿಯ ಕಳೆ -
ದೆನು ಮಾಡುತಿಹಕರ್ಮಗಳ

ಶ್ರೀನಿವಾಸನ ಪ್ರೇರಣೆ ಎಂದು ಸ –
ದಾನುರಾಗದಲಿ ಅರ್ಪಿಸುತಿಹ ಸೌ ೪

ಸೂಸುವ ಭಕ್ತಿ ವಿರಕ್ತಿ ಜ್ಞಾನಧನ
ರಾಶಿಯ ಕೋಟ್ಟೀಭವಸುಖದ
ಆಶೆಬಿಡಿಸಿ ವರದೇಶ ವಿಠಲನ
ದಾಸರ ದಾಸರ ದಾಸ ನೆನಿಪ ಸೌ ೫

## ವಾಯುದೇವರು

## ೧೪

ಆನಮಿಸುವೆ ನಿನಗೆ ಶ್ರೀ ಪವಮಾನ ಪಾಲಿಸೆನಗೆ
ಜ್ಞಾನ ಪೂರ್ವಕದಿ ಶ್ರೀನಿವಾಸನಗುಣ
ಗಾನ ಮಾಡುವಮತಿ
ಸಾನುರಾಗದಿ ಕೊಡು ಪ

ಹರಿಕುಲದಲಿ ಜನಸಿ
ಶ್ರೀ ರಘುವರದೂತನೆನಿಸಿ
ಶರಧಿಯ ಲಂಘಿಸಿಧರಿಜೆ ದೇವಿಪದ –
ಕ್ಕೆರಗಿ ಮುದ್ರಿಕೆ ಕೊಟ್ಟಹರುಷದಿ ಹನುಮನೆ ೧

ಹೇಮನಗರ ದಹಿಸಿ
ಸತ್ವರ ರಾಮ ಪದಕೆ ನಮಿಸಿ
ಪ್ರೇಮದಿ ಜಾನಕಿ ಕ್ಷೇಮವ ತಿಳುಹಿಸಿ
ತಾಮರಸಜಪದ ನೇಮದಿ ಐದಿದ ೨

ಕುಂತಿಗರ್ಭದಿ ಜನಿಸಿ
ರುಕ್ಮಿಣಿಕಾಂತನಣುಗನೆನಿಸಿ
ಅಂತಕಾತ್ಮಜನ ಸಂತತ ಸಲಹಿದೆ
ಹಂತಧಾರ್ತ್ಯರಾಷ್ಟ್ರಾಂತಕ ಭೀಮನೆ ೩

ದೇಶಿಕಪತಿಯನಿಸಿ
ಬದರಿನಿವಾಸನ ಪದ ಭಜಿಸೆ
ವಾಸುದೇವಸರ್ವೇಶನೆಂದರುಹಿದೆ
ದೂಷಿತ ಮತ ತಮ ನೇಸರಮಧ್ವನೆ ೬

ಕಾಮಕ್ರೋಧದಿ ಬೆಂದೆ
ನಾ ಬಲು ತಾಮಸದಲಿ ನೊಂದೆ
ಶ್ರೀ ಮನೋಹರ ವರದೇಶ ವಿಠಲನ
ನಾಮ ಬರೆದೆ ಕುಪ್ಪೀ ಭೀಮನೆ ಪಾಲಿಸು ೫

೧೫

ಪವಮಾನ ಪಾಲಿಸೆನ್ನ
ಸದ್ಗುಣಘನ್ನ ಪ

ಪವಮಾನ ಪೊರಿಯೆನ್ನ ಕವಿಭಿರೀಡಿತ ನಿನ್ನ
ಸ್ತವನಗೈಯುವ ಮಾನವರೊಳಧಮ ನಾನು
ಪವಮಾನ ಪಾಲಿಸೆನ್ನ ಅ.ಪ

ವಿತತಸುಮಹಿಮ ಭಾರತಿ ಪತಿ ಶಿವ ಮುಖ
ದಿತಿಜಾರಿತತಿನುತ ಶ್ರುತಿ ಪ್ರತಿಪಾದ್ಯ ಆ
ನತ ಬಂಧು ತತ್ವಾಧಿ ಪತಿಗಳೊಳುತ್ತಮ
ಪ್ರಥಮಾಂಗ ಹರಿ ಪ್ರೀಯ ದ್ವಿತಿಯುಗದಲಿ ಕಪಿ –
ಸುತನಾಗಿ ನೀರಜ ಪತಿಯಪಾದದ್ವಯ
ಅತಿಹಿತದಲಿ ಸೇವಿಸಿ ಲವಣಾರ್ಣವ
ಶತಯೋಜನವ ಲಂಘಿಸಿ
ರಾಕ್ಷಸಕುಲ ಹತಗೈಸಿ ಪುರದಹಿಸಿ
ದೇವಿಯ ಸುವಾರುತಿಯ ತಿಳಿಸಿ ಭಾವಿದ್ರುಹಿಣನೆಂದೆನಿಸಿ ೧

ಕುರುಕುಲದಲಿ ಕುಂತಿ ತರುಳನೆನಿಸೆ ಯುಧಿ
ಷ್ಠರನನುಜ ವೃಕೋದರ ನಾಮದಲಿಯವ
ತರಿಸಿ ಬಕಾದಿ ದುಷ್ಟರ ಶಿಕ್ಷೆಯನು ಗೈಸಿ
ಹರಿಇಚ್ಛೆಯಲಿ ವನಚರಿಸಿ ಕೀಚಕನ ಸಂ
ಹರಿಸಿ ದುಶ್ಯಾಸನಾದ್ಯರನೆಲ್ಲರಣದೊಳು
ದುರುಳದುರ್ಯೋಧನನಸಾನುಜಗಣ
ತ್ವರಿತಗೈಸಿ ಹನನ ವಿಜಯನಾಗಿ ಪೊರೆದೆ ಧರ್ಮಾರ್ಜುನನ
ತ್ರಿಭುವನದಿ ಸರಿಗಾಣೆ ದ್ವಿಜರಿಪು ಪದುಪಂಚಾನನ ೨

ಮಣಿಮಂತ ಮೊದಲಾದದನುಜರು ಹರಿದ್ವೇಷ -
ವನು ಮಾಡಲೋಸುಗವನಿಯೊಳುದ್ಭವಿಸಿ ನಿ -
ರ್ಗುಣರೂಪ ಕ್ರೀಯ ಬ್ರಹ್ಮನೆನುತ ಹರಿಯತಾ
ನೆನಿಪ ದುರ್ಮತವನ್ನು ಘನವಾಗಿ ಪ್ರಬಲಿಸಿ
ದನುಜಾರಿಯಾಜ್ಞಾದಿ ಮುನಿಮಧ್ಯ ಸತಿಯಲ್ಲಿ
ಮುನಿಮಧ್ವನೆಂದೆನಿಸಿ ಜನಿಸಿ ಕುಮತವನು
ಶಾಸ್ತ್ರದಿ ಖಂಡಿಸಿ ಹರಿಯೆ ಪರನೆನಿಪ ಮತವಸ್ಥಾಪಿಸಿ
ಮೆರೆದೆ ಈ ಧಾರುಣಿಯೊಳು ವರದೇಶ ವಿಠಲನ ವಲಿಸೆ ೩

## ೧೬

ಭಾರತೀರಮಣನೆ ಸಾರಿದೆನು ಚರಣ
ತೋರು ಮನ್ಮನದಲಿ ಭೂರಿಸುಕರುಣ ಪ

ನಾರಾಯಣಾಂಕದಿ ಕುಳಿತಿಹ ಶೂರಾ
ಸೂರಿಸ್ತೋಮತೇಜೊರಂಜಿಪುದಾರಾ
ಮಾರಮಣನಾಜ್ಞಾದಿಂ ಬ್ರಹ್ಮಾಂಡಧಾರಾ
ಧಾರಕಾನಂದ ವಿಠಲನ್ನಚಾರಾ ೧

ದುರುಳರಕ್ಕಸತತಿಯ ದ್ವಿರದ ವಿದಾರ
ಹರಿರಘುವರನಪಾದ ಶರಧಿಜ ಚಕೋರ

ಹರಮುಖ್ಯ ಸುರಸರಸಿರುಹಕೆ ದಿನಕರ
ವರದೇಶವಿಠ್ಠಲನ ಸ್ಮರಿಪ ಸಮೀರ ೨

ಕುರುಕುಲ ಸಂಜಾತ ದ್ರುಪದಜಾನಾಥ
ದುರಿಯೋಧನನ ಊರುತರಿದ ನಿರ್ಭೀತ
ಪರಮ ಭಗವದ್ಭಕ್ತವೃಂದ ಸುಪ್ರೀತ
ವರದೇಂದ್ರ ವಿಠ್ಠಲನ ಪ್ರೀಯ ಸುತನೀತ ೩

ಅದ್ವೈತ ಮತತಿಮಿರ ಧ್ವಂಸನ ಧಿರ
ಶುದ್ಧವೈಷ್ಣವ ಮತಸ್ಥಾಪನಾಪಾರ
ಸದ್ವಾಕ್ಯದಿಂದಲಿ ಹರಿಪಾರವಾರ
ಮಧ್ವಸುಂದರ ವಿಠ್ಠಲನ ಸುಕುಮಾರ ೪

ವರದೇಶವಿಠ್ಠಲ ವರದೇಂದ್ರ ವಿಠಲ ಸುಂ –
ದರ ವಿಠಲ ಆನಂದ ವಿಠ್ಠಲನ್ನ
ಪರಿಪರಿ ವಿಧದಲ್ಲಿ ಕರುಣವ ಪಡೆದಿಹ
ಗುರುಜಗನ್ನಾಥ ವಿಠ್ಠಲನ ನಿಜದೂತ ೫

## ೧೭

ಭಾರತೀಶನೆ ಉದ್ಧರಿಸುವದೆನ್ನ ಪ

ಭಾರತೀಶ ಕಂಸಾರಿ ಪ್ರೀಯ ಸಂ –
ಸಾರ ಬಂಧನ ನಿವಾರಿಸೊ ಜವದಿ ಅ.ಪ

ಅಂಜನಾದೇವಿಯ ಸಂಜಾತನೆ ಭವ
ಭಂಜನ ಹರಿಪದಕಂಜಾರಾಧಕ ೧

ಮಾರುತಿ ನಿನ್ನ ಸುಕೀರುತಿ ತ್ರಿಜಗದಿ
ಸಾರುತಲಿದೆಯುದ್ಧಾರಕನೆಂದು ೨

ಹರಿಕುಲಜಾತನೆ ಹರಿಸಂಪ್ರೀತನೆ
ಹರಿಹಯ ವಿನುತನೆ ಹರಿದುರಿತವನು ೩

ಕಾಮಿತ ಫಲದ ನಿಸ್ಸೀಮ ಪರಾಕ್ರಮಿ
ಪ್ರೇಮವ ಕೊಡು ಶ್ರೀ ರಾಮನ ಪದದಿ ೪

ಕುಂತಿ ಕುಮಾರಾದ್ಯಂತ ವಿದೂರನೆ
ಅಂತರಂಗದಿ ಹರಿಚಿಂತನೆಯಕೊಡು ೫

ಧರ್ಮಾನುಜಸದ್ಧರ್ಮ ಸ್ಥಾಪಕನೆ
ಕಿರ್ಮೀರಾಂತಕ ನಿರ್ಮಲ ಚರಿತ ೬

ಭೀಮನೆ ಸುದ್ಗುಣ ಧಾಮನೆ ಕುರುಕುಲ
ಸೋಮನೆ ಸುರಮುನಿಸ್ತೋಮನಮಿತನೆ ೭

ಅರ್ಜುನಾಗ್ರಜನೆ ದುರ್ಜನ ಶಿಕ್ಷಕ
ಧೂರ್ಜಟಿವಂದ್ಯನೆ ಮೂರ್ಜಗ ಕರ್ತಾ ೮

ಆರ್ಯನೆ ಕೃತ ಸತ್ಕಾರ್ಯನೆ ಜಗದೊಳು
ನಾರ್ಯಕುರುಪನೂರು ಶೌರ್ಯದಿ ತರಿದ ೯

ಕರಿವರದನ ಚರಣಾರವಿಂದ ಯುಗ
ನಿರುತ ಸ್ಮರಿಪತೆರ ಕರುಣಿಸು ಭರದಿ ೧೦

ದುಷ್ಟಧ್ವಂಸಕನೆ ಶಿಷ್ಟಪಾಲಶ್ರೀ -
ಕೃಷ್ಣನಂಘ್ರಿಯಲಿ ನಿಷ್ಠೆಯ ತೋರೋ ೧೧

ಮಧ್ಯಗೇಹ ಸುತ ಸದ್ವೈಷ್ಣವ ಯತಿ
ಅದ್ವೈತಕರಿ ಹರಿ ಸಿದ್ಧಾಂತ ಕರ್ತಾ ೧೨

ಮಿಥ್ಯಾವಾದಿಬಾಯಿ ಎತ್ತದಂತ ಶ್ರು -
ತ್ಯರ್ಥವ ಪೇಳ್ದ ಸಮರ್ಥನಹುದು ನೀ ೧೩

ಹರಿಸರ್ವೋತ್ತಮ ಸಿರಿಯು ಅಕ್ಷರಳು
ಸುರರೊಳು ನೀನೆ ಪಿರಿಯನು ಸತ್ಯ ೧೪

ಸದಮಲಚರಿತನೆ ಹೃದಯದ ತಿಮಿರವ
ವದೆದು ತರಿವುದಕೆ ಉದಿತ ಭಾಸ್ಕರ ೧೫

ಮೂರು ರೂಪಾತ್ಮಕ ಸಾರಿದೆಯನ್ನಯ್ಯ
ಪಾರದುರಿತ ಪರಿಹಾರವ ಗೈಸೊ ೧೬

ಹೇಸಿಕೆ ಭವದಲಿ ನಾಶಿಲುಕಿಹೆ ವರ –
ದೇಶ ವಿಠಲನ ಸೋಶಿಲಿ ತೋರೊ ೧೭

## ಭಾರತೀ ದೇವಿ

## ೧೮

ಪಾಲಿಸೆನ್ನನು ಪವಮಾನನ ರಾಣಿ
ಪಾಲಿಸೆನ್ನ ಸುಗುಣಾಲಯ ಶ್ರೀಹರಿ
ಲೀಲೆ ತಿಳಿಸಿ ಭವಜಾಲವ ಹರಿಸೆ ಪ

ಮಾತರಿಶ್ವ ಸತಿ, ಪ್ರೀತಿಲಿ ಹರಿಪದ
ದೂತನೆನಿಸಿ, ಅನಾಥನ ಪೊರಿಯೆ ೧

ವಿದ್ಯುನ್ನಾಮಕೆ ವಿದ್ವಜ್ಜನಪಾ –
ದದ್ವಯ ಸೇವಿತ ಬುದ್ಧಿಯ ನೀಡೆ ೨

ಲಿಂಗನಿವಾಸಿ ವಿಲಿಂಗಗೈಸಿ ಯನ್ನ
ರಂಗನ ಪದದಲಿ ಭೃಂಗನ ಮಾಡಿ ೩

ಜನನಿಯೆ ನಿನ್ನಯ ತನಯಗೆ ಜ್ಞಾನದ
ಸ್ತನವನಿತ್ತು ಪೊರೆ ಹನುಮನರಸಿಯೆ ೪

ಶರಣಾಗತಜನ ಪೊರೆಯುವ ಕರುಣಿಯ
ವರದೇಶ ವಿಠಲನ ಚರಣವ ತೋರೆ ೫

## ರುದ್ರದೇವರು

### ೧೯

ಗಿರಿಜಾಪತಿ ತವ ಚರಣಕೆ ಎರಗುವೆ
ಕರುಣದಿಂದೆನ್ನನು ಪೊರೆ ಮಹಾದೇವ ಪ

ನಂದಿವಾಹನ ಸುರವೃಂದ ಸುಪೂಜಿತ
ಇಂದ್ರವಿನುತ ಭಕ್ತಾನಂದದಾಯಕನೇ ೧

ರುಂಡ ಮಾಲಾಧರ ಶುಂಡಾಲ ಮದಹರ
ಚಂಡವಿಕ್ರಮ ಮೃಕಂಡಜ ವರದ ೨

ಭುಜಗ ವಿಭೂಷ ವಿಜಯ ಸುಪೋಷ
ಅಜಿನಾಂಬರಧರ ತ್ರಿಜಗವಂದಿತನೆ ೩

ಗರಕಂಧರ ಹರ ಸುರಗಂಗಾಧರ
ಸ್ಮರಸಂಹರ ನಿಜ ಶರಣರಪಾಲ ೪

ವರದೇಶ ವಿಠಲನನಿರುತದಿ ಸ್ಮರಿಸುವ
ಕರುಣಾಕರಭವಹರ ಶಂಕರ ಶಿವ ೫

### ೨೦

ಶಂಭೋಶಿವಹರ ತ್ರಿಯಂಬಕ ಶ್ರೀಜಗ –
ದಂಬಾರಮಣ ಪರಿಪಾಲಯಾ ಪ

ಅಜಿನಾಂಬರಧರ ಭಜಿಪರಾರ್ತಿಹರ
ತ್ರಿಜಗಪಾವನ ಗಂಗಾಧರ ೧

ನಂದಿವಾಹನ ಸುರವೃಂದ ಸುಪೂಜಿತ
ಇಂದ್ರ ವಂದಿತ ಗರಕಂಧರ ೨

ರುಂಡಮಾಲಧರ ಶುಂಡಾಲಮದಹರ
ಚಂಡವಿಕ್ರಮ ಉಗ್ರೇಶ್ವರ ೩

ದಕ್ಷಾಧ್ವರ ಹರದುಷ್ಟಶಿಕ್ಷಕ ವಿರೂ –
ಪಾಕ್ಷನೆ ವೈರಾಗ್ಯನಿಧೆ ೪

ವಾಮದೇವನೆ ಭಕ್ತಾಕಾಮಿತ ಫಲದನೆ
ಕಾಮಸಂಹರ ಕರುಣಾಕರ ೫

ಮೃತ್ಯುಂಜಯನೆ ಯನ್ನಪಮೃತ್ಯುಹಾರಕಹರಿ
ಭಕ್ತಾಗ್ರೇಸರ ಶಿವಶಂಕರ ೬

ರಾಮನಾಮಲೋಲ ತಾಮಸಖಳಕಾಲ
ಧಿಮಂತಜನ ಪರಿಪಾಲಕ ೭

ಗಿರಿಜಾರಮಣ ನಿನ್ನ ಗುರುವೆಂದು ಮೊರೆಹೊಕ್ಕೆ
ಹರಿಭಕ್ತಿಯಲ್ಲಿ ಮನನಿಲ್ಲಿಸೋ ೮

ನಂಬಿದೆ ನಿನ್ನ ಪಾದಾಂಬುಜ ಯುಗಳ ಹೇ
ರಂಭಜನಕ ಪೊರಿಯನ್ನನು ೯

ರಜತಾಚಲನಿವಾಸ ರಜನಿಚರ ವಿನಾಶ
ಅಜನಸುತನೆ ದಿಗಂಬರ ೧೦

ಸರ್ವಶ್ರೀ ವರದೇಶವಿಠಲನ ಸಖ ಮು –
ಪ್ಪುರಹರ ಶ್ರೀ ಮಹಾದೇವ ೧೧

## ಯತಿಗಳು

### ೨೧

ಅಂದಣೇರಿದ ವರದೇಂದ್ರ ಮುನಿಪರ
ನಿಂದು ಪಾಡುವರಘವೃಂದ ತರಿವರ ಪ

ಅಂದದಿ ಭೂಸುರ ಸಂದಣಿ ಮಧ್ಯದಿ
ಚಂದದಿ ಬಹು ಕರ್ಮಂದಿಗಳರಸ ಅ.ಪ

ಶ್ರೀ ಮಧ್ವಮತಾಂಬುಧಿ ಸೋಮ ನಿಷ್ಕಾಮ
ತಾಮಸಮತಕಂಜಸ್ತೋಮ ನಿಧೂಮ
ಆ ಮಹಾಭಕ್ತ ಕುಮುದ ಪ್ರೇಮ ಸತ್ಕಾಮ
ಕಾಮಿತ ಕಲ್ಪದ್ರುಮಗುರುಸಾರ್ವಭೌಮ
ರಾಮ ಪದಾಂಬುಜ ಪ್ರೇಮದಿ ಭಜಿಸುವ
ಭೂಮಿಸುರರ ಹೃತ್ತಾಮಸಹಾರಾ ೧

ಉದಿತಾರ್ಕ ಸಂಕಾಶ ವಿಧಿಕುಲಾಧೀಶ
ಮುದದಿ ಭಜಿಸುವ ಭಕ್ತಹೃದಯನಿವಾಸ
ಸದಮಲಭಕ್ತಜ್ಞಾನ ಉದಜವಿಕಾಸ
ವಿಧಿಕುಲದ್ವೇಷಿ ಕುಮುದ ತತಿನಾಶ
ವಿಧವಿಧದಲಿ ಹರಿಪದ ಭಜಿಸುವ ಮತಿ
ವದಗಿ ಪಾಲಿಸು ಹೃದಜನಸದಯಾ ೨

ಕರುಣಾನಿಧಿಯೆ ನಿನ್ನ ಚರಣ ಸೇವಕರ
ಜರಮರಣಾದಿ ದೋಷತ್ವರಿತ ಪರಿಹಾರ
ಮರುತಮತದ ತತ್ವ ಶರಧಿ ವಿಹಾರ
ನಿರುತದಿ ಹರಿಯನಾಮ ಸ್ಮರಿಸುವಧೀರ
ವರದೇಶ ವಿಠಲನ ಕರುಣದಿ ಧರೆಯೊಳು
ಮೆರೆಯುವ ಯತಿಕುಲವರಿಯ ಸುಚರಿಯಾ ೩

## ೨೨

ಇಂದು ನೋಡಿದೆ, ಸುಶೀಲೇಂದ್ರ ಗುರುಗಳ
ಕುಂದಣದ ಶಿಖರ ಮೌಕ್ತಿಕದಿಂದ ವಿರಾಜಿಸುವ
ರಜತ ಅಂದಣವನೇರಿ ಸಂಭ್ರಮದಿಂದ
ಮೆರೆದು ಬರುವ ಗುರುಗಳ ಪ

ಧ್ವಜ ಪತಾಕೆಶ್ವೇತ ಛತ್ರ
ರಜತವರ್ಣ ಚವರ ಚಾಮರ
ಭಜಿಪ ಭಟರ ಸಂದಣಿಮಧ್ಯ
ರಜನಿ ಪತಿಯ ತೆರದಿ ಶೊಭಿಪರಿಂದು ೧

ಭೇರಿ ಕಹಳೆ ವಾದ್ಯನೇಕ
ಚಾರುತರ ಶೃಂಗಾರವಾದ
ವಾರಣಗಳು ಎಡಬಲದಲಿ
ಸಾರಿಬರುವ ಸಂಭ್ರಮವನು ೨

ಎಲ್ಲಿನೋಡೆ ಪಾಠಪ್ರವಚ –
ನೆಲ್ಲಿ ನೋಡೆ ವೇದಶಾಸ್ತ್ರ
ಎಲ್ಲಿ ನೋಡಲಲ್ಲಿ ಲಕುಮಿ
ನಲ್ಲನ ಸತ್ಕಥಾಲಾಪವಿಂದುನೋಡಿದೆ ೩

ಆ ಮಹಾಸುಶೋಭಿತಮಾದ
ಹೇಮಮಂಟಪ ಮಧ್ಯಮೂಲ
ರಾಮನಾರ್ಚನೆಗೈವ ವೃಂದ
ಪ್ರೇಮದಿ ನೋಡಿ ಧನ್ಯನಾದೆ ೪

ಈ ಮಹಾಗುರುವರ್ಯರ ಪದ
ತಾಮರಸವ ಪೊಂದಿದ ಭಕ್ತರ
ನೇಮದಿಂ ವರದೇಶ ವಿಠಲ
ಕಾಮಿತಾರ್ಥಗರೆವ ಸತ್ಯ ೫

## ೨೩

ನಮೋ ನಮೋ ಶ್ರೀ ರಘುದಾಂತ ತೀರ್ಥ
ಮುನಿಯ ಮತಮಹಮಸಿರಿಯೆ
ಶಮದಮಾದಿಗುಣ ಪೂರ್ಣರಾಮಪದ
ಭ್ರಮರನೆನಿಪಗುರುವೆ ಪ

ಮಾರಮಣನಪದ ಸಾರಸಷಟ್ಪದ ಸೂರಿಸುಗುಣ ಭರಿತ
ಮಾರುತಮತ ಪಯವಾರಿಧಿ ಶಶಿ ಗಂಭೀರ ವಿಮಲ ಚರಿತ
ಆರಾಧಿಪರಘದೂರಗೈಸುತಿಹ ನೀರಜ ಶರವಿಜಿತ
ಶ್ರೀ ರಘುಪತಿ ತೀರ್ಥಾರ್ಯರ ಕರಸರಸೀರುಹಸಂಜನಿತ ೧

ಆರ್ತಬಂಧು ಸತ್ಕೀರ್ತಿವಂತ ಸರ್ವೋತ್ತಮ ಹರಿಯನಿಪ
ಸೂತ್ರನಾಮಕ ಶಿಖಿನೇತ್ರ ಪ್ರಮುಖ ದೇವೋತ್ತಮನೆಂದೆನಿಪ
ಧಾತ್ರಿಯೊಳಗೆ ಸುಖತೀರ್ಥರೆ ಗುರುವೆಂದು
ಸ್ತೋತ್ರಗೈಯ್ಯುತಿಪ್ಪ
ಗಾತ್ರ ಮರೆದು ಶ್ರೀ ಪಾರ್ಥಸಖನಗುಣಕೀರ್ತಿಸಿ ಸುರಿಪ ೨

ಪರಮತುರಗನಭಚರ ಪತಿಯೆನಿಸುವ ಕರುಣಿ ಕೋಪರಹಿತ
ಶರಣಾಗತಜನದುರಿತರಾಶಿಜಲ ಶರಧಿ ಕುಂಭಜಾತ
ಪರಮ ಭಾಗವತ ಸಿರಿಮುಖ ಕುಮುದಕೆ ಶರನಿಧಿ ಸಂಜಾತ
ಪರತತ್ವದಿ ಪರತರನೆನಿಸುವ ಮುನಿವರ ನಿರ್ಗತದುರಿತ ೩

ಅನಘನಿನ್ನಪದವನಜಜದರಜವನು ವಿನಯದಿರಿಸಿ ಶಿರದಿ
ಜನುಮಜನುಮದಘತೃಣರಾಶಿಯ ಮಧ್ಯಗಳ ಪೊಕ್ಕತೆರದಿ
ಕ್ಷಣದಲಿ ದಹಿಸದೆ ಸನುಮತೆಂದೆನಲು ಅನುಗೃಹಿಸಿ ತ್ವರದಿ
ಸನುಮಾರ್ಗಪ್ರದ, ದರುಶನದು ಪ್ರಕೃತಿನೆನೆವೆನು ಇಹಪರದಿ ೪

ಮಾಮನೋರಮಪದ ತಾಮರಸಂಗಳನೇಮದಿ ಪೂಜಿಪನೆ
ತಾಮಸಖಳಮದ ಸಾಮಜಮೃಗ ಪತಿ ಧೀಮಂತಪ್ರಿಯನೆ
ಈ ಮಹಿಯೊಳುನಿಮ್ಮ ಪಾಮರ ನಾ
ನಿಮ್ಮ ಪ್ರೇಮದಿನಂಬಿಹೆನೆ
ರಾಮನಾಮರತಿ ನೇಮದಿಕೊಡು ವರದೇಶ ವಿಠಲಪ್ರೀಯನೆ ೫

## ೨೪

ಯತಿಕುಲಮುಕುಟ ಶ್ರೀ ಜಯತೀರ್ಥ
ಸದ್ಗುಣಗಣ ಭರಿತ
ಅತಿಸದ್ಭಕುತಿಲಿ ನುತಿಪಜನರ ಸಂ –
ತತ ಪಾಲಿಸುತಲಿ ಪೃಥಿವಿಲಿ ಮೆರೆವ ಪ

ಶ್ರೀ ಮಧ್ವಮತ ವಾರಿಧಿನಿಜಸೋಮ
ಅಗಣಿತಸನ್ಮಹಿಮ ಆಮಹಾಭಕ್ತಾರ್ತಿಹ ನಿಷ್ಕಾಮ
ಮುನಿಸಾರ್ವಭೌಮ ರಾಮಪದಾರ್ಚಕ
ಈ ಮಹಿಸುರರನು
ಪ್ರೇಮದಿ ಪಾಲಿಪ ಕಾಮಿತ ಫಲದ ೧

ಮಧ್ವಮುನಿಗಳಗ್ರಂಥಕೆ ವ್ಯಾಖ್ಯಾನ
ರಚಿಸಿದ ಸುಜ್ಞಾನ ವಿದ್ಯಾರಣ್ಯನ ಸದ್ವಾದದಿ ನಿಧನ
ಗೈಸಿದಗುಣಪೂರ್ಣ ಅದ್ವೈತಾಟವಿ ದಗ್ಧಕೃತಾನಲ
ಸದ್ವೈಷ್ಣವ ಹೃತ್ಪದ್ಮಸುನಿಲಯ ೨

ಲಲಿತಾ ಮಂಗಳವೇಡಿಪ ರಘುನಾಥ
ವನಿತಾಸಂಜಾತ ಮಳಖೇಡ ಕಾಗಿನಿ ತೀರನಿವಾಸ
ಮಾಡಿಹ ಮೌನೀಶನಲವರದೇಶ ವಿಠಲನ ವಲಿಮೆಯಲಿ
ಇಳಿಯೊಳು ಬೋಧಿಪ ಅಲವ ಬೋಧಾಪ್ತ ೩

## ೨೫

ಯತಿಗಳ ಸತತ ಸಂಸ್ತುತಿಸುವೆ
ಅತಿತ್ವರಿತದಲಿ ದುರಿತಗಳ ತರಿವೆ ಪ

ಮೋದತೀರ್ಥಾದಿ ಸುಬೋಧೇಂದ್ರ ಪರಿಯಂತ
ಮೋದದಿಂದವರ ಶ್ರೀಪಾದಕ್ಕೆ ನಮಿಪೆ ೧

ಅಜನಪಿತನಪಾದ ಭಜಿಸುವ ಭಕುತ
ನಿಜವಾಗಿ ಪಾಲಿಪ ಸುಜನೇಂದ್ರ ತೀರ್ಥ ೨

ಆನತಜನ ಪಾಪಕಾನನದಹಿಪ ಕೃ
ಶಾನನಂತಿಪ್ಪ ಸುಜ್ಞಾನೇಂದ್ರ ತೀರ್ಥ ೩

ದುರ್ಮತಧ್ವಂಸ ಸದ್ಧರ್ಮ ಸಂಸ್ಥಾಪಕ
ಕರ್ಮಂದಿವರ ಸುಧರ್ಮೇಂದ್ರ ತೀರ್ಥ ೪

ಅಗಣಿತಮಹಿಮ ಮೂಜಗದೊಳು ಪ್ರಖ್ಯಾತ
ನಿಗಮಾಗಮಜ್ಞ ಶ್ರೀ ಸುಗುಣೇಂದ್ರ ತೀರ್ಥ ೫

ಸಸುಪ್ರಸಿದ್ಧ ಮುನಿ ವಿಪ್ರಸಮೂಹವ
ಕ್ಷಿಪ್ರದಿಪಾಲಿಪ ಸುಪ್ರಜ್ಞೇಂದ್ರಾಖ್ಯ ೬

ದೋಷವರ್ಜಿತಹರಿದಾಸ ಜನರಪ್ರಿಯ
ಶ್ರೀಶ ಪದಾರ್ಚಕ ಸುಕೃತೀಂದ್ರ ೭

ಮೂಲೋಕ ವಿಖ್ಯಾತ ಶ್ರೀಲೋಲನಂಘ್ರಿ ಕೀ –
ಲಾಲಜಮಧುಪ ಸುಶಿಲೇಂದ್ರ ಮುನಿಪ ೮

ವರದೇಶ ವಿಠಲನ ಪರಿಪರಿ ಪೂಜಿಪ
ಪರಮಹಂಸರ ಪಾದಕ್ಕೆರಗಿ ಬಿನ್ನೈಪೆ · ೯

೨೬

ವಿನಯಾದಿಂದಲಿ ನಮಿಸುವೆನಾ ವೃಂದಾ
ವನದಿ ರಾಜಿಪ ರಾಘವೇಂದ್ರ ಗುರವಿನ ಪ

ದುರಿತವಾರಣ ಪಂಚಾನನನ ನರ –
ಹರಿರೂಪಸ್ತಂಭದಿ ಪ್ರಕಟಗೈಸಿದನ
ಹರಿಭಕ್ತಾಗ್ರಣಿಯೆಂದೆನಿಪನ ನಾರ –
ದರ ಉಪದೇಶಗರ್ಭದಿ ಕೈಕೊಂಡಿಹನ ೧

ಸಿರಿವ್ಯಾಸತೀರ್ಥರೆನಿಪನ ಪುರಂ –
ದರ ದಾಸಾರ್ಯರಿಗು ಪದೇಶ ಗೈದವನ
ವರಚಂದ್ರಿಕಾ ರಚಿಸಿದನ ದುಷ್ಟ
ಪರಮಾದ್ರಿಗಳಿಗೆ ಕುಲಿಶನೆನಿಪನ ೨

ಶ್ರೀ ಸುಧೀಂದ್ರ ಕರಾಬ್ಜಜನ ದಿವ್ಯ
ಭಾಸುರ ಪರಿಮಳ ಗ್ರಂಥ ಕರ್ತರನ –
ಮೀಸಲ ಮನದಿ ಭಜಿಪರನ ದೋಷ –
ನಾಶನ ಗೈಸಿ ಪೋಷಿಸುವ ಶಕ್ತರನ ೩

ವರಮಂತ್ರ ಸದ್ಮನಿಲಯನ ಶ್ರೀ –
ಗುರು ಮಧ್ವಮತ ದುರಂಧರರದೆನಿಸುವನ
ಹರಿಪ್ರೀತಿ ಪೂರ್ಣಪಾತ್ರರನ
ಈ ಧರಿಯೊಳು ಬಹುಪರಿ ಮೆರೆವ ಮುನಿಪನ ೪

ತುಂಗಭದ್ರಾತೀರವಾಸನ ಶುಭ
ಮಂಗಲಚರಿತ ಕಮಂಡಲಧರನ
ರಂಗವರದೇಶ ವಿಠಲನ ಪದ
ಭೃಂಗ ಯತಿಕುಲ ಕಂಜಾರ್ಕ ಸನ್ನಿಭನ ೫

## ೨೭

ಶ್ರೀ ರಘುಕಾಂತ ತೀರ್ಥರ ದಿವ್ಯ
ಪದಕಂಜಸಾರಿಭಜಿಪ ಭಕ್ತರ
ಘೋರ ಬಡಿಸುತಿಪ್ಪ ಪಾವಳಿಗನೆಲ್ಲ
ದೂರವೋಡಿಸುವ ಶಕ್ತ ವಿರಕ್ತ ಪ

ದಿನಕರ ಕುಲಜಾತ ವನಜಾರಾಧ್ಯಸು –
ಮನಸವ್ರಾತ ಸನ್ನುತ
ಇನಕೋಟಿಪ್ರಭೆಗಾತ್ರ ಮನಸಿಜ ಪಿತಸ –
ನ್ಮುನಿಗಣನುತ ರಾಮಚಂದ್ರ ಪಾದಭೃಂಗ ೧

ಯತಿಕುಲ ರತುನ ಭಕುತಸುರತರುವೆ ಸ –
ದ್ಗತಿ ದಾತಾ ಜಿತಮದನ
ಪತಿತಪಾವನ ಮುನಿ ಯತಿ ರಘುದಾಂತತೀ
ರಥ ಕರಸನ್ನುತ ಪಾದ ಪಂಕೇಜ ೨

ಕಾಮಿತಫಲದ ನಿಸ್ಸೀಮ ಮಹಿಮ ಭಕ್ತ
ಪ್ರೇಮ ಪಾವನ ಚರಿತ
ಸಾಮಜವರದ ಶ್ರೀ ವರದೇಶವಿಠಲನ
ಪ್ರೇಮ ಪಾತ್ರ ಮಹಾ ಮಹಿಮ ನಿಷ್ಕಾಮ ೩

## ೨೮

ಶ್ರೀ ರಘುದಾಂತರ ಚಾರುಚರಣಗಳು
ಸೇವಿಪರಘಗಳನು
ದೊರಗೈಸಿ ಕೃತಕೃತ್ಯನಾದೆನಾನು
ಭವಭಯವೆನಗೇನು ಪ

ಹೇಸಿಭವದಿ ಸುಖಲೇಶಕಾಣದಿರಲು
ಬೇಸರವಾಗಲು ದೇಶ ದೇಶದೋಳು ಬರುಪರಿಯರಿತಿರುಗಿ
ಮನದಲಿ ನಾ ಮರುಗಿ ಏಸುಯಾತ್ರೆಗಳ
ಚರಿಸಿ ತೋಷಬಡದೆ
ಸಂಚರಿಸುತ ನಡೆದೆ ಶ್ರೀಶನನುಗ್ರಹದಿವರಡಿಗಳ
ಪಡೆದೆ ಭವ ಬಂಧ ಕಡಿದೆ ೧

ಹೀನಜನರ ಸಂಸರ್ಗದೋಷವನು ಕಲಿಮಲ ಕಲುಷವನು
ಕಾನನ ತೃಣವನು ಅನಳದಹಿಸುವಂತೆ
ದಹಿಪವು ಬಿಡು ಭ್ರಾಂತಿ
ನಾನಾತೀರ್ಥ ಕ್ಷೇತ್ರ ಯಾತ್ರೆಫಲವು ಒದಗಿಸಿಕೊಡುತಿಹವು
ಜ್ಞಾನಭಕುತಿವೈರಾಗ್ಯ ಕೊಡುತಲಿಹವು
ಗುರುಗಳ ಪದಯುಗವು ೨

ಗುರುಪದರಜದ ಮಹಿಮೆಯ ಪರಿಮಿತವು ವರ್ಣಿಸಲಸದಳವು
ಶಿರದಿ ಧರಿಸೆಸಾರಿಸಕುಲಪಾವನವು ಎನಿಪುದು ನಿಶ್ಚಯವು
ಶರೀರಕೆ ಲೇಪಿಸೆ ಸಕಲವ್ಯಾಧಿ ಭಯವು ಪರಿಹರವಾಗುವವು
ನಿರುತಸೇವಿಸೆ ಮುಕುತಿಯೆ ಕರಗತವು ಅಹುದು ಶಾಶ್ವತವು ೩

ಗುರುಪದಪೊಂದದೆ ಹರಿ ಕರುಣಿಸನೆಂದು
ತಿಳಿ ಮನಸಿಗೆ ತಂದು
ಹರಿಮುನಿದರು ಗರುಪೊರೆಯಲು ಸಮರ್ಥ
ಈ ನುಡಿ ಸಿದ್ಧಾಂತ

ಹರಿಯಂದದಿ ಗುರುಶರಣರ ಎಡೆಬಿಡದೆ
ಕರುಣಿಪ ಕೈಬಿಡದೆ
ಗುರುಚರಣಾಶ್ರಯಿಸಲು ಹರಿವಲಿಯುವನು
ಮನದಲಿ ಪೊಳೆಯುವನು ೪

ನೇಮದಿ ಗುರುಪದ ಭಜಿಸಲು ಸಂಪದವು
ಸಂತತ ಲಭಿಸುವವು
ರಾಮನ ಪದಯುಗ್ಮಗಳಲಿ ಸದ್ರತಿಯು
ಪರಿಶುದ್ಧ ಭಕುತಿಯು
ತಾ ಮುದದಲಿ ವರದೇಶವಿಠಲಕೊಡುವ
ಬಿಡದಿರು ಸಂಶಯವ
ಪಾಮರ ನರಗುರು ಪದ ನಂಬದೆ ಕೆಡುವ
ಬಹುದುಃಖವ ಬಡುವ ೫

## ೨೯

ಶ್ರೀ ವರದೇಂದ್ರನಿಗೆ ನಮೋ ನಮೋ ಕೋವಿದ
ವಂದ್ಯಗೆ ನಮೋ ನಮೋ
ಸೇವಿಪ ಜನರ ಕೃಪಾವಲೋಕನದಿ ಕಾವಕರುಣಿಗೆ
ನಮೋ ನಮೋ ಪ

ದೇಶಿಕವರ್ಯಗೆ ನಮೋ ನಮೋ
ದೋಷವಿದೂರಿಗೆ ನಮೋ ನಮೋ
ಕಾಷಾಯ ಕಮಂಡಲ ಧಾರಗೆ ನಮೋ
ಭಾಸುರ ಚರಿತಗೆ ನಮೋ ನಮೋ ೧

ವಸುಧೀಂದ್ರರ ಕರಜಾತನಿಗೆ
ವಸುದಿಜೀವರ ಸಂಪ್ರೀತನಿಗೆ
ದಶದಿಶೆಯೊಳು ವಿಖ್ಯಾತನಿಗೆ
ಕಸವರಭಾಂಗ ಪ್ರಖ್ಯಾತನಿಗೆ ೨

ಮರುತ ಮತಾಂಬುಧಿ ಸೋಮನಿಗೆ
ಪರಮತ ತಿಮಿರ ತರಣಿ ನಿಭಗೆ
ವರದೇಶ ವಿಠಲನ ಸ್ಮರಿಸುತ ಲಿಂಗಸು -
ಗುರುಸುಕ್ಷೇತ್ರ ನಿವಾಸನಿಗೆ ೩

## ದಾಸರು

### ೩೦

ಗುರು ಪ್ರಾಣೇಶದಾಸರಾಯಾ
ತರುಳನ ಪರಿಪಾಲಿಸು ಜೀಯಾ ಪ

ಶ್ರೀ ಪತಿ ಸದ್ವಂಶೋದ್ಭವನೆ ವರಕವಿ ಪ್ರಾಣೇಶರ ಸುತನೆ
ಕೋಪವಿತಾಪಮೋಹಕ ಜಿತನೆ ಶ್ರೀ ಕಮಲಾಪತಿ ಸೇವಕನೆ
ನೀ ಮಹಾತಾಪಸೋತ್ತ ಮನಾಗಿ
ಭವಜನಿ ತಾಪದಾದಿ ಸಂ -
ತಾಪ ಹರಿಸುತಲಿ ಶ್ರೀಪದ್ಮಜ ಮತ್ತಾಪಿನಾಕಿನುತ
ಶ್ರೀಪರಮಾತ್ಮದಾಸರಿಗೆ ಸದಾಪರೋಕ್ಷ ತೋರ್ದಾ ೧

ರತಿಪತಿ ಪಿತನನಾಮ ಸ್ಮರಣೆಯಲ್ಲಿ ನಲಿ -
ಯುತಸುಖಿಸುವಕರುಣಿ ಬಿಡದೆ ಸಂತತ ಹರಿಗುಣಗಾನಾ-
ದಲ್ಲಿ ಬಲುತರನಿರುತಿಹ ಜಾಣಾನಾನತಿ ಪತಿತನಾಗಿ ಇರುವೆ
ಅತಿ ದುಷ್ಕೃತಿಯನೆಸಗಿ ಸದ್ಗತಿಗೆ ದಾರಿಗಾಣೇ ಪತಿತಪಾವನ
ಶ್ರೀ ಪತಿಯ ತೋರೆನಗೆ ಅತುಲಸುಗುಣವೃಂದ
ನಿಮ್ಮನಾ ತುತಿಪೆನೆ ಮತಿಮಂದ ೨

ಕಾಮಕ್ರೋಧಗಳನು ಅಳಿದು ಬಲುತಾಮಸ
ಮತಗಳಹಳಿದು
ರೈಪತಿಭೀಮನ ಮತವಿಡಿದು ಶಿಷ್ಯರ
ಪ್ರೇಮದಿಂದ ಪೊರೆದು

ಬಹುಪರಿ ಈ ಮಹಿಯೊಳು ಮೆರೆದೆ
ಪಾತಕಿ ಪಾಮರನೆನ್ನಗೆ
ರಾಮ ಶ್ರೀವರದೇಶ ವಿಠಲನ ದೂತಮಹಾಮುನಿವರದೇಂ-
ದ್ರಾರ್ಯರ ಪದ, ಸುಮದಿರತಿಯನು
ಪ್ರೇಮದಿ ಕೊಡು ಮುದದಿ ೩

## ೩೧

ಗುರುವೆ ನೀನೊಲಿದು ಪಾಮರತರನಾದೆನ್ನ
ಹರುಷದಿ ಕರಪಿಡಿದು
ಪರಮ ಕರುಣದಿಂದ ಹರಿದಾಸ್ಯವಿತ್ತು ಉ -
ದ್ಧರಿಸಿದ ಉಪಕಾರ ಮರೆಯಲಾರೆನು ಎಂದೂ ಪ

ವರದೇಂದ್ರಾರ್ಯರು ನಮ್ಮ ಶರಣನು ಇವನಿಗೆ
ಕರುಣಿಸೆಂದಾಜ್ಞಾಪಿಸೆ
ತರುಳನ ಶಿರದಲಿ ಕರವಿಟ್ಟು ಕೃಪೆಯಿಂದ
ಗುರುತು ತೋರಿದಕೆ ನಾ ಪರಮಧನ್ಯನೆಂಬೆ ೧

ಮರುತಮತದತತ್ವ ಹರಿಕಥಾಮೃತಸಾರ
ವರರಹಸ್ಯಗಳೆಲ್ಲವ
ಸರಸವಾಗುತೆಂ ಅರಹುವೆವೆಂತೆಂಬ
ವರವಾಕ್ಯದಂತೆನ್ನ ಪರಿಪಾಲಿಪುದಯ್ಯ ೨

ಹರಿಮುನಿದರು ಗುರುಕರುಣಿಪನೊಮ್ಮಿಗೆ
ಗುರು ಮುನಿಯೆ ಹರಿ ಪೊರೆಯ
ಹರಿಯ ಕೃಪೆಗೆ ಮುಖ್ಯ ಗುರುವೆ ಕಾರಣನೆಂದು
ನೆರೆನಂಬಿರಲು ನೀನರಿಯದಂತಿಪ್ಪುದೆ ೩

—

ಮರುತ ಮತಾಬ್ಧಿಚಂದಿರ ಗುರುರಾಜರ
ವರಬಲದಿ ಮೆರೆವ
ಹರಿಭಕ್ತಾಗ್ರಣಿ ನಿಮ್ಮ ಚರಿತೆ ಬಣ್ಣಿಸುವೆನಾ
ಹರಿವಲಿಯುವ ತೆರ ಕರುಣಿಸೆನ್ನಯನಿಜ ೪

ಬರಿದೆ ಬಾಹ್ಯಾಚಾರ ವಿರಚಿಸದಲೆ ಮನದಿ
ಹರಿರೂಪ ಕಾಂಬತೆರದಿ
ವರದೇಶ ವಿಠಲನ ಸಿರದಾಸ್ಯತನವೆಂಬ
ಗುರುತುತೋರುವುದಯ್ಯ ಗುರುಜಗನ್ನಾಥಾರ್ಯ ೫

## ೩೨

ದಾಸರಾಯರ ದಿವ್ಯ ಚರಣ ಭಜಿಸಿ
ಶ್ರೀ ಪ್ರಾಣೇಶದಾಸಾರ್ಯ ಗುರುವರ್ಯಾ ಪ

ದಾಸರಾಯರ ಪಾದ ಭಜಿಪ ಸದ್ಭಕ್ತರ
ಏಸುಜನುಮದ ಪಾಪರಾಶಿ ಪರಿಹರವು
ಶ್ರೀಶನಲಿ ಸದ್ಭಕ್ತಿ ಲೇಸಾಗಿ ಪುಟ್ಟುವದು
ಲೇಶ ಸಂಶಯವಿಲ್ಲ ಆಲಸವು ಸಲ್ಲ ೧

ಮರುತಮತ ತತ್ವದ ತೆರೆಗಳಿಂ ಸೂಸುತ
ಧರಣಿಸುರರಿಗೆ ರಾಮನಾಮಾಮೃತ
ನಿರುತಭಜಿಸಲು ಜ್ಞಾನವೈರಾಗ್ಯ ತರುಮಣಿಯ
ಹರಿಭಕುತಿ ಧೇನುವನ್ನೀವ ಪಾಲ್ಗಡಲೆನಿಪ ೨

ಸುಜ್ಞಾನವೆಂಬಂಥ ಕಿರಣಗಳ ಪಸರಿಸುವ
ಅಜ್ಞಾನತಿಮಿರವನು ದೂರೋಡಿಪ
ಸೂಜ್ಞರೆಂಬುವ ತಾವರೆಗಳರಳಿಸುವಂಥ
ಅಜ್ಞಕುಮುದುಗಳ ಬಾಡಿಸುವ ಭಾಸ್ಕರನೆನಿಪ ೩

ನಮಿಪಜನ ಭವತಾಪಕಳೆದು ಸದ್ಭಕ್ತಿಯಂ –
ಬಮಿತ ಅಹ್ಲಾದವನು ಬೀರುವಂಥ
ಶಮದಮಾದಿಗಳ ಚಂದ್ರಿಕೆಯಿಂದ ಶೋಭಿಸುವ
ವಿಮಲ ಹರಿಜನ ಚಕೋರಕೆ ಚಂದ್ರನೆಂದೆನಿಪ ೪

ದಾಸಕುಲತಿಲಕ ಪ್ರಾಣೇಶರಾಯನ ಕವನ
ಶ್ರೀಶಕಥೆಗಳ ರಾಶಿಮೀಸಲಾಗಿರಲು
ಆ ಸುಭಕ್ತರಿಗೆ ಸಂತೋಷಗೊಳಿಸುಲು ಸರ್ವ
ದೇಶದಲಿ ಮೆರೆಸಿ ಸತ್ಕೀರ್ತಿಯನು ಪಡೆದಂಥ ೫

ಈ ಗುರುಗಳ ಪಾದಕೆರಗಿದ್ದ ಶಿರಧನ್ಯ
ಈ ಗುರುಗಳೀಕ್ಷಿಸಿದ ನೇತ್ರ ಧನ್ಯ
ಈ ಗುರುಗಳ ವಾಣಿ ಕೇಳಿದ್ದ ಕಿವಿ ಧನ್ಯ
ಈ ಗುರುಗಳನು ಮನದಿ ನೆನೆವನರ ಧನ್ಯ ೬

ರಾಗದ್ವೇಷಾದಿಗಳ ಗೆದ್ದು ಸದ್ಭಕ್ತಿಯಿಂ
ಶ್ರೀಗುರುಪ್ರಾಣೇಶ ಭಜಕರೆನಿಪ
ನಾಗಪರಿಯಂತ ವರದೇಶ ವಿಠಲನ ಪ್ರೀಯ
ಯೋಗಿ ವರದೇಂದ್ರ ಮುನಿಗಳ ಪಾದ ಭೃಂಗ ೭

## ೩೩

ದಾಸವರ್ಯರಿಗೊಂದಿಪೆ
ದಾಸವರ್ಯರಿಗೆರಗಿ ಜನ್ಮಾಂತರದ
ದೋಷವ ಪರಿಹರಿಸಿಕೊಂಬೆ ಪ

ನಾರದ ಮುನಿಹರಿಯಾಜ್ಞೆಯಿಂದಲೆ ಪುರಂ –
ದರ ದಾಸರಾಗಿಜನಿಸಿದ ದಾ –

ನಾರಾಯಣನ ದಿವ್ಯನಾಮದ ಮಹಿಮೆಯ
ಮೂರು ಲೋಕಗಳಲ್ಲಿ ಹರಹಿದ ೧

ಭಜಿಸುವ ಭಕುತರ ಅಗಣಿತದೋಷವ
ನಿಜವಾಗಿ ಪರಿಹರಿಸುವಂಥ ದಾಸ -
ಸುಜನ ಪೋಷಕ ದುಷ್ಟಕುಜನ ಕುಠಾರ ಶ್ರೀ
ವಿಜಯರಾಯರ ಪಾದಕ್ಕೆರಗುವೆ ೨

ಕೋಪರಹಿತಭಕ್ತ ಪಾಪವಿದೂರಕ
ಶ್ರೀಪತಿ ಪಾದಕಮಲ ಭೃಂಗ ದಾ -
ತಾಪ ಸೋತ್ತುಮಭವ ತಾಪನಿವಾರಕ
ಗೋಪಾಲದಾಸರಿಗೆರಗುವೆ ೩

ಧರಿಯಸುರರ ಉದ್ಧರಿಸಲೋಸುಗ ದಿವ್ಯ
ಹರಿಕಥಾಮೃತ ಸಾರಗ್ರಂಥವದಾ -
ವಿರಚಿಸುತಜ್ಞಾನಪರಿಹರಿಸಿದಂಥ
ಹರಿಭಕ್ತಾಗ್ರಣಿ ಶ್ರೀ ಜಗನ್ನಾಥ ೪

ಧರೆಯೊಳು ಹರಿಲೀಲಾಮೃತ ವೃಷ್ಟಿಗರೆಯಲು
ಪರಿಪರಿ ಕಥೆಗಳ ರಚಿಸಿದ ದಾ -
ವರದೇಂದ್ರ ಮುನಿಗಳ ಪಾದಸಾರಸಭೃಂಗ
ಪರನುಸುಚರಿತ ಶ್ರೀ ಪ್ರಾಣೇಶ ೫

ಹರಿಭಕ್ತಿ ಮಾರ್ಗವ ಪರಿಪರಿಶಿಷ್ಯರಿ
ಗರುಹಿ ಕರುಣದಿಂದುದ್ಧರಿಸಿದ ದಾ -
ಪರಮತತಿಮರಕ್ಕೆ ತರಣಿಸ್ವರೂಪ ಶ್ರೀ
ಗುರುಪ್ರಾಣೇಶಾರ್ಯರಿಗೆರಗುವೆ ೬

ಗುರುಪಾದ ಸೇವೆಯ ಪರಿಪರಿಗೈದು ಈ
ಧರಿಯೊಳು ಧನ್ಯರೆಂದೆನಿಸಿದ ದಾ -

ಹರಿದಾಸ ಕುಲರತ್ನ ಸರುವ ಸದ್ಗುಣ ಪೂರ್ಣ
ವರಶ್ರೀಪ್ರಾಣೇಶದಾಸಾರ್ಯ ೭

ಗುರುಪ್ರಾಣೇಶರ ಕರಸರಸಿಜ ಸಂಜಾತ
ಪರಮಭಾಗವತರೆನಿಸಿದ ದಾ
ಮರುತಮತದ ತತ್ವವರಿದಂಥ ಸುಖದ ಸುಂ –
ದರವಿಠಲ ಮೋದ ವಿಠಲರೆಂಬ ೮

ಭೂಮಿಯೋಳ್ ವರದೇಶ ವಿಠ್ಠಲನ ನಿಜಭಕ್ತ
ಸ್ತೋಮಕ್ಕೆ ಶಿರಬಾಗಿ ನಮಿಸುವೆ ದಾ
ಆ ಮಹಾತ್ಮರಪಾದರಜಾದೊಳೆನ್ನನು ದೇವ
ನೇಮದಿಂದಲಿ ಹೊರಳಾಡಿಸೊ ೯

## ೩೪

ದಾಸಾರ್ಯರ ಚರಣ ಕಮಲಕಾನಮಿಪೆ
ಶಿರಬಾಗಿ ಬಿನೈಪೆ ಏಸು ಜನ್ಮದ ದುಷ್ಕೃತ ಪರಿಹರಿಪೆ
ಕರುಣವನು ಪಡೆದು ಭೂಸುರಜನ್ಮವ ಸಾರ್ಥಕಗೊಳಿಪೆ
ಕೃತಕೃತ್ಯನೆಂದೆನಿಪೆ ದೋಷರಾಶಿಗಳ ನಾಶಗೈಸಿ ವಿ
ಶೇಷ ಮಹಿಮದಿಂಭೂಷಿತ ಜಗನ್ನಾಥ ಪ

ಪ್ರಥಮ ಗಾಂಗೇಯ ವಸನಸಂಜಾತ
ಪ್ರಲ್ಹಾದನಭ್ರಾತ ಮತಿಮಾನಸಹ್ಲಾದ ಸುನಾಮಕನೀತ
ನರಹರಿಸಂಪ್ರೀತ ದ್ವಿತಿಯ ಶಲ್ಯಾಖ್ಯನೃಪತಿ ವಿಖ್ಯಾತ
ಸದ್ಗುಣ ಭರಿತ ತೃತೀಯ ಪುರಂದರ ಸುತನೆನಿಸಿದ ದಸ
ದ್ಯತಿ ವಾದೇಶ್ವರನ್ವಿತದಲಿ ವಲಿಸಿದ ೧

ನರಸಂಬಂಧಿತ ಪ್ರಾಂತದ ಕ್ಷೇತ್ರದಲಿ ಬ್ಯಾಗವಟದ ಕರಣಿಕ
ನರಸಾರ್ಯರಗರ್ಭೋದಯ ಗಿರಿಯಲ್ಲಿ
ಜನಿಸಿದ ಬಾಲಾರ್ಕನು
ವರದೇಂದ್ರ ಗುರುವರ್ಯರ ಕರುಣದಲಿ ಶಾಸ್ತ್ರಾಖ್ಯಾಗಸದಿ
ವರವಸಂತ ಋತತರುಣಿ ಕಿರಣದೊಲ್ ಪರಮತಗಳ
ಧಿ:ಕರಿಸಿ ಮೆರೆಯುತಿಹ ೨

ಮೂರು ಭಾಷಾತ್ಮಕ ವಿದ್ಯಾಧ್ಯಾತ್ಮ ಸಂಪಾದಿಸಲೋಸುಗ
ಮಾರಾರಿನಾಮಕದಾಮಹಾತ್ಮರಡಿಯುಗಳನು ಸೇವಿಸಿ
ಮೂರು ರೂಪಾತ್ಮಕನ ವಿಜ್ಞಾನಾತ್ಮ ಅಂಶಗಳನು ತೋರಿಪ
ಮೂರು ಮೂರು ಮೂರು ಮೂರು ಮೂರು ವಂದುಸಾರವ
ಗೃಹಿಸಿದ ಸೂರಿವರಾಗ್ರಣಿ ೩

ವರದೇಶ ಶಾಸ್ತ್ರಾತ್ಮಕಪಯದಿಂದ ಸಂಪೂರಿತವಾದ
ಮರುತಮತ ತತ್ವತರಂಗಗಳಿಂದ ಸಂಶೋಭಿಸುತಿಹ ಶ್ರೀ
ಹರಿಕಥಾಮೃತ ಸಾರದ ಸುಧೆಯಿಂದ
ಭೂಸುರರನು ಪಾಲಿಪ
ಹರಿಯಭಕುತಿಸುರಮಣಿ ತರುವನೀವಪಯ
ಶರಧಿಯನಿಪ ಹರಿ ೪

ಮರುದಾರಿ ತಿಮಿರಪಹಾರಕ ಸೂರ್ಯ ಸದ್ಭುಕುತರೆನಿಸುವ
ಶರಣಜನ ಹೃತ್ಸಂತಾಪಹಭಾರ್ಯ ಕಾಮಕ್ರೋಧಾದಿ
ಅರಿಷಡ್ವರ್ಗವ ಭರ್ಜಿಪಹರಿ ಶೌರ್ಯ ಸತ್ಕವಿಕುಲವರ್ಯ
ವರದೇಶ ವಿಠಲನ ಚರಣಸೇವಕರ ಸುರತರುವಿನ
ತೆರಪೊರೆಯುಂತ ಮೆರೆಯುವ ೫

## ೩೫

ಪ್ರಾಣೇಶ ದಾಸಾರ್ಯರ ಪದಯುಗಗಳ
ಸಾನುರಾಗದಲಿ ಸ್ಮರಿಸುವರ
ನಾನಾಜನುಮದ ಪಾಪ ತರಿದು ಸುಜ್ಞಾನ
ಭಕುತಿಯನ್ನು ಕೊಡುತಿಹರು ಪ

ವರಕಾಶ್ಯೊಪಸದ್ಗೋತ್ರದಿ ಲಿಂಗಸು –
ಗುರು ಕರಣಿಕರಲಿ ಸಂಜನಿಸಿ
ತಿರುಕಾರ್ಯರ ಪರತನುಭವಯೋಗೀಂ –
ದ್ರರು ಯಂಬ ಸುನಾಮದಿ ಕರಿಸಿ ೧

ಕೆಲವುಕಾಲ ಲೌಕಿಕವನುಸರಿಸುತ
ಲಲನೆ ತರಳರಿಂದೊಡಗೂಡಿ
ಬಲು ವಿನಯದಿ ಸಾಧುಗಳರ್ಚಿಸಿ ನಿ –
ರ್ಮಲ ವೈರಾಗ್ಯ ಮನದಿ ಕೂಡಿ ೨

ಮೂಜಗದೊಳು ಪ್ರಖ್ಯಾತರೆನಿಸಿದ
ಶ್ರೀ ಜಗನ್ನಾಥಾರ್ಯರ ಪಾದಾಂ –
ಭೋಜ ಭಜಿಸಿ ಪ್ರಾಣೇಶಾಂಕಿತವನು
ತಾಜವದಿಂದವರಲಿಪಡೆದ ೩

ಶ್ರೀಶಪಾದಯುಗ್ಮಗಳಲಿ ಸದ್ರತಿ
ದಾಸಜನಗಳಲಿ ಸದ್ಭಕುತಿ
ಹೇಸಿಭವದ ಸುಖದಾಸೆ ಜರಿದು ಸಂ –
ತೋಷದಿ ಧರಿಸಿಹ ಸುವಿರಕುತಿ ೪

ಕಾಮಾದ್ಯರಿಷಡ್ವರ್ಗವಗೆಲಿದು
ನೇಮದಿ ಯಮನಿಯಮವ ವಹಿಸಿ

ತಾ ಮುದದಲಿ ನಲಿಯುತ ಕೀರ್ತಿಸುತಿಹ
ಶ್ರೀ ಮನೋಹರನ ಸುಗುಣರಾಶಿ ೫

ಪರಿಪರಿ ಹರಿಕಥೆವರ ಪ್ರಮೇಯಗಳ
ಸರ್ವಜ್ಞರ ಉಕ್ತ್ಯನುಸರಿಸಿ
ವಿರಚಿಸಿ ಹರಿಮಂದಿರದ ಸುಪಥ ಪಾ -
ಮರರಿಗೆ ಸೌಕರ್ಯವಗೈಸಿ ೬

ವರದೇಂದ್ರರ ಪದಸರಸಿಜ ಸೇವಿಸಿ
ಹರುಷದಲವರ ಕರುಣ ಪಡೆದ
ವರವೃಂದಾವನ ಸಂಸ್ಥಾಪಿಸಿ
ಪರಿಪರಿಯಿಂದಲಿಯಾರಾಧಿಸಿದ ೭

ಜ್ಞಾನದಿಲಯವನು ಚಿಂತಿಸುತಾ ಚಿತ್ರ
ಬಾನುಸಪ್ತಮಿ ಯಾಶ್ವಿಜಶುದ್ಧ
ಜಾನಕಿ ಪತಿಪದ ಧೇನಿಸಿಹರಿಪುರ
ಕೀನರ ದೇಹ ಜರಿದು ಸಾರ್ದ ೮

ಪರಮಭಾಗವತರೆನಿಸುವರಿವರನ
ವರ ತನದ ಸುಮಾಲಿಕೆ ಸತತ
ಸ್ಮರಿಸುವ ಭಕುತರ ಪುರುಷಾರ್ಥಗಳನು
ವರದೇಶವಿಠಲನ ಕೊಡುವ ತ್ವರಿತ ೯

## ೩೬

ಮೋದವಿಠಲದಾಸರಾಯ ನಿನ್ನ
ಪಾದವನಂಬಿದೆ ಪಾಲಿಪುದಯ್ಯ ಪ

ಭೇದಮತಾಬ್ಧಿ ಪಾರಿನ ಆದು –
ರ್ವಾದಿಮಾಯಿಗಳಿಗೆ ಗಂಟಲಗಾಣ
ಸಾಧುಜನರ ಪಂಚಪ್ರಾಣನೆನಿಪ
ಮೇದಿನಿಯೊಳು ಹರಿಭಕ್ತ ಪ್ರವೀಣ ೧

ಗುರುಪ್ರಾಣೇಶದಾಸರಲಿ ಜ್ಞಾನ
ವರ ಉಪದೇಶವ ಕೊಂಡು ಭಕ್ತಿಯಲಿ
ವರದೇಂದ್ರಾರ್ಯರ ಸನ್ನಿಧಿಯಲಿ ಸತತ
ಹರಿಭಜನೆಯ ಮಾಳ್ಪ ನಲಿನಲಿಯುತಲಿ ೨

ಸ್ನಾನಸಂಧ್ಯಾದ್ಯನುಷ್ಠಾನವನು
ಜ್ಞಾನಪೂರ್ವಕದಿ ಚರಿಸುವ ನಿಧಾನ
ಹೀನಜನಗಳಲ್ಲಿ ಮೌನ ನಿರುತ
ಶ್ರೀನಿವಾಸನ ಮನದಲಿ ಮಾಳ್ಪ ಧ್ಯಾನ ೩
ಬಾಲ್ಯತನದಿ ನಿಮ್ಮಾಜ್ಞವನು ಮೀರಿ

ಕಾಲಕಳೆದೆ ದುರ್ವಿಷಯದಿ ನಾನು
ಶ್ರೀಲೋಲನಂಘ್ರಿ ಮರೆದೆನು ಮುಂದೆ
ಪಾಲಿಸೆನ್ನಯ ಮೊರೆ ಶರಣು ಬಂದಿಹೆನು ೪

ಶ್ರೀ ಮರುನ್ಮತಜ್ಞಾನವನು ನಮ್ಮ
ಸ್ವಾಮಿ ವರದೇಶವಿಠಲನ ದಾಸ್ಯವನು
ಆ ಮುನಿವರನ ಸೇವೆಯನು ಕೊಟ್ಟು
ನೀ ಮುದದಲಿ ಕರುಣಿಸು ಸುರಧೇನು ೫

## ೩೭

ಸ್ಮರಿಸಿ ಬದುಕಿರೋ ಗುರುರಾಯರ ಪದವ
ಕೊಡುವನು ಸಂಪದವ
ತ್ವರಿತದಿ ಭಜಿಸಲು ಹರುಷದಿ ಕರಪಿಡಿವ
ಸುಜ್ಞಾನವ ಕೊಡುವ ಪ

ಪ್ರಥಮದಿ ದ್ವಿಜಕುಲ ತತಿಯಲ್ಲಿ ಅವತರಿಸಿ
ಬಹುಜರನು ವಲಿಸಿ
ಪಿತೃಭ್ರಾತಾಚಾರ್ಯನು ತಾನೆಂದೆನಿಸಿ ಕವಿವರ ನೆಂದೆನಿಸಿ
ಯತಿವರ ರಘುಕುಲವರ್ಯನ ಸೇವೆಯನು
ಬಹುವಿಧದಲಿ ತಾನು
ಅತಿಹಿತದಲಿ ಗೈಯಲು ಸುಸ್ತವವನು
ವರ್ಣಿಸೆ ಮಹಿಮೆಯನು ೧

ಸ್ಮರಿಸುವ ಭಕ್ತರ ಪೊರೆವಕರಣಿತಾನು ಸ್ವೀಕರಿಸಿದನದನು
ಹರಿಸಾಕ್ಷಾನನವೆನಿಪಸುವಾಕ್ಯವನು ಸಂಪಾದಿತ ತಾನು
ಹರಿವಿಶ್ವಸುನಾಮದಿ ಭೂತಳದಲ್ಲಿ ಉದಿಸಿದ ಮುದದಲ್ಲಿ
ಪರಿಚಾರ ಕಾಮದಿ ಕರಸ್ನೇಹದಲಿ ಜನಿಸಿದ ಪೂರ್ವದಲಿ ೨

ಸಿರಿಗೋಪಾಲಾಖ್ಯರು ಸುಜ್ಞಾನವನು ಕರುಣಿಸೆ ಮರ್ಮವನು
ಸರಸದಿ ಗ್ರಂಥದವರ ಸುಹಸ್ಯವನು ಸಂಗ್ರಹಿಸಿದ ತಾನು
ಸಿರಿರಘುವರ ಕರುಣದಿ ಧರೆಯೊಳು ಮೆರೆವುಲ್ಲರುವಿಗಿಲ್ಲರುವ
ವರದೇಶ ವಿಠಲನ ಭೃತ್ಯನೆ ತಿಳಿಯುವನು
ಗುರುವಿನ ಮಹಿಮೆಯನು ೩

## ಉಪದೇಶಾತ್ಮಕ

### ೩೮

ಪರರ ನಿನ್ನಂತೆ ಬಗೆಯಲೊ ಮನವೆ
ಪರರ ನಿನ್ನಂತೆ ಬಗೆಯುದಿದ್ದರೆ ಯಮನು
ಕೊರೆದು ಕೊಲ್ಲಿ ನಿನ್ನ ನಿರಯದೊಳಿರುಸುವ ಪ

ಪರಸತಿಯಲ್ಲಿ ಮೋಹಿಸಿ ನೀ ಬಲು
ಹರುಷದಿ ಯವಳೊಳು ರಮಿಸೆನೆಂಬಿ
ಪರಪುರುಷನು ಒಬ್ಬ ನಿನ್ನ ಸತಿಯ ಮೇಲೆ
ಅರದೃಷ್ಟಿಹಾಕಲು ಮರುಗಿ ಕಳವಳಿಸುವಿ ೧

ಚೋರತನದಿ ಪರದ್ರವ್ಯವನ್ನಪ –
ಹಾರ ಮಾಡಲು ನೀನು ಯೋಚಿಸುವಿ
ಚೋರನೊಬ್ಬನು ಬಂದು ನಿನ್ನಯ ವಿತ್ತವ
ಹೀರಿಕೊಂಡ್ ಹೋಗಲು ಹೋರಾಡಿಯಳುತಿಪ್ಪೆ ೨

ಮಂದಿಯ ಮನೆ ಮನೆಗೆ ಪೋಗಿ ಪರ –
ನಿಂದೆಯ ಮಾಡಿಯಾನಂದ ಬಡುವಿ
ಮಂದ ಮತಿಯೆ ನಿನ್ನ ಹಿಂದಾಡಿದ್ದು ಕೇಳಿ
ಹಂದಿನಾಯೆಂದದಿ ಕದನಕ್ಕೆ ತೆರಳುವಿ ೩

ದೊಡ್ಡವರು ಪೂಜ್ಯರೆಂದರಿಯದಲೆ ನೀ
ಅಡ್ಡಿಯಿಲ್ಲದೆಯವರ ಹಳಿಯುತಿಪ್ಪೆ
ಮಡ್ಡಾಖೋಡಿಯೆ ನಿನ್ನ ಮಡ್ಡನೆಂದರೆ ಕಣ್ಣು
ಗುಡ್ಡಿಕೀಳ್ವಂದದಿ ರೋಷವ ಪೊಂದುವಿ ೪

ಆತ್ಮವತ್ಸರ್ವಭೂತಾನೆಂಬೊ ಪವಮಾ
ನಾತ್ಮಜನುಕ್ತಿಗೆಯನು ಸರಿಸಿ ಪೂ –
ತಾತ್ಮನಾಗಿ ಬಾಳು ಅದರಿಂದೆ ಶ್ರೀ ಪರ –
ಮಾತ್ಮನು ಮೆಚ್ಚಿಯಿಷ್ಟಾರ್ಥವ ಕೊಡುತಿಪ್ಪ ೫

ಅನ್ನಿಗಾರು ಘೋರಾಪತ್ತಿನೊಳ್ಸಿಲುಕಿತಾವ್
ಬನ್ನಬಡುತಿರಲು ನೀ ಮನ್ನಿಸದಿರುವಿ
ವನ್ನಜಾಪ್ತನ ಸುತನು ನಿನ್ನಯ ಕಾರ್ಯಕ್ಕೆ
ಬೆನ್ನಿಂದ ಕರುಳನುಚ್ಚಿಸದಲೆ ಬಿಡುವನೇ ೬

ಧರಣಿಯ ಸರ್ವ ಪ್ರಾಣಿಗಳಲ್ಲಿಯು
ಮರೆಯಾದೆ ಕರುಣದಿ ವ್ಯವಹರಿಸುವದು
ಪರಮಪುರುಷ ನಮ್ಮ ವರದೇಶ ವಿಠಲಗೆ
ನಿರುತದಿಯಭಿಮತವಾದ ಧರ್ಮವು ಕೇಳು ೭

# ವಿಶೇಷ ಸಂದರ್ಭ

## ಶ್ರೀ ವರದೇಂದ್ರಾಖ್ಯಾನ ಉತ್ಸವ ವರ್ಣನೆ

### ೩೯

ವರದೇಂದ್ರಗುರು ನಿಮ್ಮ ಚರಣ ಸರಸಿರುಹಸಾರಿದೆ
ಪೊರೆಯುವದೈ
ಇರುಳುಹಗಲು ತವಸ್ಮರಿಸುತಲಿಹ ಭಕು –
ತರಿಗಿಹ ಪರಸುಖಸುರಿಸುವ ಶ್ರೀ ಗುರು ಪ

ಲಿಂಗಸುಗುರುನಿವಾಸ ಭಕ್ತ ಜಂಗುಳಿ ದುರಿತವಿನಾಶ
ಮಂಗಳ ಚರಿತ ಮೌನೀಶ ವಿಹಂಗವಾಹನ ನಿಜದಾಸ ೧

ವಸುಧೀಂದ್ರಕರಸಂಜಾತ ಸಿರಿ ವಸುಧಿಜಾಪತಿ ಪದದೂತ
ವಸುಧಿಯೊಳಗೆ ವಿಖ್ಯಾತ ಸುಮನಸರ ಸುವಂಶಜನೀತ ೨

ಚಲುವರಾಮ ಪದಲೋಲ ಶ್ರೀ ತುಲಸೀ
ಸುದರುಶನ ಮಾಲಾ
ಗಳದಿ ಧರಿಸಿಹ ಸುಶೀಲಾಕಲಿ ಮಲದ
ಕಲುಷ ನಿರ್ಮೂಲಾ ೩

ವಾಯುಮತಾಬ್ಧಿವಿಹಾರಾ ಕಾಷಾಯ ಕಮಂಡಲಧಾರಾ
ಮಾಯಿ ಜಲಜ ಚಂದಿರ ಗುರುರಾಯರ ಮಹಿಮೆಯಪಾರಾ ೪

ಪಂಡಿತಮಂಡಲಭೇಶ ಪಾಖಂಡಿಮತೋರುಗವೀಶ
ಪುಂಡರಖಂಡಿಪ ಕುಲಿಶ ತನ್ನ ತೊಂಡನೆಂದವರಘನಾಶ ೫

ಜ್ಞಾನಾನಂದದ ಖಣಿಯೋ ಅಜ್ಞಾನದ ತಿಮಿರ ತರಣಿಯೊ
ಆನತ ಚಿಂತಾಮಣಿಯೋ ಪಾಪಕಾನನ
ಕನಳನೀ ಮುನಿಯೋ ೬

ವೈರಾಗ್ಯದಿ ಪಶುಪತಿಯೊ ಗಾಂಭೀರ್ಯದಿ
ಸುರನದಿಪತಿಯೊ
ಧೈರ್ಯದಿ ಭೂಭತ್ಪತಿಯೊ ಚಾತುರ್ಯದಿ ವರಬ್ರಹ್ಮಸ್ಪತಿಯೊ ೭

ದಾನದಿರವಿಜನೆನಿಪನು ಸುವಿಧಾನದಿ ಕ್ಷಿತಿಯ ಪೋಲುವನು
ಮೌನದಿ ಶುಕಮುನಿವರನು ಅಸಮಾನಯೋಗಿ ಎನಿಸುವನು ೮

ಹರಿಸ್ಮರಣೆಯಲಿರುತಿರುವ ನರಹರಿನಿಂದಿಪ ಮತತರಿವ
ಹರಿಪನೆಂಬರೆ ಪೊರೆವ ಶ್ರೀ ಹರಿಯಿವರಗಲದಲಿರುವ ೯

ಪ್ರಾಣೇಶ ದಾಸರೆನಿಪರು ಶ್ರೀ ಶ್ರೀನಿವಾಸನ ವಲಿಸಿಹರು
ಜ್ಞಾನಿಗಳಿಗೆಅತಿ ಪ್ರೀಯರು ಅಸಮಾನದಾಸರೆನಿಸುವರು ೧೦

ವರಕವಿ ಶ್ರೀ ಜಗನ್ನಾಥಾರ್ಯರ ಕರುಣ ಪಡೆದನವರತ
ಧರಣಿಯೊಳಗೆ ವಿಖ್ಯಾತ ನರಹರಿ ಯಸ್ಮರಿಸುತಿಹ ನಿರುತ ೧೧

ಹಿಂದಿನಸುಕೃತದಿ ಫಲದಿ ವರದೇಂದ್ರಾರ್ಯರು ವಂದಿನದಿ
ಚಂದದಿ ದಾಸಗೃಹದಿ ನಡೆತಂದರು ಬಹುಸಂಭ್ರಮದಿ ೧೨

ಬಿನ್ನೈಸಿದ ಭಕುತಿಂದ ಮುನಿಮಾನ್ಯದರುಶನದಿಂದ
ಧನ್ಯಧನ್ಯನಾನೆಂದ ಪಾವನ್ನವಾಯ್ತು ಕುಲವೆಂದ ೧೩

ದಾಸಾರ್ಯರ ಭಕುತಿಯನು ನಿರ್ದೋಷವಾದ ಜ್ಞಾನವನು
ಸೋಸಿಲಿ ಗೈವ ಸೇವೆಯನು ನೋಡಿ
ತೋಷಬಡುತ ಮುನಿವರನು ೧೪

ಶ್ರೇಷ್ಠನಾದಯತಿವರನು ಉತ್ಕೃಷ್ಟವಾದಸ್ಥಳವನ್ನು
ಕೃಷ್ಣಾರ್ಪಣವೆನುತಿದನು ಕೊಡೆ ತುಷ್ಟಿಯು
ನಮಗೆನುತಿಹನು ೧೫

ದೇಶಕರಿಂಗಿತವರಿದು ವರದಾಸಾರ್ಯರು ಕೈಮುಗಿದು
ಈ ಶರೀರತಮ್ಮದೆಂದು ಮದ್ದೇಶಾರ್ಪಣವೆಂತೆಂದು ೧೬

ವಪ್ಪಿದ ತರುವಾಯದಲಿ ಮುನಿಸರ್ಪಶಯ್ಯನ ಸ್ಮರಿಸುತಲಿ
ತಪ್ಪದೆ ಸರ್ವದೇಶದಲಿ ತಾಕಪ್ಪವ ಕೊಳುತಲ್ಲಲ್ಲಿ ೧೭

ಕೆಲಕಾಲದಿ ಪುಣೆಯಲ್ಲಿ ಸಿರಿ ನಿಲಯನಂಘ್ರಿ ಸ್ಮರಿಸುತಲಿ
ಕಳೇವರ ತ್ಯಜಿಸಿದರಲ್ಲಿ ಆಬಳಿಕ ಲಿಂಗಸುಗೂರಲ್ಲಿ ೧೮

ತುಲಸಿ ವೃಕ್ಷರೂಪದಲ್ಲಿ ಇಲ್ಲಿನೆಲೆಸಿಹವೆಂದು ಸ್ವಪ್ನದಲಿ
ಗಂಜಿಯ ಮರಡಿಯಲಿ ಇದ್ದಶಿಲೆ ತರಿಸೆಂದು ಪೇಳುತಲಿ ೧೯

ಬಣವಿಯ ತ್ವರ ತೆಗೆಸುತಲಿ ತರುಮನುಜನಸರಿನೋಡುತಲಿ
ಮುನಿ ವಚನವನಂಬುತಲಿ ಶಿಲೆಯನು ತಂದಿರಿಸಿದರಿಲ್ಲಿ ೨೦

ವರಭುವನೇಂದ್ರ ಮುನಿಪನುಜುಮ್ಲಾ
ಪುರುದಲಾಗಯಿರುತಿಹನು
ತ್ವರದಿಂದಲಿ ಕಳುಹಿದನು ನರಹರಿ ಸಾಲಿಗ್ರಾಮವನು ೨೧

ವರಪುಣ್ಯ ಕ್ಷೇತ್ರದಲಿಂದ ಮುನಿವರ ತಾನಿಲ್ಲಿಗೆ ಬಂದ
ಶರಣರ ಪಾಲಿಪೆನೆಂದ ಸುಖಗರೆಯುತ ಅಲ್ಲಿಯೆ ನಿಂದ ೨೨

ಸುಂದರಪಾದುಕೆಗಳನು ಪುಣೆಯಿಂದಿಲ್ಲಿಗೆ ತರಿಸಿದನು
ವಂದಿಸುವವರ ಘಗಳನ್ನು ತ್ವರದಿಂದ ತರಿದು ಪೊರೆಯುವನು ೨೩

ದಾಸಕುಲಾಗ್ರಣಿಯನಿಪ ಪ್ರಾಣೇಶ ಕರಾರ್ಚಿತ ಮುನಿಪ
ದೇಶಿಕ ವರರೆಂದೆನಿಪ ರಘುಜೇಶ ಪದಾಂಬುಜ ಮಧುಪ ೨೪

ವೃಂದಾವನದಿ ನಿಂದಿರುವ ರಾಘವೇಂದ್ರರ ಧ್ಯಾನದಲಿರುವ
ಅಂದಣೇರಿ ತಾಮೆರೆವ ಭಕ್ತವೃಂದವ ಕಾದುಕೊಂಡಿರುವ ೨೫

ಪ್ರತಿಗುರುವಾಸರದಲ್ಲಿ ಜನತತಿ ಸಂಭ್ರಮದಿಂದಿಲ್ಲಿ
ಮಿತಿಯಿಲ್ಲದೆ ಭಕುತಿಯಲಿ ನಲಿಯುತ ವಾಲ್ಗೈಸುವರಿಲ್ಲಿ ೨೬

ಪ್ರತಿ ಪ್ರತಿ ವತ್ಸರದಲ್ಲಿ ಗ್ರೀಷ್ಮಋತು ಆಷಾಢಮಾಸದಲ್ಲಿ
ತಿಥಿ ಷಷ್ಟಿಯ ದಿವಸದಲಿ ದ್ವಿಜತತಿ ಸುಭೋಜನ ವಿಲ್ಲಿ ೨೭

ಮರುದಿವಸದ ಸಂಭ್ರಮವು ಶ್ರಿಂಗರಿಸಿದ ರಥದುತ್ಸವವು
ಪರಿಪರಿ ಜಸಂದಣಿಯು ಇದು ವರಣಿಪುದಕೆ ದುಸ್ತರವು ೨೮

ಯತಿವರ ಪರಮಾನಂದದಿಂದ ರಥವೇರಿ ಬರುವದು ಚಂದ
ಅತಿಹರುಷದಿ ಜನವೃಂದಗುರು ಸ್ತುತಿಮಾಳ್ಪದು ಮುದದಿಂದ ೨೯

ಮ್ಯಾಳದವರ ಗಡಿಬಿಡಿಯು ವಾದ್ಯತಾಳ
ಝಾಂಗಟಿ ದಮ್ಮುಡಿಯು
ಕಾಲುಗೆಜ್ಜೆಕಟ್ಟಿದಡಿಯುದಿವ್ಯ ಮೇಲು ಸರದ ಪದನುಡಿಯು ೩೦

ಭೇರಿ ಭಜಂತ್ರಿ ತುತ್ತೂರಿಗಂಭೀರದಿ ಹೊಡೆವನಗಾರಿ
ಭಾರಿಪಶಂಖನ ಪೂರಿಧ್ವನಿಗಾರದು ಅಂಬರ ಮೀರಿ ೩೧

ಹಲವು ಪುಷ್ಪ ಹಾರಗಳು ಪರಿಮಳ ಪರಿ ಪರಿಧೂಪಗಳು
ಫಲಗಳನೈವೇದ್ಯಗಳು ಮಂಗಳ ಕರ್ಪೂರ ದೀಪಗಳು ೩೨

ಹೊಳೆವ ಚವರ ಛತ್ರಿಗಳು ಥಳ –
ಥಳಿಪ ಪತಾಕಿ ಬೆತ್ತಗಳು
ಮಳೆಗರೆಯುವ ಕುಸುಮಗಳು ಇಳೆಯೊಳಗೀಯುತ್ಸವ
ಮಿಗಿಲು ೩೩

ಸಂತಜನರ ಜಯಘೋಷ ಅತ್ಯಂತ ಮನಕೆ ಸಂತೋಷ
ಮಂತ್ರಮಂದಿರದಂತೆ ಭಾಸ ಇತ ನಿಂತು
ಕುಣಿಯುತಿಹ ಶೀಶ ೩೪

ಕಂತುಪಿತನದಯದಿಂದ ಇಲ್ಲಿ ನಿಂತಿಹ ಸುರರಾನಂದ
ಎಂತೊರಣಿಪೆ ಮತಿಮಂದ ದುರಂತ ನಿಮ್ಮಯ ಗುಣವೃಂದ ೩೫

ಜಯ ಜಯವೆಂದು ಪಾಡುವರು
ಸುವಿನಯದಿಂದ ನಮಿಸುವರು
ಭಯವನು, ಈಡಾಡುವರು ತಮ್ಮಬಯಕೆ ಪೂರೈಸಿಕೊಳ್ಳುವರು ೩೬

ಜ್ವರಭಳಿ ವ್ಯಾಧಿ ಪೀಡಿತರು ಮತ್ತುರಗವೃಶ್ಚಿಕದಂಶಿಕರು
ತರುಳರಿಲ್ಲದ ಬಂಜೆಯರು ಮೂಕಕುರುಡ
ಕುಂಟರು ಬಧಿರರು ೩೭

ಪರಿಪರಿಗ್ರಹಪೀಡಿತರು ಬಹುಪರಿ ಶುಭಕಾಮಿಪ ಜನರು
ಪರಿಪರಿ ಸೇವಿಸುತಿಹರು ತಮ್ಮ ಹರಕೆ
ಪೊರೈಸಿಕೊಂಬುವರು ೩೮

ಸಾಷ್ಟಾಂಗದಿ ವಂದಿಪರು ಅಭಿಷ್ಟೇಯ ಪಡೆದುಕೊಳ್ಳುವರು
ಕಷ್ಟಗಳನು ನೀಗುವರು ಸಂತುಷ್ಟರಾಗಿ ತೆರಳುವರು ೩೯

ಇದುಪುಣ್ಯಕ್ಷೇತ್ರ ವೆನಿಸಿತು ಶ್ರೀಪದುಮೇಶಗಾವಾಸಾಯ್ತು
ಸದಮಲ ದಿವಿಜರು ನಿಂತು ಇಲ್ಲಿ
ಮುದದಿಂದನಲಿಯುವರಾಂತು ೪೦

ಈಸುಪದ ಪೇಳ್ವನೆಧನ್ಯ ಜಗದೀಶನ ತುತಿಸಿದ ಪುಣ್ಯ
ದೇಶಿಕಪತಿ ಮುನಿಮಾನ್ಯ ವರದೇಶ ವಿಠಲಾಗ್ರಗಣ್ಯ ೪೧

೧

## (ಸುಳಾದಿ)

# ಹನುಮದ್ವ್ರತ ಕಥಾ

### ಧ್ರುವ ತಾಳ

ವ್ರತವೆ ಉತ್ತಮ ವ್ರತವೆಂದು ಪೇಳಿಹರು
ಅತುಳ ಜ್ಞಾನನಿಧಿ ವಿಜಯಾಖ್ಯ ಗುರುಗಳು ।
ಸತತ ಅಧ್ಯಾತುಮ ಅನಂತ ವೃತವೆಂದು ।
ಕ್ಷಿತಿಯೊಳು ಈ ವೃತಕೆ ಸರಿಗಾಣೆನೊ ।
ಪತಿತ ಮಾನವರ ಉದ್ಧಾರಗೋಸುಗವಾಗಿ
ದ್ವಿತಿಯ ಉತ್ತಮ ವೃತವು ಹನುಮದ್ವ್ರತವೂ ।
ಯತನ ಜ್ಞಾನೇಚ್ಛಾ ಶಕ್ತ್ಯಾದಿಗಳಿಗೆ ನಿರುತ ।
ಜತೆಯಾಗಿ ಕಾರ್ಯ ಮಾಳ್ಪ ಜ್ಞಾನಾಖ್ಯವೃತವೊ ।
ಅತಿಶಯವಾದ ಜ್ಞಾನ ಭಕ್ತಿ ವಿರಕ್ತಿವೀವುದು ।
ಮತಿವಂತರು ಮನಕೆ ತಂದು ತಿಳಿದು ।
ಕ್ಷಿತಿಪತಿ ಧರ್ಮರಾಜನೆಸಗಿದ ಮಹಾ ವೃತವೊ ।
ಪತಿಭಕುತಿಯುಕುತಳಾದ ದ್ರೌಪದಿಯು ।
ಪತಿ ಮೂರ್ಲೋಕದ ಶ್ರೀ ಕೃಷ್ಣನುಪದೇಶದಂತೈ ।
ಮಿತ ಜ್ಞಾನದಿಂದ ಚರಿತ ವ್ರತವೊ ।
ಹಿತವಂತ ಹನುಮಂತ ಪಿತ ರಾಮನಿಗೆ ಪೇಳೆ ಆ ।
ಚ್ಯುತನಾದ ರಾಮನುಮತಿವಾನ್ ಹನು ।
ಮಂತನ ಭಕುತಿಗೊಲಿದು ಮಾಡ್ದ ವೃತವೊ ।
ಸತತ ಸೂತರು ಶೌನಕಾದ್ಯರಿಗಿದರ ಮಹಿಮೆ ।
ಮಿತಿ ಇಲ್ಲದೇ ಪೇಳಿ ಮಾಡಿಸಿದ ವೃತವೊ ।
ವೃತತಿಜಾಸನ ಪ್ರಿಯ ಸುತ ಸುಂದರ ವಿಠಲನ ಭ ।
ಕುತಿ ಜ್ಞಾನವೀವ ಮಹಾ ಶ್ರೇಷ್ಠ ವೃತವೊ ೧

### ಮಟ್ಟತಾಳ

ಜಾಹ್ನವೀ ತೀರದಲಿ ಶೌನಕಾದ್ಯ ಮುನಿಗಳು ।
ಧ್ಯಾನಿ ಸೂತರ ಕುರಿತು ಸಾನುರಾಗದಿ ನಮಿಸಿ ।
ಮೇಣು ಭಕುತಿಯಿಂದ ಜ್ಞಾನವಂತರೆ ನಿಮ್ಮಿಂ ।
ದಾನೇಕ ವೃತಮಹಿಮೆಯಾನು ಕೇಳಿ ನಿತ್ಯ ।
ಧೇನಿಸುವೆವು ಹರಿಯಾ ಪುನೀತರ ಮಾಡುವಾ ।
ಕಾಣೋವನ್ಯ ವೃತವು ಆವುದುಪೇಳೆನಲು ।
ಪ್ರಾಣದ ಪಾವನಿಯ ಪರತರ ಪ್ರಿಯ ವ್ರತವು ।
ಸಾನುರಾಗದಿ ನಿತ್ಯ ಶೂದ್ರಾದಿ ನಾಲ್ಕು ।
ಜಾಣ ವರ್ಣರಿಂದ ಮಾಡ್ವದಕ್ಕೆ ಯೋಗ್ಯವೊ ।
ಏನು ಬೇಡಿದರೆ ತಡಿಯದೆ ಕೊಡುವುದೊ ।
ಜ್ಞಾನಿ ಜನಗಳಿಗೆಲ್ಲ ಮಂಗಳತಮ ವೃತವು ।
ಏನು ಪೇಳಲಿ ಮತ್ತೆ ಆರೋಗ್ಯ ಐಶ್ವರ್ಯ
ಪುತ್ರಾದಿಗಳೀವುದು
ಶ್ರೇಣಿ ದಿನ ಪ್ರತಿ ದಿನದಲ್ಲಿ ವರವಿದ್ಯ ಪ್ರದವೊ
ಹಾನಿ ಲಾಭಗಳಲ್ಲಿ ಹನುಮಂತನ ನೆನಸೆ ।
ಮಾನನಿಧಿ ಸುತ ಸುಂದರ ವಿಠಲನ ।
ಧ್ಯಾನ ಧಾರಣವೀವ ಉತ್ತುಮಾಮಹವೃತವೊ ೧

### ರೂಪಕ ತಾಳ

ಒಂದಾನೊಂದು ಸಮಯದಲ್ಲಿ ಶ್ರೀ ವ್ಯಾಸ ಶಿಷ್ಯ ।
ವೃಂದದಿಂದೊಡಗೂಡಿ ಯುಧಿಷ್ಠರನ ನೋಡಲು ।
ಅಂದುಳ್ಳ ದ್ವೈತ ವನಕೆ ನಡೆತಂದರು ಏನಂಬೆ ।
ಚಂದಾದ ನಿರ್ವೈರ ಮೃಗವೃಂದಗಳಿಂ ಕೂಡಿರುವ ।
ಕುಂದ ಮಂದಾರಾದಿ ಪುಷ್ಪಫಲ ವೃಕ್ಷಗಳಿಂ ಶೋಭಿಪ ।
ಕುಂದು ದೂರೋಡಿಸಿದ ಜ್ಞಾನಿಗಳ ಸಮೂಹವು ।
ಛಂದದಲಿ ಕಾವ್ಯಷಡಂಘ್ರಿ ನಿರತರಾಗಿ ।
ಮುಂದೆ ಅಧ್ಯಯನ ಶ್ರುತಸಂಪನ್ನರಾದವರು ।

ಒಂದೊಂದು ವೇದ ಋಗು ಯಜುಃಸಾಮಾಥರ್ವಣ
ಒಂದೋಂದು ಶಾಖಾಶಾಸ್ತ್ರದಿ ಪ್ರವಚನಾಸಕ್ತರು ।
ಮಿಂದು ಹರಿಪದಜಲದಿ ಚತುರ ವೇದ ಘೋಷದಿ ।
ಸಂದೇಹವಿಲ್ಲದಲೇ ಭಗವದ್ಗೀತಾ ಲೀಲಾ ।
ಎಂದೆಂಬುವ ಹರಿಕಥಾಮೃತ ಪಾನ ಮಾಡುವ ।
ಸಂದೋಹ ಮುನಿಗಳಿಗೆ ನಿತ್ಯನ್ನದಾನವ ಮಾಡಿ ।
ಬಂಧುಗಳಿಂ ಸಹಿತ ಇರುವ ಯುಧಿಷ್ಟರನನ್ನು ।
ಸುಂದರ ವಿಠಲಾತ್ಮಕ ವ್ಯಾಸದೇವನು ।
ಅಂದು ದ್ವೈತವನದಲ್ಲಿ ಕೃಪಾ ದೃಷ್ಟಿಯಿಂದ ನೋಡಿದನು ೩

## ಝಂಪಿ ತಾಳ

ಕೃಷ್ಣದ್ವೈಪಾಯನಾ ಮುನಿಗಳಾಗಮ ಕೇಳಿ ।
ಕೃಷ್ಣೆ ಸಹಿತಾ ಅನುಜರೊಡನೆ ಕೂಡಿ ।
ಜೇಷ್ಠನಾದ ಯುಧಿಷ್ಠರನು ತಾ ದೂರ ನಡೆತಂದುವಾ ।
ಸಿಷ್ಟ ಕೃಷ್ಣಗೆ ಸಾಷ್ಟಾಂಗ ಪ್ರಣಾಮಗಳ ಮಾಡಿ ನಿ ।
ರ್ದಿಷ್ಟವಾದೆಕಾಂತ ಸ್ಥಳಕೆ ಕರೆತಂದು ।
ಶ್ರೇಷ್ಠವಾದಾಸನದ ಮೇಲೆ ಕುಳ್ಳಿರಿಸಿ ।
ಜೇಷ್ಟಾದಿಕೃಷ್ಣೇಯೊಡನೆ ಉತ್ಕೃಷ್ಠ ಪೂಜೆಯ ಮಾಡೆ ಪರ
ಮೇಷ್ಠಿ ಜನಕನು ತಾನು ತುಷ್ಟ ನಾಹೆ ।
ಶಿಷ್ಟಾಚಾರದಂತೆ ಕುಶಲ ಪ್ರಶ್ನೆಯು ಮಾಡ್ದ ನಿ ।
ರ್ದುಷ್ಟ ಭೀಮಾರ್ಜುನರೆ ಅಶ್ವಿನಿಯರೇ ಮನ ।
ಮುಟ್ಟಿ ಹರಿಪಾದ ಭಜನೆಯ ಮಾಡಿ ಸುಖಿಗಳಾಗಿಹ್ಯರೇ?
ಧಿಟ್ಟತನದಲೆ ತಪವನೆಸಗಿ ಕಿರಿಟಯು ।
ನಿಷ್ಠೆಯಲಿ ಮಹರುದ್ರನೊಲಿಸಿ ಪಾಶುಪತವೆಂಬು ।
ತ್ಕೃಷ್ಟಾಸ್ತ್ರ ಸಂಪಾದನೆಯ ಮಾಡಿದದು ಕೇಳಿ ।
ಹೃಷ್ಟನಾದೆನೊ ನಾನು ನಿಮ್ಮಿಂದಲಿ ಕೂಡಿ ।
ಕಷ್ಟಬಡುತಿರುವ ನಿನ ದುಃಖ ಶಾಂತ್ಯರ್ಥ ।
ಇಷ್ಟವೀವುದಕಾಗಿ ಬಂದಿಹನು ರಾಜಾಯು ।
ಧ್ರಿಷ್ಟರನೆ ಕೇಳುತ್ತಮ ವ್ರತವು ನಿನಗೋಸುಗ ।

ಸೃಷ್ಟಿಗೊಡೆಯ ಸುಂದರವಿಠ್ಠಲ ಪೇಳ್ವೆನೆನಲು
ನಿಷ್ಠೆಯಿಂದಲಿ ಧರ್ಮತನಯ ನುಡಿದನು ೬

## ತ್ರಿವಿಡಿ ತಾಳ

ನಮೊ ನಮೊ ತಾತ ಮಹಾ ಖ್ಯಾತವಂತರೆ ನಿಮಗೆ ।
ನಮೊ ನಮೊ ನಮೊ ಎಂದು ಬಿನ್ನೈಸುವೆ ।
ಶ್ರಮ ಪರಿಹರವ್ರತವಾವುದದರ ಮಹಿಮೆ ।
ಸುಮನಸರೊಡೆಯನೆ ಪೇಳಯ್ಯಾ ಜೀಯ್ಯಾ ।
ಕುಮತಿ ಪರಿಹರಿಸುವ ದೇವತೆ ಆರು ಉ ।
ತ್ತಮ ನಿಯಮ ಆವುದು ಪೂಜಾ ಕ್ರಮವು ।
ಶಮೆ ದಮೆವೀವ ನಿಯಮ ತಿಥಿ ಆವುದು ।
ರಮೆ ರಮಣನೆ ಆವ ಮಾಸದಲಿ ಮಾಡೋದು ।
ಶಮಲ ವಿವರ್ಜಿತ ವ್ಯಾಸದೇವನೆ ನಿಮ್ಮಾ ।
ಗಮನವು ಎಮ್ಮಯ ಕಷ್ಟ ದೊರೋಡಿಸಲು ।
ಸಮೀಚೀನ ಮತಿಯಿತ್ತು ಭಕ್ತರ ಪಾಲಿಪುದೆನುತ ।
ಸಮಚಿತ್ತ ಉಳ್ಳ ಮುನಿಗಳ ಕೂಡ ನಮಿಸಲು ।
ಭ್ರಮಣ ಮತಿಯ ಕಳೆವ ಹನುಮಾನ್ ಹ
ನುಮನ್ನಾಮ ಪುನಃ ಪುನಃ ಸ್ಮರಿಸಿ ಶ್ರೀವ್ಯಾಸರು ।
ಆಮಮ ಪೇಳಲೇನೊ ಹನುಮದ್ವ್ರತವೋ ।
ಧೀಮಂತ ಹನುಮಂತನ ನಾಮೋಚ್ಚಾರಣೆಯಿಂದ ।
ಸಮಸ್ತ ಕಾರ್ಯ ಸಿದ್ಧಿಪದು ಸಂಶಯ ಬ್ಯಾಡಿ ।
ಆ ಮಹಾ ದುಷ್ಟ ಗ್ರಹೋಚ್ಚಾಟನ ಜ್ವರಾದಿ ।
ತಾಮಸ ರೋಗ ನಿವರಣವಾಗುವದು ।
ಪ್ರೇಮದಿಂದಲಿ ಕೇಳು ಬಹು ವಾಕ್ಯಗಳಿಂದೇನು ?
ಸೀಮೆಗಾಣದ ಅಭೀಷ್ಟಪ್ರದಾಯಕವೊ
ನೀ ಮರೆಯದಿರು ಹಿಂದೆ ದ್ವಾರಕಿಯಲ್ಲಿ
ಶ್ರೀ ಮದ್ವಿಷ್ಣುವೆ ಕೃಷ್ಣ ಪಾಂಚಾಲಿಯನಿ
ಸ್ಸೀಮ ಭಕುತಿಗೆ ವೊಲಿದು ಈ ಮಹಾ ಹ
ನುಮದ್ವ್ರತವನ್ನು ಉಪದೇಶಿಸಿ ।

ನೇಮದಿಂದಲೀ ವ್ರತವು ಮಾಡಿರೆನಲು
ಕಾಮಿತಫಲವೀವಾ ವ್ರತದ ಮಹಿಮೆ ಆ ।
ಸ್ವಾಮಿ ಅನುಗ್ರಹದಿ ಸಂಪದೈಶ್ವರ್ಯದಿ
ಆ ಮಹಾ ಸ್ತೋಮಗಳು ಪ್ರಾಪ್ತವಾಗಲು ನಿಮಗೆ ।
ಈ ಮಹಾ ವ್ರತ ಮಹಿಮೆ ತಿಳಿಯದ ಪಾರ್ಥನು
ಪ್ರೇಮದಿಂ ದ್ರೌಪದಿ ಧರಿಸಿದ ದೋರವ ನೋಡಿ
ಹೇ ಮಹಿಷಿಯೆ ಇದೆನೆನ್ನಲಾಗಿ ।
ತಾಮರಸನಯನೆ ಶ್ರೀ ಹನುಮದ್ದೋರವನ್ನೆ ।
ಆ ಮಹಾ ಐಶ್ವರ್ಯ ಗರ್ವಿಕೆ ಕ್ರೋಧಾದಿ ನಿ
ಸ್ಸೀಮ ಪರಾಕ್ರಮಿ ನುಡಿದ ಅರ್ಜುನನು
ಕಾಮಿನಿಯೆ ಕೇಳು ಆ ಹನುಮನೆಂಬೊ ಕಪಿ
ನಾ ಮುದದಿ ಧ್ವಜದಲ್ಲಿ ಧರಿಸಿರುವೆನು ಈ ।
ಮರ್ಮವನು ತಿಳಿಯದೆ ಆ ವನಚರ ಶಾಖಾಮೃಗ ।
ಕಾಮಿತ ಫಲ ಕೊಡಬಲ್ಲದೆ ಕೇಳಿನ್ನು
ಪಾಮರ ವ್ರತದಿಂದ ವಂಚಿಸಿದೆಲ್ಲದೇ ನೀನು
ಕಾಮಿ ಜನರ ತೆರದಿಂದಲಿ ಅರ್ಜುನನು
ಭಾಮೆ ದ್ರೌಪದಿ ಧರಿಸಿದ ತ್ರಯೋದಶ ಗ್ರಂಥಿಯುಕ್ತ
ಆ ಮುದದ ದೋರವನು ಹರಿದು ಬಿಸಾಟಲು
ಹೇಮಾದಿ ಸಕಲ ಸಂಪದೈಶ್ವರ್ಯ ರಾಜ್ಯವು
ಭೂಮಿ ಸಹಿತ ಪ್ರಾಪ್ತವಾದುದೆಲ್ಲ ಪೋಗೆ ।
ಭ್ರಾಮಕ ಮತಿಯಿಂದ ನೀವುಗಳೀಪರಿ
ಶ್ರಿಮದಾಂಧದಿಂದ ಪ್ರಾಪ್ತವ್ಯ ದುಃಖ ಫಲವು ।
ಸ್ವಾಮಿ ಆಜ್ಞದಿ ಹದಿಮೂರೊರುಷ ಪರಿಯಂತ ।
ನೇಮಿಸಿದಂತೆ ಅನುಭವಿಸಬೇಕಯ್ಯಾ ಶ್ರೀ
ರಾಮ ಮನೊರಮನು ಇನಿತು ನುಡಿಯೆ ।
ಸ್ವಾಮಿ ಆಜ್ಞವ ತಿಳಿದ ದ್ರೌಪದಿ ದೇವಿಯು ।
ಹೇ ಮಹತ್ಮರೆ ಶ್ರೀವ್ಯಾಸರ ನುಡಿ ನಿಜವೋ
ಭೀಮಭವಾಬ್ಧಿ ದಾಂಟಿಸುವ ಸುಂದರ ವಿಠಲನ
ನೇಮಗಳೆಲ್ಲಾ ತಿಳಿಯಲೋಶವೆ ಎಂದಿಗು ೫

## ಧ್ರುವ ತಾಳ

ಕೇಳಯ್ಯಾ ಧರ್ಮರಾಜ ಆಲಸ ಮಾಡದೆ ।
ಪೇಳುವೆ ನಿನಗೊಂದು ಪುರಾತನ ಕಥೆಯು ।
ಆಲಿಸಿ ಮನಕೆ ತಂದು ಬಾಳು ಚನ್ನಾಗಿ ನೀನು ।
ಶೀಲೆ ಸೀತೆಯ ನೋಡುವ ಇಚ್ಛಾಉಳ್ಳ ಮಾ
ಲೋಲ ರಾಮನು ನಿತ್ಯ ಲಕ್ಷ್ಮಣನೊಡಗೂಡಿ ।
ಮೇಲಾದ ಋಷ್ಯಮೂಕ ಗಿರಿಯ ಮಧ್ಯದಲ್ಲಿ
ಶೀಲ ಭಕುತಿಯುಳ್ಳ ಹನುಮಂತನ ದರ್ಶನಾಗೆ
ಆಳುವ ಕಪಿ ರಾಜ್ಯ ಸುಗ್ರೀವನ ಸಖ್ಯವನು ಬ
ಹಾಳ ಮತಿಯುಳ್ಳ ವಾಯುಜ ಮಾಡಿಸೆ ।
ನಾಲಕು ಮಾಸ ಮಳೆಗಾಲವು ವಾಸ ಮಾಡ್ವ ।
ಕಾಲದಲಿ ಹನುಮನು ರಾಮದೇವಗೆ ನಮಿಸಿ ।
ನೀಲ ಮೇಘ ಶ್ಯಾಮ ಶ್ರೀ ರಾಮ ನೀನಿನ್ನ ।
ಬಾಲನ ಬಿನ್ನಪ ಮನಕೆ ತರಲು ।
ಪೇಳುವೆ ನಿಮ್ಮ ಸನ್ನಿಧಾನದಲೆನ್ನ ನಾಮ ಮಹಿಮೆ
ಮೇಲುಸಿಲೆಯನದ್ಧರಿಸಿದ ಶ್ರೀರಾಮ ನೀನಜ್ಞನೆ ।
ಕಾಲ ಜನನದಲಿ ಇಂದ್ರನಿಂದಲಿ ಎನ್ನ
ಮೇಲಾದ ವಜ್ರಾಯುಧದಿಂದ ಹನುಘಾತಿಸಲು
ಭೂಲೋಕದಲ್ಲಿ ಅಂದಿನಾರಭ್ಯ ಹನುಮನೆಂದು ಖ್ಯಾತನಾಗಿ ।
ಕೇಳಯ್ಯಾ ಅಂಜನಾದ್ರಿಯಲ್ಲಿ ಸೂರ್ಯೋದಯ ।
ಕಾಲಕೆ ಪ್ರಕಟನಾದ ಬಾಲ ರವಿಯ ನೋಡಿ ಹಣ್ಣೆಂದು ।
ಮೇಲಾಗಿ ಭಕ್ಷಿಪುದಕೆ ಉಡ್ಡಾಣ ಮಾಡಲಾಗಿ ।
ಈ ಲೀಲೆಯ ತಿಳಿದು ಲೋಕ ಶಿಕ್ಷಣ ಗೋಸುಗ ।
ಕಾಲವಜ್ರಾಯುಧದಿಂದ ಹೊಡೆಯಲು ಮೂರ್ಛಿತ ।
ಬಾಲನಂತೆ ಬಿದ್ದವನೆನ್ನ ನೋಡಿ ಸ್ವಾಹಾ ।
ಲೋಲನ ಸಖನಾದ ವಾಯುದೇವನು ಎನ್ನ ।
ಮೇಲಿನ ಪ್ರೀತಿಯಿಂದ ಸರ್ವಜೀವರ ಶ್ವಾಸ ।
ಕಾಲನಾಮಕ ಭಗವಾನಿಚ್ಛೆಯಂತ ತ್ರುಟಿ ।

ಕಾಲಬಿಡದೆ ಮಾಡ್ವ ಶ್ವಾಸ ನಿರೋಧಿಸೆ ಶಚಿ ।
ಲೋಲನಿಂದನ್ನ ಪುತ್ರನ ಕೆಡಹಿರಲವನನ್ನು ಈ ।
ಕಾಲಲವದಲ್ಲಿ ಕೆಡಹೆನೆನಲು ಆ ।
ಕಾಲದಲಿ ಬ್ರಹ್ಮಾದಿ ದೇವತೆಗಳು ಸಾಕ್ಷಾತ್ಕಾರರಾಗಿ ।
ಓಲೈಸಿ ಪೇಳ್ದ ಮಾತು ಎನಗೋಸುಗ ಆಂಜನೇಯಾ ।
ಬಾಲನೆ ಚಿರಜೀವಿಯಾಗು ನೀನೆ ಪರಾಕ್ರಮಿ ।
ಮೇಲೆನಿಪ ಶ್ರೀರಾಮನ ಕಾರ್ಯಸಾಧಕನಾಗೆನುತ ।
ಬಾಲ ಹನುಮನ ಪೂಜೆ ಮಾಡ್ದರು ದೇವತೆಗಳು ।
ಮೇಲಾದ ಮಾರ್ಗಶಿರ ಶುದ್ಧ ತ್ರಯೋದಶಿ ।
ಕಾಲ ಅಭಿಜಿನ್ ಮೂಹೂರ್ತದಲ್ಲಿ ಆರು ಪೂಜಿಪರೊ ।
ಆಲಸವಿಲ್ಲದೆ ಪುರುಷಾರ್ಥ ಹೊಂದುವರೆಂದು ।
ತಾಳ ಮ್ಯಾಳರೊಡನೆ ವರವ ನೀಡಿ ಪೋದರು ।
ಆಲಯಾ ಸ್ವರ್ಗ ಸತ್ಯಾದಿ ಲೋಕಕೆ ಅಂದು ಹೀಗೆ ।
ಪೇಳೆ ಸುಂದರ ವಿಠಲ ರಘುರಾಮನು ನಸುನಗೆ ।
ಯಾಲಿ ಒಲಿದು ಹನುಮಗೆ ಹಸನ್ಮುಖನಾಗಿ ಇರಲು ೬

## ಮಟ್ಟತಾಳ

ಭಕುತ ವತ್ಸಲ ನೀನು ಭಕುತರಿಚ್ಚವ ನೀನು ।
ಭಕುತ ಭಾಂಧವ ನೀನು ಭಕುತರೊಡಿಯ ನೀನು ।
ಭಕುತ ಪಾಲಕನೆಂಬ ಬಿರುದುಳ್ಳವ ನೀನು ।
ಭಕುತರಿಂದಲಿ ನೀನು ನಿನ್ನಿಂದಲೆ ಭಕುತರು ।
ಅಕಳಂಕ ಐಶ್ವರ್ಯ ಸತು ಚಿತು ಆನಂದಾತ್ಮಾ ।
ಮುಕುತಿ ಪ್ರದಾತನೆ ಸರ್ವ ಸ್ವಾಮಿ ನೀನು ।
ಸಕಲ ಲೋಕಗಳೊಡೆಯ ನಿನ್ನಿಂದಲೆ ಸರ್ವ
ವ್ಯಕುತವಾಗ್ವದು ಸತ್ಯ ಸರ್ವಜ್ಞನು ನೀನು ।
ಭಕುತರ ಮನದಿಂಗಿತ ತಿಳಿಯದವನೆ ನೀನು ।
ಅಖಿಳ ಬ್ರಹ್ಮಾಂಡರಸನೆ ನಮೊ ನಮೊ ನಮೊ ನಮೊ ।
ಭಕುತರಿಂದಲೇ ನಿನ್ನ ಖ್ಯಾತಿ ಮೂರ್ಲೋಕಕ್ಕೆ
ಭಕುತರೇ ನಿನ್ನಯಾ ಮಹಿಮೆಯ ಹೊಗಳುವರು ।

ಭಕುತರು ನಿನ್ನಿಂದಲೆ ಕೀರ್ತಿವಂತರಹರು ।
ಅಕುಟಿಲ ಪ್ರಭೋ ನೀನು ನಾ ನಿನ ನಿಜ ಭಕ್ತ ।
ಸಕಲ ಕಾಲದಲ್ಲಿ ನಿನ್ನನಾ ಮರೆಯದಲೇ ।
ವಿಖನಾಸಂಡದಲ್ಲಿ ಸೇವೆ ಮಾಳ್ಪದು ನಿಜವಾಗೆ ।
ಶಕುತನೆ ಎನ ಕೀರ್ತಿ ನಿನ್ನಿಂದಾಗಲಿ ವಿಭೋ ।
ಉಕುತಿ ಲಾಲಿಸು ಪ್ರಭೋ ತವಚಿತ್ತವ ಧಾರೆ ।
ಭಕುತ ಹನುಮಂತ ಇನಿತು ವಿಜ್ಞಾಪಿಸಿ ನಿಲಲು ।
ಪ್ರಕಟಿತ ಅಶರೀರ ವಾಕ್ಯವು ಬಿಡದಲೆ ।
ಸಕಲ ನುಡಿ ಹನುಮಾ ಸತ್ಯನಾಡಿದನೆನಲು ।
ಸುಕರ ಏಕಮೇವ ದ್ವಿತಿಯ ಸುಂದರವಿಠಲ ತುಷ್ಟನಾಹೆ ೭

**ಝಂಪಿತಾಳ**

ಮಾಸಮಾರ್ಗಶೀರ್ಷ ಶುದ್ಧ ತ್ರೊಯೋದಶಿ ।
ಆ ಸುಮುಹೂರ್ತ ಜಯಾ ಅಭಿಜಿನ್ ಕಾಲಕೆ ।
ಶ್ರೀಶರಾಮನು ಹನುಮದ್ವತವ ಮಾಡ್ದ ತ್ರಯೋ ।
ದಶ ಗ್ರಂಥಿಯುತ ಹರಿದ್ರಾದೋರಗಳಲಿ ।
ಭಾಸುರಾಮತಿವೀವ ಹನುಮನಾವ್ಹಾನಿಸಿ ।
ಪೇಶಲಾಪೀತಗಂಧ ವಸ್ತ್ರ ಪುಷ್ಪಿಗಳಿಂದಲೀ ।
ಶ್ರೀಸೀತೆವಕ್ಷಸ್ಥಳದಿಪ್ಪ ನಿತ್ಯಾವಿಯೋಗಿನಿ ।
ಆ ಸುಗ್ರೀವ ಲಕ್ಷ್ಮಣಾದಿಗಳೊಡನೆ ನೆಸಗಿದನೇನೆಂಬೆ ।
ಲೇಶಬಿಡದೇ "ಓಂ ನಮೋಭಗವತೇ ವಾಯುನಂದನಾಯ" ।
ಈ ಸುಮಂತ್ರವ ಜಪಿಸಿ ತಾ ಸಹಸದಿ ಮಾಡ್ದನೋ ।
ದೇಶಪರಿಮಿತ ಪ್ರಸ್ಥತ್ರಯೋಶಗೋಧೂಮವನು ।
ಆ ಸುದಕ್ಷಣೆ ತಾಂಬೂಲ ಸಹ ದ್ವಿಜರಿಗಿತ್ತದಾನ ।
ಮೀಸಲಾ ಮನದಿ ಈ ಸತ್ಕಥೆಯನು ಕೇಳಿ ।
ಭೇಶಮುಖಿ ಸೀತಿಯಳ ಕೊಡ್ದನೆಂಬದು ಖ್ಯಾತಿ ।
ಆ ಸತ್ಯಲೋಕರಿಗೆ ಆದುದು ಅಚ್ಚರವೆ ಪೂರ್ಣಕಾಮನಿಗೆ ।
ಕ್ಲೇಶನಾಶನವು ಸುಗ್ರೀವನಿಗೆ ವಿಶೇಷವಾದುದು ಸತ್ಯವೆನ್ನಿ ।
ತೋಷದಲಿ ವಿಭೀಷಣ ಶ್ರೀರಾಮನಾಜ್ಞೆಯಿಂ ಮಾಡ್ದು ।

ದೇಶಲಂಕೆಯ ರಾಜ್ಯವನು ಪಡೆದನು ।
ಹೇ ಸುಮತಿಯೇ ಕೇಳಂದಿನಾರಭ್ಯ ಭೂಲೋಕಕೆ ।
ಲೇಸುವಿಶ್ರುತವಾದಿತ್ತೈ ಹನುಮದ್ವತವೂ ।
ಆಸುಸಂವತ್ಸರ ತ್ರಯೋದಶ ಪರಿಯಂತ ಮಾಡ್ದುದ
ಕೀಸು ಉದ್ಯಾಪನೆಯಯ್ಯಾ ಆದಿ ಮಧ್ಯಾಂತಕೆ ।
"ಮಾಸಾನಾಂ ಮಾರ್ಗಶೀರ್ಷೋಽಹಂ" ಎಂದು ಗೀತೆಯಲಿ
ಆ ಸ್ವಾಮಿ ದಿವ್ಯನುಡಿಯುಂಟು ಕೇಳ್ ಧರ್ಮಜನೆ ।
ಸ್ತ್ರೀಸಹಿತ ಅನುಜರೊಡನೇ ಈ ವ್ರತವನು ।
ಮೇಶನಾಜ್ಞೆಯಿದೆಂದು ಮಾಡಲು ನಿನಗೆ ರಾಜ್ಯ ।
ಕೋಶ ಭಾಂಡಾರಪ್ರಾಪ್ತಿಯಾಗುವದು ।
ಲೇಶ ಸಂಶಯ ಬ್ಯಾಡೆನಲು ಶ್ರೀ ವ್ಯಾಸ ।
ಆ ಸುಂದರ ವಿಠಲನ ಭಕುತರು ಮುದಭರಿತರಾಗೆ ೮

**ರೂಪತಾಳ**

ರವಿಯು ವೃಶ್ಚಿಕ ರಾಶಿಗೆ ಬರಲಾಗಿ ।
ಸವೆಯಾದ ಪದವೀವ ವ್ರತವಮಾಡುವದಕ್ಕೆ ।
ಕವಳಾ ಅಜ್ಞಾನಾಖ್ಯ ರಾತ್ರಿಕಳೆದು ।
ಸುವಿಮಲಾಜ್ಞಾನಾಖ್ಯ ಪ್ರಾತಃ ಕಾಲದಲೆದ್ದು ।
ಕವಿವ್ಯಾಸರ ಮುಂದೆ ಮಾಡಿ ಧರ್ಮಜನು ।
ಸುವಿವೇಕಬುದ್ಧಿಯಿಂ ಸ್ನಾನಾದಿಗಳ ಮಾಡಿ ।
ಹವಿಷಾದಿ ದ್ರವ್ಯಗಳಲಿ ಹರಿಯಚಿಂತಿಸಿ ಮಾ ।
ಧವನಾಜ್ಞೆಯಂತೆ ಉದ್ಯಾಪನವಂಗೈದು ।
ಕವ್ಯವಾಹನನಲ್ಲಿ ಮೂಲಮಂತ್ರದಿಂದ ।
ಲವಕಾಲ ಬಿಡದಲೆ ವೇದಸೂಕ್ತಗಳಿಂ ಹೋಮಿಸಿ ।
ನವಭಕುತಿಯಲಿ ಹನುಮಂತನ ವ್ರತಾಚರಿಸಲು ।
ಹವಣಿಸಿ ಸಂವತ್ಸರವು ಪೋಗಲು ಪಾಂಡವರು ।
ಬವರದಲ್ಲಿ ಕೌರವರಗೆಲಿದು ನಿಜರಾಜ್ಯ ಪಡೆದರೆಂದು ।
ಪ್ರವಚನಾಸಕ್ತ ಸೂತಾಚಾರ್ಯರು ಶೌನಕರೆ ।
ತವಕದಲಿ ನೀವೀವ್ರತವನು ಮಾಡಿರೈಯ್ಯ ।

ಭವಷೊತ್ತರದಲ್ಲಿ ಪೇಳಿಹರು ವ್ಯಾಸದೇವ ।
ಪವಮಾನಿಸುತ ಹನುಮದ್ವತಮಹಿಮೆಯನು ।
ಜವಭಕುತಿಯಲಿ ಮಾಡೆ ಸುಂದರವಿಠಲವೊಲಿವಾ ೯

## ತ್ರಿವಿಡಿ ತಾಳ

**(ಆಧ್ಯಾತ್ಮ – ಸಮಾಲೋಚನೆ)**

ಪರಮಾತ್ಮ ಶ್ರೀರಾಮ ಪರಿಪೂರ್ಣಕಾಮನು ।
ಪುರಹರನುತ ಈ ಪರಿ ಭಕುತನಭಿಲಾಷೆ ।
ಪರಿಪೂರೈಸಿದನಲ್ಲದೆ ಇದರಿಂದೇನು ಪ್ರಯೋಜನ ಪಾ ।
ಮರಮತಿತ್ಯಜಿಸಿ ತಿಳಿಯೆ ಮಾನ ।
ವರು ನಿತ್ಯ "ಯದ್ಯದಾಚರತಿ ಶ್ರೇಷ್ಠತದ್ಧೇವೇತರೋಜನಾಃ" ।
ಸುರರೊಡಿಯ ಪೇಳಿಹ ಸತ್ಯವಾಕ್ಯವು ।
ಸರಿಯನ್ನಿ ಮುಂದೆ ಅನೇಕ ಪ್ರಮೇಯಗಳುಂಟು ।
ಪರಮಾನಂದಾಭರಿತಾಸುಜ್ಞಾನ ವಿಜ್ಞಾನಾತುಮ ।
ಮುರವಿರೋಧಿಯರೂಪಾಪುಂಸ್ತ್ರೀ ಭೇದದಲಿ ।
ಎರಡುಂಟು ಎಂದಿಗೂ ನಿತ್ಯಸತ್ಯವಾಗಿ ।
ಅರವಿದೂರರು ಇನಿತುಪಾಸನೆಯ ಮಾಡುವರು ।
ನಿರುತದಲಿ ಆನಂದಮಯಪುರುಷ ತಾನು ।
ಸ್ವರಮಣನು ತನ್ನ ವಿಜ್ಞಾನಾಖ್ಯ ಸ್ತ್ರೀರೂಪದಿ
ಚರಿಸಿ ಸುಖಪಡುವ ಆನಂದಮಯರಾಮ ।
ಹರನೈಯ ಹನುಮನೆಂಬುದು ಜ್ಞಾನಕೆ ಶಬ್ದ ।
ವರದೊರದು ಪೇಳಿಹ್ಯವು ಅನೇಕ ಶ್ರುತಿಗಳು ।
ಕರುಣಶುದ್ಧಿಲಿ ತಿಳಿ "ರಮಂತೆಯಸ್ಮಿನ್ ಯೋಗಿನಃ" ರಾಮೆಂದು
ಭರಿತ "ಆನಂದಮಯರಾಮನು" ಹನುಮಾಭಿದಾ ।
ತುರದ ಜ್ಞಾನವಿಜ್ಞಾನರೂಪದಿ ರಮಿಸಿ ಆನಂದ ।
ಭರಿತನಾದನು ಮುದದಿಂದ ಕೇಳಿ ಮುಂದೆ ।
ಕರುಣಾಕರ ರಾಮ ಮಾಡಿದ ಚರಿಯವು ।
ಸರಸವಾದ ಮಾರ್ಗಶೀರ್ಷ ವೃಶ್ಚಿಕ ಮಾಸೇನು ?
ಹರಿತಾಭತ್ರಯೋದಶಿಗ್ರಂಥಿದೋರವೇನು ?

ಮೆರೆವ ತ್ರಯೋದಶಿ ಜಯಾ ಅಭಿಜಿನ್ ಏನು ? ।
ವರಗೋಧುಮಪರಿಮಿತ ಪ್ರಸ್ಥವಾವುದು ?।
ಸುರಗಂಗೆಯಾದ ಜಾನ್ಹವಿತೀರವಾವುದೊ? ।
ಪೌರಾಣಿಕ ಸೂತಕಶೌನಕರಾರಯ್ಯ?।
ಪರಮ ಮಂಗಳ ಯುಕ್ತದ್ವೈತವನವಾವುದು।
ಪರಾಶರತನಯ ವ್ಯಾಸರೆ ಸರ್ವತ್ರದಲಿ ।
ಅರನಿಮಿಷ ಬಿಡದಲೆ ವ್ಯಾಪ್ತನಾಗಿಪ್ಪನು ।
ವರವೇದಾದಿ ವಿಭಾಗಗೈಸಿ ನಿರ್ಣೈಸಿದಚಾರಿತ್ರನೋ ? ।
ಸ್ಮರನ್ಯಯ್ಯ ಶ್ರೀ ಕೃಷ್ಣ ವರಪಾಂಡುವರಾರು ? ।
ಮರುತಾತ್ಮ ಭೀಮ ಅರ್ಜುನ ಅಶ್ವಿನೇಯರು ।
ನಿರು ವೈರ ಧರ್ಮಜ ಕೃಷ್ಣೆ ಆರೈಯ್ಯ ತಿಳಿಯೆ ? ।
ಸರುವ ಅಧ್ಯಾತ್ಮ ಅಧಿದೈವದಿಂದಲೆ ಮಿಳಿತ ।
ಸಿರಿವರ ಸುಂದರ ವಿಠಲ ತಾನಿಂದು ದಯದಿ ।
ಗುರುವಂತರ್ಯಾಮಿ ಪೇಳಿಸಿದಂತೆ ಪೇಳ್ವೆ ೧೦

## ಝಂಪಿತಾಳ

ಸಾಧನವ ಮಾಡುವಾ ಮಾಧವನ ಭಕುತರೇ ।
ಬಾದರಾಯಣರ ಮತಕೆ ಅನುಕೂಲವಾಗಿ ।
ಆದರದಿ ಶ್ರೀಮದಾನಂದತೀರ್ಥರು ಕ್ತಿಯಂತೆ ।
ಸಾದರದಿ ಒರೆವ ಜ್ಞಾನಿಗಳ ಕದಕಿಣಿ ।
ಅದ್ವೆತ ವನವೆ ಸುಖದುಃಖ ಸಂಸಾರವನಧಿ ಅ
ಗಾಧ ದಾಟುವದಕೆ ಜೀವಿಗಳು ನಿತ್ಯ ।
ಸಾಧನ ಸಾಧ್ಯ ಸಿದ್ಧರು ಮೂರು ಬಗೆಯಲಿ ।
ಮೋದ ಭರಿತರಾದ ವರ ಜ್ಞಾನಿಗಳ ಸಂಗದಲಿ ।
ಭೇದ ಪಂಚಕ ತರತಮವರಿತು ಅವರಿಗೆ ಅ ।
ನ್ನಾದಿಗಳ ಕೊಡಲು ಶ್ರೀಹರಿ ಪ್ರೀತನಾಗಿ ।
ಕಾದುವಾ ಕರ್ಮವಿಕರ್ಮಗಳ ತಗ್ಗಿಸಲು ।
ಮೇದಿನಿಯೊಳು ವರಬ್ರಾಹ್ಮಣ ಜನುಮವಿತ್ತು ।
ಭೂದೇವರಾದ ಜ್ಞಾನಿಗಳಲಿ ಭಕುತಿ ಇತ್ತು

ಖೇದದೂರೋಡಿಸಿ ಜ್ಞಾನವೀವುದಕೆ ಮಹಾ ।
ವಿರೋಡಿಸಿ ಜ್ಞಾನವೀವುದಕೆ ಮಹಾ ।
ಸಾಧುಗಳ ಸಂಗತಿಯಿತ್ತು ಶ್ರವಣ ಮನ ।
ನಾದಿ ನಿಜಧ್ಯಾಸವನೀಯಲೂ ಶ್ರೀ ।
ಪಾದತೀರ್ಥ "ಗಂಗಾ ಇಡಾಖ್ಯನಾಡಿ" ।
ಯಾದ ನದಿಯೇ ಜಾನ್ಹವಿಯಲಿ ಮಿಂದು ಶುಚಿಯಾಗಿ ।
ಕ್ರೋಧರಹಿತ ಸೂತಪೌರಾಣಿಕ ಗುರುಗಳು ।
ಮೋದಭರಿತ ಜ್ಞಾನಭಕ್ತಿವೈರಾಗ್ಯ ಹರಿ ।
ಪಾದದಲಿ ಪ್ರಸವಿಸುವ ಸೂತರಲಿ ।
ಸಾಧನಾಸಾಧ್ಯ ಭಕುತರೆಂಬ ಶೌನಕರು
ಅಧ್ಯಾತುಮಾ ಅಧಿದೈವ ತಿಳಿಯೇ ಪ್ರಶ್ನವು ।
ಆದರದಿ ಮಾಡ್ದುದೇನಚ್ಚರವೆಂದು ತಿಳಿಯಬೇಡಿ ।
ಆ ಧರ್ಮಜನೆ ಮುಖ್ಯ ಶ್ರವಣಕ್ಕೆ ಅಭಿಮಾನಿ ।
ತಾ ದೂರದಲಿ ಬಾಹಿರದಲಿದ್ದ ಶಬ್ಧಾದಿಗಳ ಗಂಧಜ್ಞಾನಾ ।
ವಾದುದಕೆ ಅಶ್ವಿನಿಯರು ! ಈ ಮನವೇಚಂಚಲ
ವಾದ ಮದ ಮದತರಿಕಟ್ಟಲು ಆ ಅರ್ಜುನನೆ ಇಂದ್ರನು ।
ತಾಯದಿ ಭಕುತಿ ವೀವುದಕೆ ಭಾರತಿ ಕೃಷ್ಣ ।
ಈ ದಯಿತೆಯೊಡೆಯ ಮಹಾಜ್ಞಾನ ವಾಯುಭೀಮಾ ।
ಆ ದುರಿತ ಕಳೆವುದಕೆ ಶ್ರೀ ಕೃಷ್ಣನ ಪ್ರ ।
ಸಾದವೇ ಮುಖ್ಯವು "ಏನಂ ಮೋಚಯಾಮಿ" ।
ಸಾಧನಧೀ ವಿದಧಿ ಶ್ರವಣಾದಿ ನವಭಕುತಿ ಭರಿತ ।
ಮಾಧವನ ವಿಭೂತಿಪೂರ್ಣವಿರುವ ಮಾಸ ।
ವಾದಕಾಲವೆ ಮಾರ್ಗಶೀರ್ಷನವಮಾ ।
ವಾದ ಕಾರಣದಿ ಬಹು ಶ್ರೇಷ್ಠವಹುದೈಯ್ಯ ರವಿ ।
ಯಾದ ಸವಿತೃನು ವೃಶ್ಚಿಕಕುದಯನಾಗೆ ಸಮಗತಿಯೆಂದು ।
ಆದರದಿ ಭುದರು ಪೇಳುವರು ಭಾಗವತದಿ ಮನ ನಿ ।
ರೋಧಿಸಿ ಚಿತ್ತಸಮವಿಡುವದೇ ವೃಶ್ಚಿಕ ರಾಶಿ ಎಂ –
ಬ್ಹಾದಿಯನೆ ತಿಳಿಯಲು ರವಿಯುದಯ ಮಿಹಿರಾಖ್ಯ ಜ್ಞಾ ।
ನೋದಯದಿ ಸಮಮನಸ್ಕನಾಗಲೂ ಚಿತ್ತದಲ್ಲಿ ।

ತಾ ದಯದಿ ಅ ದೋಷಜನು ಪೊಳೆವನು ಈ ।
ಆದಿ ಮೂರುತಿಯೆ ಕಪಿಲ ಕಲ್ಕಿಹಯಾ ।
ಸ್ವಾದಿ ತ್ರಯೋದಶ ಮೂರುತಿ ತಿಥಿ ತ್ರಯೋದಶಕೆ ಅಭಿಮಾನಿ ।
ಯಾದ ಕುಬೇರನಲಿನಿಂದು ಸ್ಥಿರ ಧರ್ಮ ಬುದ್ಧಿ ।
ಮೋದದಿಂ ಪಾಲಿಪರು ಕಪಿಲ ಕಲ್ಕಿ ರೂ ।
ಪಾದಿ ಸುಪ್ರಕಾಸ್ಯವೇ ಅಭಿಜಿನ್ ಕಾಲ ರವಿ ಅಚಲನಾಗಿಹ್ಯನೆಂದು
ಸಾಧು ಸಮ್ಮತವಾದ ಈ ಮರ್ಮವ ತಿಳಿದು ಆ ।
ರಾಧಿಸು ಜ್ಞಾನಾಖ್ಯ ಅಭಿಜಿನ್ ಪ್ರಕಾಶದಲಿ ಜಯವೂ
ಆದೀಪದಲಿ ಪ್ರಕಾಶಿಸುವ ಗುಣವಿರುವ ।
ದಾದುದರಿಂದ "ದೀಪಸಂಯೋಜನಾಜ್ಞಾನಂ
ಪ್ರತ್ರಲಾಬೋಭವೇದ್ಧುವಂ"
ವಾದಿಗಳ ಪಲ್ಮುರಿವ ಬುಧರ ವಾಕ್ಯವೆ ಉಂಟು ।
ಮೇದಿನಿಸುರರು ತಿಳಿಯಿರಿ ಆತ್ರಯೋದಶ ರೂಪ ।
ಈ ದೀಪವೆಂಬ ಜ್ಞಾನಾಖ್ಯ ಪ್ರಕಾಶವು ।
ವೇದವ್ಯಾಸಾದಿ ರೂಪಗಳಿಂ ಆಗುವದೆಂದು ।
ವೇದ ಸಾಮದಿಂ ಕಾಲರೂಪಗಳ ತಿಳುವಳಿಕೆಯಾಗಲು ।
ವೇದವಿಸ್ತರಿಸಿದಾ ವ್ಯಾಸರ ದಯ ಬೇಕು ಆ ।
ವೇದಗಳಿಗೆಲ್ಲ ಪ್ರಕೃತಿ ಶದ್ಧರೆ ಅಭಿಮಾನಿ ।
ಯಾದ ಈರ್ವರ ಪಿತನು ಕೃತಿಪತಿ ದೇವ ।
ನಾದ ಪುದ್ಯುಮ್ನನೆಂದು ಗಾಯನ ಮಾಡಿರೋ ಸಾಮ ।
ವೇದಕ್ಕೆ ಅಭಿಮಾನಿ ಹರಿ ತಾಭಪ್ರದ್ಯುಮ್ನನೋ ।
ಭೇದಜ್ಞಾನನೀವ ಹನುಮನುಪನಿಷತ್ ಸಾಮ ।
ವೇದೀಯವಾದಗ ಕಾರಣದಿ ಹರಿದ್ವರ್ಣವುಳ್ಳ ।
ಯಾದದೋರವೆ ಪ್ರದ್ಯುಮ್ನಾಖ್ಯ ಕರುಣಾಮಾಲೆ ।
ಆ ದೇವತೆಗಳೆಲ್ಲಿ ಮಧುವಿದ್ಯಾ ಉಪಾಸಕರಾಗಿ ।
ಊರ್ಧ್ವಗತರವಿರಶ್ಮಿ ಪೀತವರ್ಣ ವಿಶಿಷ್ಟಾನೇ ಕ ।
ವೇದಸಮೂಹಗಳಿಂ ಸ್ತುತಿ ಮಾಡಿ ಜ್ಞಾನಾಖ್ಯ ।
ವಾದ ಮಹೋದಧೀಯಲ್ಲಿ ಮುಳುಗಿ ಆನಂದಬಡುವರು ನಿತ್ಯ ।
ಮೋದಾರ್ಯರಂತಗ ಸುಂದರ ವಿಠಲ ನುಡಿಸಿದಂದಲಿ ನುಡಿದೆ

**ಅಟ್ಟತಾಳ**

ಆ ಪೀತವರ್ಣ – ವಿಶಿಷ್ಟ ದೋರದ ಗ್ರಂಥಿ ।
ಶ್ರೀ ಪ್ರದ್ಯುಮ್ನನ ಜ್ಞಾನಾಖ್ಯ ರೂಪಗ ।
ಳೀ ಪರಿ ಚಿಂತಿಸಿ ಹನುಮನ್ನಾವ್ಹಾನಿಸಿ ।
ಆ ಪುರುಷ ವೈಕುಂಠ ಅನಂತಾಸನ ಶ್ವೇತ ।
ದ್ವೀಪ ಮಂದಿರನ ಮೂರು ರೂಪಗಳೊಂದೆ ।
ತಾಪಸಿ ಬದರಿನಿವಾಸಿ ವೇದವ್ಯಾಸ ದೇವ ಮತ್ತೇ ।
ಭೂಪ ಮಹಿದಾಸ ಶಿಂಶುಮಾರ ಹಯಶೀರ್ಷ ।
ಕೋಪ ಕಳೆದ ಧನ್ವಂತ್ರಿ ಕಲ್ಕಿ ವಡಭಾ ।
ಪಾಪಹರ ಕಪಿಲ ಹಂಸವಕ್ತ್ರ ಋಷಭ ಯಜ್ಞಾ ।
ದೀಪ್ರಶ್ನಿಗರ್ಭಜ್ಞಾನ ರೂಪಗಳು ನಿತ್ಯಾ ।
ಈ ಪರಿ ಸುಜ್ಞಾನ ಕೊಡುವರು ಬಿಡದಲೆ ।
ಮಾಪತಿ ರೂಪಗಳಂತೆ ಅನುದಿನದಲ್ಲಿ ।
ಶ್ರೀ ಪಯೋನಿಧಿಸುತೆ ರೂಪಧ್ಯಾನಿಸು ಸತತ ।
ಈ ಪೊಡವಿಯೊಳಿದರಂತೆ ಹನುಮ ವಾಯು ।
ರೂಪಗಳು ಬಿಡದೆ ಸೇವೆ ಮಾಳ್ಪರು ಹರಿಯಾ ।
ಈ ಪಥದಿಂ ಸುಜ್ಞಾನಿಗಳು ಚರಿಸುವ ರೈಯ್ಯಾ ।
ಆ ಪುಣ್ಯವೆಂಬ ಸುಪರಿಮಳ ಗಂಧಾನು ।
ಲೇಪನ ಶಾಸ್ತ್ರಾಲಾಪನವೆ ಶ್ರೀ ತುಲಸಿ ಪೂ ।
ಚಾಪನಭಿಮತ ಮನೋವೃತ್ತಿಗಳೆ ಪುಷ್ಪ ।
ಕೋಪವೆ ಧೂಪವು ಭಕ್ತಿಯೇ ಭೂಷಣ ।
ವ್ಯಾಪಿಸಿದ ಸದ್ಬುದ್ಧಿ ಛತ್ರವಯ್ಯಾ ।
ದೀಪವೆ ಸುಜ್ಞಾನ ಆರಾರ್ತಿಗಳೆ ಗುಣ ಕಥನ ।
ಪಾಪರಹಿತ ಹರಿರೂಪಗಳೈಕ್ಯ ಚಿಂತಿಸುವದೆ ।
ಸೋಪಸ್ಕಾರ ನಿವೇದನ ನೈವೇದ್ಯವೆಂದು ।
ಈ ಪರಿ ಷೋಡಶೋಪಚಾರ ವಿಧಾನದಿಂ ।
ದೀಪೂಜೆ ಅಧ್ಯಾತುಮದಲ್ಲಿ ಅದಿ ದೇವಗ ।
ಳೀಪರಿ ವ್ಯಾಪ್ಯ ವ್ಯಾಪಕರೂಪಗಳಧ್ಯಾನಿಸೆ

ನೀಪರಿ ಪಾಲಿಪುದೆಂದು ಭಕುತಿ ಸ್ನೇಹ
ರೂಪ ಸ್ನಿಗ್ಧಾಖ್ಯ ಗೋಧೂಮವನು ನೀನು ।
ಶ್ರೀಪತಿ ತ್ರಯೋದಶ ಭೂಪ ಬ್ರಾಹ್ಮಣ ।
ರೂಪಗಳಿಗರ್ಪಿಸು ಮನೋವಾಚ ಕಾಯಿಕ ದಕ್ಷಿಣೆ ।
ರೂಪವಿಶಿಷ್ಟ ತಾಂಬೂಲ ಗಂಗಾಹರಿ ।
ರೂಪ ದ್ರವದಿ ಅವಭೃತನೆಸಗು ಜ್ಞಾನಾಖ್ಯ ಯಜ್ಞ ।
"ನಹಿಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೇ"
ಆ ಪರಮಾತ್ಮ ಪೇಳಿಹದು ನಿಜನಂಬು ।
ಖ್ಯಾಪಿಖ್ಯಾಪಿಗೆ ಹನುಮ ಹನುಮನೆಂದು ನುಡಿಯೆ ।
ಶ್ರೀಪತಿ ಸುಂದರ ವಿಠಲವೊಲಿದು ನಲಿದಾಡುವಾ ೧೨

**ಆದಿತಾಳ**

ಅರಿತು ಈ ಪರಿಯಿಂದ ಸರಸ ಜ್ಞಾನ ಹೃದಿ ।
ಸರಿತು ಸಲಿಲ ಧ್ಯಾನದಿ ನಿರುತ ಮಿಂದು ।
ಸುರವರಾಗದ್ವೇಷಮಲವನ್ನು ಕಳೆದು ।
ಪರತರ ಜ್ಞಾನಸಂಪಾದಿಸಲಿ ಬೇಕು ।
ಹರಮುಖ್ಯತಾತ್ವರಿಗೆ ಇದೆ ಇದೆ ವ್ರತ ಮುಖ್ಯ ।
ನಿರಂಶಿಗಳಾದ ಮುಮುಕ್ಷುಗಳೀಪರಿ ।
ಪರಿವ್ರತವನು ಮಾಡೆ ಜ್ಞಾನ ದೊರೆಯುವದಚ್ಚರವೇ ?
ಭರಿತ ಭಕ್ತಿಯಿಂದಾರು ಕೇಳಿ ಮಾಡ್ವರು ಸತತ ।
ಬರೆದುದು ಈ ಕಲ್ಪ ಆರ ಮನೆಯಲ್ಲಿಹದು ।
ನಿರುತ ಪಠಣೆ ವ್ರತ ಮಾಡಿದ ಪುಣ್ಯವು ।
ದೊರೆವುದು ಸಂಪೂರ್ಣ ಮನೋರಥ ಸಿದ್ಧಿಪುದು ।
ವರ ಬ್ರಾಹ್ಮಣ ವೇದ ವೇದ್ಯ ಶ್ರೀಮಂತನಾಹ ।
ಧುರದಿ ಕಾದುವಕ್ಷತ್ರಿಯನಿಗೆ ಪರಾಕ್ರಮ ।
ಬರುವುದು ವೈಶ್ಯನಿಗೆ ಧನದ ಕೋಶವು ।
ಚರಣಜ ಶೂದ್ರನಿಗೆ ಮಹಾ ಕೃಷಿ ಧನಪ್ರಾಪ್ತಿ ।
ವರ ಆರೋಗ್ಯವು ರೋಗಿಗೆ ಪುತ್ರಾರ್ಥಿಗೆ ಪುತ್ರಲಾಭ
ಎರಡೊಂದು ಧರ್ಮಕ್ಕೆಲ್ಲನುಕೂಲಾದ ದ್ರವ್ಯಾಗಮ ।

ಪರಮ ಮಂಗಳ ಮೋಕ್ಷಾರ್ಥಿಗೆ ಮೋಕ್ಷವು ।
ಸ್ಮರಿಸುತ ಹನುಮನ್ನಾಮ ಪ್ರಯಾಣ ಮಾಡಲು ।
ಸರುವದ ವಿಜಯಪ್ರದನಾಗಿ ತಿರುಗಿ ಬರುವ ತೀ ।
ವರದಿಂದ ನರರೀಪರಿ ಭಕುತಿಯಿಂದ ವ್ರತ ಮಾಡೀ ।
ಪರಿಮೂರಾವರ್ತಿ "ಓಂ ನಮೋ ಭಗವತೇ ವಾಯು ನಂದನಾಯ"
ವರಮಂತ್ರದಿಮದ ಗಂಧಲೇಪನ ಮಾಡಿಫಣೆಗೆ ।
ಸ್ಮರಿಸಿ ತಿಲಕವನಿಡಲು ಲೋಕರಾಜ ವಶ ಸದಾಚಾರ ।
ನಿರತನಾಹನು ಸರ್ವತ್ರ ಸಭೆಯಲ್ಲಿ ।
ಬರುವ ವ್ಯವಹಾರ ದ್ಯೂತಾದಿ ವ್ಯಸನವು ।
ಕರಕರಿಗೊಳಿಸುವ ಸಿಂಹವ್ಯಾಘ್ರ ಭಯದಿಂದ ಮುಕ್ತನಾಹ ।
ಸರುವ ಕಾರ್ಯಗಳಿಂ ಸರ್ವತ್ರ ವಿಜಯನಾಹ ।
ತ್ವರಿತ ತ್ರಯೋದಶ ಗ್ರಂಥಿಯುಕ್ತ ಹನುಮಂತನ ।
ಹರಿತದೋರ ಕಂಠ ದಕ್ಷಿಣಕರದಲ್ಲಾದರು ।
ಧರಿಸಿದರೆ ಸರ್ವಾಭೀಷ್ಟ ಸಿದ್ಧಿಸುವದು ನಿಸ್ಸಂದೇಹ ।
ವರಬ್ರಾಹ್ಮಣ ಕ್ಷತ್ರ ವೈಶ್ಯ ಶೂದ್ರರಿಗೆ ಸಂಪ ।
ತ್ಕರ ವಿಶೇಷ ಪತಿವ್ರತಸ್ತ್ರೀಯರಿಗೆ ।
ನಿರುತ ಜ್ಞಾನಭಕ್ತ್ಯಾದಿಗಳೀವುದು ಸತ್ಯ ಸತ್ಯ ।
ಹರಿವೇಷಧಾರಿ ಹನುಮಂತನ ವ್ರತವು ।
ಹರಿಯ ಮಂಗಳನಾಮ ಮಹಿಮ ತಿಳಿಸಿ ನಿತ್ಯಾ ।
ಹರಿವೊಲಿಮೆಯಾಗಿ ಹರಿಯು ವೊಲಿವನು ಸತ್ಯ ।
ವರವ್ಯಾಸದೇವನು ನಿರುತ ವಿಜ್ಞಾನದಲಿ ।
ಚರಿಸಿದ ಈ ಪರಿಸ್ತೋತ್ರ ಮಾಡಿರೈ ಜ್ಞಾನಿಗಳು ।

ಸ್ವರಣ ವರ್ಣ ಬ್ರಹ್ಮಾಂಡ ಬಾಹಿರದಲಿಪ್ಪನೆ ನಮೊ
ನಿರುತ ನವಾವರಣ ಅವ್ಯಾಕೃತ ಗಗನದಿ
ಹರಿರೂಪ ಗುಣಕ್ರಿಯ ತಿಳಿವನೆ ನಮೊ ನಮೊ ಮಹಾ
ನ್ಮರುತ ಧೃತಿಸ್ಮೃತಿ ಬಲ ವಿಜ್ಞಾತ ನಮೊ ।
ಗುರುವರ ವಿಖ್ಯಾತ ಮಹಾ ಧ್ಯಾತನೆ ನಮೊ ನಮೊ ।
ಗರಳಭುಕ್ ಭವರೋಗ ಭೇಷಜ ನಮೊ ನಮೊ ।
ಸ್ವರವರಣನೆ ದೇಹಸ್ತ ಪ್ರತ್ಯಾಸ್ವರ ಸೂರ್ಯಗತನೆ ಜೀವೇ ।
ಶ್ವರ ವಿಶ್ವ ಚೇಷ್ಟಕ ವಿಭೀಷಣೆ ನಮೊ ನಮೊ ।
ನಿರದುಷ್ಟವೀತ ಭಯ ಭೀಮನೆ ನಮೊ ನಮೊ ।
ದರ ಚಕ್ರಧರ ವರ ಅಭಯ ಹಸ್ತ ಅನಿಲನೆ ನಮೊ ।
ವೈರಾಗ್ಯ ನಿಧಿ ಸ್ಥೀತಿ ರೋಚಕನ ನಮೊ ನಮೊ ।
ಚರಿಸಿ ಮುಕ್ತಿಯಲಿ ಆನಂದಪ್ರದ ಹರಿಯಾ ।
ನಿರುತ ಸೇವೆ ಮಾಳ್ಪ ವಿಮುಕ್ತಗಾನಂದನೆ ನಮೊ ।
ಶರೀರ ಸತ್ವಾತ್ಮಕ ಶುಚೀ ಅನಿಮಿಷೀಶನೆ ನಮೊ ।
ಪರತರ ಜ್ಞಾನಿ ದಶಮತಿರಾಯನೆ ನಮೊ ನಮೊ ।
ಮರುತರೊಡೆಯ ಹರಿಯ ಅಚ್ಛಿನ್ನ ಭಕ್ತನೆ ।
ನಿರುತ ಪಂಚಪ್ರಾಣ ರೂಪ ಧರಿಸಿ ನಿಂದು ।
ಸರುವದ ಹರಿ ಪಂಚಾತ್ಮಕ ರೂಪಸೇವಿಪನೆ ನಮೊ ।
ಪರಮಾಣು ಮಹದ್ರೂಪನೆ ನಮೊ ನಮೊ ಎಂಬೆ
ಬರದು ಅಜ್ಞಾನದಿ ದೋಷ ಮಹಾ ಪ್ರಳಯದೀ ।
ತೆರದಲ್ಲಿ ನಿನ ಅಂಶ ಅವತಾರದಿಗಳಿಗೆ ಭೇದವಿಲ್ಲೆಂ
ದೊರೆಯುತಿಹವು ಐತರೇಯಶ್ರುತಿಗಳು ।
ಕರೆವರು ಜ್ಞಾನಿಗಳು ನಿನಗೆ ಅಮೃತನೆಂದು ।
ಸ್ಮರಹರನಿಗೆ ನಿನ್ನ ಚರಿತೆ ವರ್ಣಿಸಲೊಶವೆ ।
ಪರಮ ಪಾಮರನಾನೊರಣಿಪುದಕೆ ಶಕ್ತನೆ ।
ನಿರುತ ನೀನೆ ಎನ ಮನೋಮಂದಿರದಲ್ಲಿ ನೆಲಸಿಪ್ಪ ।
ಮರುತಾಂತಸ್ಥ ಹರಿ ಬರೆದಂದಲಿ ಬರೆದೆನಿದು ।
ತರತರದ ಜ್ಞಾನಿಗಳು ಮೆಲಿದ ಉಚ್ಚಿಷ್ಟ ಉಂಡು ।
ವರದೆನಲ್ಲದೇ ಎನ್ನ ಸ್ವಮತಿಯಲ್ಲಾ ।

ಮರುತಾವತಾರನಾದ ಹನುಮನೆ ನೀನು ।
ಭರದಿಂದ ರಾಮನೆಂಜಲೆಡೆಕೊಂಡು ಪೋದಂತೆ ಆ ।
ತುರದಿಂದ ನಿನ್ನವರ ಎಂಜಲುಣಿಸಿದ ಕೀ ।
ವರವೈಷ್ಣವ ಜನುಮವಿತ್ತು ಎನಗೆ ನೀನು ।
ವರವೀವ ವರದೇಂದ್ರರ ಆಶ್ರಯ ಪಾಲಿಸಿ
ಸುರತರೊಡೆಯನೆ ನಿನ್ನ ಸೇವೆ ಇಪ್ಪತ್ತೇಳು ।
ವರುಷವಿತ್ತುದದಕೆ ನಿನ್ನ ಇಪ್ಪತ್ತೇಳು ।
ಕಾರಿಯ ರೂಪಗಳಿಗೆ ಮೊರೆ ಹೊಕ್ಕಸಥೆಯಿಂದ ।
ಪರಿಪಾಲಿಸಯ್ಯ ಆಹೇಯ ವೈಷಿಕ ಸುಖ ।
ಹರಿಸಿ ದೂರೋಡಿಸಿ ನಿನಪದ ಸ್ಮರಿಪ ಭಕ್ತರ ಸಂಗ ।
ಇರಳು ಹಗಲು ನಿನ್ನ ಪಾದಸ್ಮರಣೆಯಿತ್ತು ಜ್ಞಾನ ।
ವಿರಹಿತನ ಮಾಡದೇ ಸರ್ವಕಾರ್ಯಗಳಲಿ ।
ವೆರಗಿಸು ಮನವನು ನಿನ್ನಂತರ್ಯಾಮಿ ।
ಹರಿಯಲ್ಲಿ ಬಿಡೆ ಬಿಡೆ ನಾ ನಿನ್ನ ಚರಣಯುಗಳ ।
ಕೊರಳಿಗೆ ಕಟ್ಟಿ ಗಾಯನ ಮಾಡಿ ಕುಣಿಯುವೆ ।
ಅರವಿದೂರನೆ ನಿನ್ನ ಅಹಿತ ಬೇಡುವದಿಲ್ಲ ।
ಹರಿಯಪದ ಭಕುತಿ ವಿಷಯದಿ ವಿರಕುತಿ
ಸಿರಿರಮಣ ಸುಂದರವಿಠಲ ಭಕ್ತನೆ ಈಯೋ ।
ಹರಿಯಾಜ್ಞೆಯಂತೆ ಮುಕ್ತಿದಾತೃನೆ ನಮೊ ನಮೊ ೧೩

**ಜತೆ**

ಇನಿತು ಚಿಂತಿಸಿ ವ್ರತವೀಜನುಮದೋಳ್ ಮಾಡಲು ।
ಹನುಮನೊಡೆಯ ಸುಂದರವಿಠಲ ಪೊಳೆವ ೧೪

ಶ್ರೀ ಸುಂದರ ವಿಠಲರು ಬೆರಳೆಣಿಕೆಯಷ್ಟು ಕೃತಿಗಳನ್ನು ರಚಿಸಸಿದ್ದು, ಲಭ್ಯವಾದ ಅವರಿಂದ ರಚಿತವಾದ ಒಂದು ಕೃತಿಯನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ.

## ೨

ದಾಸರಿಗೊಂದಿಸುವೆ । ಶ್ರೀ ಹರಿದಾಸರಿಗೊಂದಿಸುವೆ ॥
ಶ್ರೀ ಸಮೀರಮನವಾಸ ಕೀರ್ತನುಲ್ಲಾಸ । ನಿರ್ಗುಣೋ
ಪಾಸಕ ಶ್ರೀ ಹರಿದಾಸರಿಗೊಂದಿಸುವೆ. ಪ

ಚಂದ್ರಿಕಾರ್ಯರ ಮುಖದಿಂದುಪದಿಷ್ಟಿರ
ಸುಂದರ ನಿಮಿಷಾವಂದೆ ಪುರಂದರ ೧

ಕುಜನಮಾಯಿ ಗುಜುಗುಜು ವಾಗ್ಬಂಧಕ
ನಿಜಮತ ಬೋಧಕ ಸುಜನದಿ ವಿಜಯ ೨

ಧನ್ವಂತರಿಯ ಒಲಿಸಿನ್ನು ವ್ರತವನ್ನಾಚರಿಸಿದ
ಸನ್ನುತ ಗೋಪಾಲದಾಸರಿಗೆ ೩

ಶೌರಿಕಥಾಮೃತ ಸಾರನಿರ್ಮಿತ ।
ಸಾರಸುಖಪ್ರದ ಸೂರಿ ಜಗನ್ನಾಥ ೪

ಭೇದಸಿದ್ಧಮತ ಬೋಧಕ ಗ್ರಂಥಗ–
ಳಾವರದಿಂ ಕೃತ ಸಾಧು ಶ್ರೀ ಪ್ರಾಣೇಶ ೫

ಭೋಗಿ ಶಯನನಕಥೆ ಯೋಗಿ ಜನರ ಶಿರ
ದೂಗಿಸಿ ಪೇಳಿದ ಗುರು ಪ್ರಾಣೇಶ ೬

ಕೌಶಿಕ ನಾಮವಧರಿಸಿದ ಭುವಿಯೊಳು ।
ಕೌಶಲ್ಯಜದಾಸ ಶ್ರೀ ಪ್ರಾಣೇಶ .... ೭

ಮೋದತೀರ್ಥಮತ ವಾರಿಧಿಚಂದ್ರಮ । ಕು–
ವಾದಿ ಭುಜಗವಿಪಮೋದ ವಿಠಲ ...... ೮

ವಂದಿಸುವರಘು ವೃಂದಗಳೋಡಿಸಿ ।
ಸುಂದರ ವಿಠಲನ ಹೊಂದಿಪ ಕರುಣಿಕ ॥ ೯

# ಅನುಬಂಧ ೧

## ಕಠಿಣ ಶಬ್ದಗಳ ಅರ್ಥ

ಶ್ರೀ ಗುರುಜಗನ್ನಾಥದಾಸರು

### ಅ

ಅಂಗಾರ = ಬೆಂಕಿ; ಕೆಂಡ; ಇದ್ದಲು

ಅಂಚೆವಾಹನ = ಹಂಸವಾಹನ

ಅಂತು = ಕೊನೆ, ತುದಿ, ಗುಟ್ಟು, ಮಹಿಮೆ

ಅಂತುಮಹಿಮೆ = ನಿಗೂಢಮಹಿಮೆ, ವೇದೋಕ್ತ ಮಹಿಮೆ

ಅಂತೇವಾಸಿ = ಶಿಷ್ಯ, ಚಂಡಾಲ

ಅಂಬಕ = ಕಣ್ಣು

ಅಂಬರಮಾನಿ = ಆಕಾಶಕ್ಕೆ ಅಭಿಮಾನಿಯಾದ ಗಣಪತಿ

ಅಂಬು = ಬಾಣ, ಕರ

ಅಂಬುಜ = ಕಮಲ

ಅಂಭ್ರಣಿ = ಸೃಷ್ಟಿಯ ಪ್ರಾರಂಭದಲ್ಲಿ ಯೋಗನಿದ್ರಾರೂಢನಾದ ಶ್ರೀಹರಿಯನ್ನು ಎಬ್ಬಿಸುವ ಶ್ರೀಲಕ್ಷ್ಮೀದೇವಿಯ ರೂಪ

ಅರ್ಕ = ಸೂರ್ಯ

ಅರ್ಗಳವಾಗಿಹ = ಹೆಚ್ಚಾಗಿರುವ

ಅಜ = ಮೇಕೆ, ಪರಮಾತ್ಮ

ಅಟಾಣಿ = ಅಟನೆ, ಸಂಚಾರ, ತಿರುಗಾಟ

ಅಧ್ವರ = ಯಜ್ಞ, ಯಾಗ

ಅನಂತ =ವಿಷ್ಣು, ಆದಿಶೇಷ

ಅನಪಾಯಿನಿ = ನಾಶರಹಿತಳು, ಲಕ್ಷ್ಮಿ

ಅನರ್ಘ್ಯ = ಅಮೂಲ್ಯ

ಅನಲ್ಪ = ಬಹಳ

ಅನುಗ = ಸೇವಕ, ಅನುಚರ

ಅನೇಮಿ = ನಿಯಮ ಇಲ್ಲದವನು, ಕಟ್ಟಳೆಇಲ್ಲದವ

ಅಮರಪಾದಪ = ಕಲ್ಪವೃಕ್ಷ

ಅಮ್ಮಿ = ಸ್ತನ

ಅರ = ದೋಷ

ಅರಳಾಂಬುಜ = ಅರಳಿದಕಮಲ

ಅರಿಪು =ಮನಸ್ಸಿಗೆ ಮುಟ್ಟುವಂತೆಮಾಡು

ಅಲವಬೋಧ = ಮಧ್ವಾಚಾರ್ಯರು

ಅಷ್ಟಪದೋದರ =ಅಷ್ಟಾಪದೋದರ, ಬ್ರಹ್ಮ

ಅಸು = ಪ್ರಾಣ

ಅಹಿಗಿರಿ = ಶೇಷಾಚಲ

ಅಹಿಪ = ಹಾವುಗಳ ಒಡೆಯ: ಸರ್ಪರಾಜ

ಅರ್ಹಣೆಗಳು = ಪೂಜಾಸಾಮಾಗ್ರಿಗಳು

ಅಕ್ಷರ = ದೇಹನಾಶವಿಲ್ಲದ; ಲಕ್ಷ್ಮಿ

**ಆ**

ಆಖಂಡಲ = ಇಂದ್ರ, ದೇವೇಂದ್ರ
ಆಖಿಣಾಶ್ಮ = ಮುಖ್ಯವಾಯು, ವಾಯುದೇವರು
ಆಗಮ = ಸಂಪ್ರದಾಯಗ್ರಂಥ, ಶಾಸ್ತ್ರ, ಪೂಜಾಶಾಸ್ತ್ರ
ಆಗಾಮಿ = ಈಜನ್ಮದಲ್ಲಿ ಮಾಡುವ ಕರ್ಮ,
ಆಟನೆ = ಸಂಚಾರ, ತಿರುಗಾಟ
ಆತವರ = ಗಂಡುಕುರಿ, ಟಗರು
ಆರ್ತಿ = ದುಃಖ
ಆದಿತೇಯ = ದೇವತೆಗಳು
ಆಧಿ = ಮಾನಸಿಕತೊಂದರೆ, ದುರ್ವ್ಯಸನ
ಆಧಿಭೂತ = ಭೂತಗಳಿಂದಾಗುವ ತೊಂದರೆ
ಆಧ್ಯಾತ್ಮಿಕ = ತಾಪತ್ರಯಗಳಲ್ಲಿ ಒಂದು, ಆತ್ಮಕ್ಕೆ ಸಂಭಂದಿಸಿದ
ಆಮಯ = ರೋಗ
ಆಮುಷ್ಮಿತಾರ್ಥ = ಪರಲೋಕಕ್ಕೆ ಸಂಬಂಧಿಸಿದ ಬೇಡಿಕೆ
ಆರಡಿ = ದುಂಬಿ, ಷಟ್ಪದಿ
ಆವರ = ಯಾರ
ಆಲ್ಪರಿ = ಅಂಗಲಾಚಿ ಬೇಡಿಕೊಳ್ಳು

**ಇ**

ಇಂದುನಿಭಾ = ಚಂದ್ರನಂತೆ ಪ್ರಕಾಶವುಳ್ಳ
ಇಡೆ = ಭಿಕ್ಷೆಯನ್ನು ಹಾಕಿದಲ್ಲಿ
ಇನ = ಸೂರ್ಯ
ಇನಿಯ = ಪತಿ, ಗಂಡ
ಇಭಗುಹ = ಆನೆಗುಂದಿ, ಹಂಪಿ ಹತ್ತಿರದ ಊರು
ಇಮ್ಮಡಿ = ಎರಡುಪಟ್ಟು
ಇಮ್ಮನ = ಎರಡು ಮನಸ್ಸು

**ಈ**

ಈಪ್ಸಿತಾರ್ಥ = ಆಸೆ ಮಾಡಿದ ವಸ್ತು
ಈಷಣ ತ್ರಯ = ಹಣ, ಹೆಂಡತಿ, ಮಕ್ಕಳು ಈ ಮೂರು ವಸ್ತುಗಳ ಮೇಲಿನ ಮೋಹ

**ಉ**

ಉತ್ಸಹಾತ್ಮ = ಸಂತೋಷದಿಂದ ಕೂಡಿದ
ಉದಧಿನಂದನ=ಚಂದ್ರ
ಉಪಸ್ಕಾರ = ಮೆಣಸು ಮೊದೂದ ಪರಿಸ್ಕರ, ಮಸಾಲೆ
ಉಪಾಧಿ = ಅಡ್ಡಿ, ತೊಂದರೆ

**ಏ**

ಏರಾಟ = ಒಬ್ಬರ ಮೇಲೆ ಇನ್ನೊಬ್ಬರು ಹತ್ತಿಕುಳಿತು ಕೊಳ್ಳುವ ಆಟ
ಏಲ = ಏಲಕ್ಕಿ

## ಒ

ಒಕ್ಕಲು = ಸಂಸಾರ
ಒಡಲು = ಹೊಟ್ಟೆ

## ಓ

ಓದನ = ಅನ್ನ
ಓಲಗ = ದರ್ಬಾರು

## ಕ

ಕಂಜಜ = ಬ್ರಹ್ಮ
ಕಂಟಕತರು = ಮುಳ್ಳಿನಗಿಡ
ಕಂಠೀರವ = ಸಿಂಹ
ಕಂತು = ಮನ್ಮಥ
ಕಂತುಹರ = ಈಶ್ವರ
ಕಂಥೆಕಟ್ಟು = ಸ್ಥಳಬಿಟ್ಟುಹೊರಡು
ಕಂಧರ = ಕೊರಳು
ಕಂಬು = ಶಂಖ
ಕಕುಲಾತಿ = ಚಿಂತೆ
ಕಟಕ = ಗುಂಪು
ಕಟಿತಟ = ನಿತಂಬ
ಕಟು = ಕಹಿಯಾದ
ಕಟುಜನ = ದುಷ್ಟಜನ
ಕದಂಬ = ಗುಂಪು, ಸಮೂಹ
ಕದನ = ಜಗಳ
ಕದಪು = ಕಪೋಲ
ಕನಕಗರ್ಭ = ಬ್ರಹ್ಮ
ಕನಲಿ = ಪರಿತಪಿಸಿ
ಕಮಠ = ಕೂರ್ಮ, ದಶಾವತಾರಗಳಲ್ಲಿ ಒಂದು
ಕಮಲಸಂಭವ = ಬ್ರಹ್ಮ
ಕರಣ = ಇಂದ್ರಿಯ
ಕರಣರಹಿತ = ಶೇಷ, ಸರ್ಪ
ಕರಣವೈರಿ = ಅರ್ಜುನ
ಕಲ್ಪಭೂಜ = ಕಲ್ಪವೃಕ್ಷ
ಕರ್ಣಹೀನ = ಹಾವು, ಆದಿಶೇಷ
ಕಾಂಚನಗಿರಿ = ಸುವರ್ಣಗಿರಿ
ಕಾಂತಾರ = ಅಡವಿ
ಕಾಕುಜನರು = ದುಷ್ಟಜನರು
ಕಾಕುತ್ಥಾನ್ವಯ = ಕಕುತ್ಸವಂಶದಲ್ಲಿ ಹುಟ್ಟಿದ
ಕಾಕೋದರ = ಸರ್ಪ
ಕಾರ್ಮುಕ = ಬಿಲ್ಲು
ಕಾಶ್ಯಪಿ = ಭೂಮಿ
ಕಿಟರದ ಭವ = ವರಾಹರೂಪಿ ಭಗವಂತನ ಹಲ್ಲಿನಿಂದ ಹುಟಿದ್ದ ತುಂಗಭದ್ರಾನದಿ
ಕೀಶೇಶ = ವಾಯುದೇವರು
ಕುಂತಲ = ಕೂದಲು
ಕುಂದಣ = ಬಂಗಾರ
ಕುಂಭಸಂಭವ = ಅಗಸ್ತ್ಯ
ಕುಂಭಿಣಿ = ಭೂಮಿ
ಕುಂಭಿಣಿ ತಲ = ಭೂಮಿ, ಭೂತಲ
ಕುಂಭಿಣೀಧರ = ಪರ್ವತ
ಕುಂಭೀಶ್ವರ = ಗಜರಾಜ
ಕುಧರ = ವರಾಹಪತಿ, ಪರಮಾತ್ಮ, ಪರ್ವತ
ಕುಲಾಲ = ಕುಂಬಾರ
ಕುಸುಮರಥ = ಪುಷ್ಪಕ ವಿಮಾನ
ಕುಧ್ರಜಾಧವ = ರುದ್ರ, ಪರ್ವತದ ಮಗಳಾದ ಪಾರ್ವತಿ ಪತಿ

ಕೂಪ = ಬಾವಿ, ಹಳ್ಳ
ಕೂಪಾರ = ಸಮುದ್ರ
ಕೂಷ್ಮಾಂಡ = ಕುಂಬಳಕಾಯಿ
ಕೈವ = ಲಂಗೋಟಿ
ಕೊಡಲಿಧರಿಸಿ = ಪರಶುರಾಮನಾಗಿ
ಕೋಲಾಚಲ = ವರಾಹಪರ್ವತ
ಕೃಪಣ = ಬಡವ, ದುರ್ಬಲ
ಕೃಷ್ಣವರ್ತ್ಮ = ಅಗ್ನಿ
ಕ್ರಮುಕ = ಅಡಿಕೆ, ಒಂದು ಜಾತಿಗಿಡ

## ಖ

ಖಗ = ಗರುಡ
ಖದ್ಯೋತ = ಸೂರ್ಯ, ಮಿಂಚುಹುಳ
ಖರೆಯ = ಸತ್ಯವಾದ

## ಗ

ಗಂಧವಾಹನಿ = ವಾಯು
ಗಂಹರ = ಗುಹೆ
ಗರ್ಭ = ಮಗು, ಕೂಸು, ಬಸಿರು ಹೊಟ್ಟೆ
ಗಾರು = ಹೀನ
ಗಿರಿಧಾರಿ = ಮಂದರಪರ್ವತವನ್ನು ಹೊತ್ತ ಕೂರ್ಮ
ಗಿರೀಶ = ಈಶ್ವರ
ಗುಲ್ಫ = ಪಾದದಹರಡು
ಗೊಂದೆವಳವಿಗೆ = ವೃಷಭಧ್ವಜ
ಗೊತ್ತು = ಉದ್ದೇಶ
ಗೊತ್ತು ಸೇರ್ದೆವು = ನಿಯಮದಂತೆ ಬಂದೆವು
ಗೋಪಾಲ = ಭೂಪಾಲ, ಕೃಷ್ಣ
ಗೋಪಾಲು = ಹಸುವಿನ ಹಾಲು
ಗೋತ್ರಧರ ಮುಖ = ಭೂಮಿಯನ್ನು ಧರಿಸಿದವರಾಹನ ಮುಖವುಳ್ಳ
ಗೋಮಿನಿ = ಭೂಮಿ

## ಘ

ಘಟನಾ = ಮಾಡಲು
ಘಟನಕಾರ್ಯ ಸಾಧ್ಯವಾಗದಾ ಕಾರ್ಯ
ಘಟಿಸು = ಸಂಭವಿಸು
ಘಾತ = ಸಂಹಾರ
ಘೋಟ = ಕುದುರೆ

## ಚ

ಚಂದ್ರಿಕೆ = ಬೆಳದಿಂಗಳು
ಚದುರ = ಜಾಣ
ಚೂತ = ಮಾವಿನಹಣ್ಣು
ಚೈದ್ಯ = ಶಿಶುಪಾಲ
ಚೈಲ = ಬಟ್ಟೆ
ಚುಬುಕ = ತುಟಿಯ ಕೆಳಭಾಗ ] ಗದ್ದ

## ಛ

ಛವಿ = ಕಾಂತಿ

## ಜ

ಜಂಭಾರಿ = ಇಂದ್ರ
ಜಂಘ = ಮೀನಖಂಡ
ಜತ್ತ = ಜತನ
ಜತ್ತಾಯತಾಗಿ = ಎಚ್ಚರಿಕೆಯಿಂದ
ಜನಪ = ರಾಜ

ಜಲಧರ = ನೀರುತರುವವ, ಮೋಡ
ಜಲಸರಪಳಿ = ಹೊಳೆಯುವ ಸರಪಳಿ
ಜಸ = ಕೀರ್ತಿ
ಜಾಂಬೂನದ = ಸುವರ್ಣ, ಬಂಗಾರದಿಂದ ಮಾಡಿದ
ಜಾತರೂಪ = ಚಿನ್ನ, ಬಂಗಾರ
ಜ್ಞಾತರೂಪೋ
ದರಾಂಡ = ಬ್ರಹ್ಮಾಂಡ
ಸುಶಯ್ಯ = ಹಿರಣ್ಯಕಶಿಪು
ಜಾನು = ಮೊಳಕಾಲು
ಜಾಯೆ = ಪತ್ನಿ
ಜಾಳ = ರೋಗ
ಜಾಳಿಸಿ = ಕಂಪಿಸಿ
ಜೀವನ = ನೀರು
ಜೀವಾಂಶ = ಬ್ರಹಸ್ಪತ್ಯಾಚಾರ್ಯರ ಅಂಶ
ಜೈತ್ರ = ಜಯಶಾಲಿಯಾದ

## ಝ

ಝಷ = ಮೀನು

## ಡ

ಡಿಂಬ = ಶರೀರ

## ತ

ತಂದ್ರಮತಿ = ಜಡಬುದ್ಧಿ
ತಂದ್ರಾ = ಆಲಸ್ಯ
ತಟಿನಿ = ನದಿ
ತಮನವೈರಿ = ತಮನೆಂಬ ದೈತ್ಯನನ್ನು ಕೊಂದ ಮತ್ಸಾವತಾರರೂಪಿ ಪರಮಾತ್ಮ
ತರಣಿ = ಸೂರ್ಯ
ತರಾಲ = ಚಂಚಲ
ತರಣಿತನಯ = ಸುಗ್ರೀವ
ತರುವೈರಿ = ಅಗ್ನಿ
ತಾಮರಸ = ಕಮಲ
ತಿರುಕತಕ್ರ = ಭಿಕ್ಷುಕನ ಮಜ್ಜಿಗೆ
ತೀರ್ಥ = ಪವಿತ್ರವಾದನೀರು, ಪವಿತ್ರನದಿ
ತುಂಗ = ಶ್ರೇಷ್ಠ
ತುಡುಗು = ಕಳ್ಳತನ
ತೊಂಡ = ಸೇವಕ
ತೊಂಡೆ = ಅಳಿಸು
ತೋಡೆ = ಮುಂಗೈಗೆ ಹಾಕುವ ಆಭರಣ
ತೊತ್ತಿಗಾರರೆಲ್ಲರು = ಸೇವಕರೆಲ್ಲರು
ತೋಯಜ = ಕಮಲ
ತೋಯಧಿ = ಸಮುದ್ರ
ತ್ರ್ಯಂಬಕ = ಮೂರು ಕಣ್ಣುಳ್ಳ ಶಿವ
ತ್ರಾಣ = ಶಕ್ತಿ
ತ್ರಿದಶರು = ದೇವತೆಗಳು

## ದ

ದಂದಶೂಕ = ಹಾವು; ಸರ್ಪ
ದಂಭೊಲಿಧರ = ಇಂದ್ರ
ದರ = ಶಂಖ
ದರಾರಿ = ಶಂಖ, ಚಕ್ರಗಳು
ದಶೆ = ಸ್ಥಿತಿ, ಅವಸ್ಥೇ
ದಶಮತಿ = ಮದ್ವಾಚಾರ್ಯರು

ದಶಕಂಧರ = ರಾವಣ
ದಶಾಸ್ಯ = ರಾವಣ
ದಿನರ್ವಂಶಜ = ಸೂರ್ಯವಂಶಜನಾದ ರಾಮಚಂದ್ರ
ದಿನಮಣಿ = ಸೂರ್ಯ
ದಿವಜದ್ರುಮ = ಕಲ್ಪವೃಕ್ಷ
ದುರ್ಮನ = ಕೆಟ್ಟಮನಸ್ಸು
ದುಮ್ಮಾನ = ದುಗುಡ
ದೋಗ್ಧಿ = ಎಯ್ದು, ಹೊಂದು
ದೊಮ್ಮಗಾರ = ಮೊಸಗಾರ
ದೌತ್ಯ = ದೂತನ ಕೆಲಸ
ದ್ಯುಧವ = ದ್ಯೂನಾಮಕಳಾದ ಭಾರತೀ ಪತಿ
ದ್ವಂಗುಳ = ಎರಡು ಬಟ್ಟು

## ಧ

ಧನಪ = ಕುಬೇರ
ಧರ್ಮಪೌತ್ರ = ಪರೀಕ್ಷಿತ ಮಹಾರಾಜ
ಧರಣಿಸುರ = ಬ್ರಾಹ್ಮಣ
ಧರಾಸುರೇಶ = ಬ್ರಾಹ್ಮಣ
ಧವ = ಗಂಡ. ಪತಿ
ಧೃತಾಷಾಢ = ಹಿಡಿದದಂಡವುಳ್ಳ
ಧಾತನಾಂಡ = ಬ್ರಹ್ಮಾಂಡ
ಧಾಮ = ಮನೆ
ಧಾತಮುಖ್ಯ = ಬ್ರಹ್ಮನೇ ಮೊದಲಾದ
ಧಾತ್ರಿಫಲ = ನೆಲ್ಲಿಕಾಯಿ
ಧಿಯಾ = ಬುದ್ಧಿಯಿಂದ
ಧೀವರ = ಬುದ್ಧಿವಂತ
ಧುರ = ಯುದ್ಧ
ಧರದಿ = ಸಂಪತ್ತಿನಿಂದ

## ನ

ನಂದದಿ = ಆನಂದದಿಂದ
ನಗವ್ವೈರಿ = ಇಂದ್ರ
ನಗೆಹಾಯಿಸು = ನಗಿಸು
ನಡು = ಟೊಂಕ
ನರ = ಅರ್ಜುನ
ನರವರ = ಪರಿಕ್ಷಿತರಾಜ
ನಲ್ಲೆ = ಪ್ರಿಯತಮೆ
ನಳಿನಜಾಂಡ = ಬ್ರಹ್ಮಾಂಡ
ಪಾಥೋಜ = ಕಮಲ
ಪಾರ = ಕೊನೆ, ಅಂತ
ಪಾವನಿ = ಹನುಮಂತ
ಪಾವಿನ ಬಾಣ = ಸರ್ಪಾಸ್ತ್ರ
ಪಾರ್ವ = ಬ್ರಾಹ್ಮಣ
ಪಾರ್ಷ್ಣಿ = ಹಿಮ್ಮಡ?
ಪಿಂತೆ = ಮೊದಲು. ಹಿಂದೆ
ಪುಥ್ಥಳಿ = ಗೊಂಬೆ - ಮೂರುತಿ
ಪುದುಗಿ = ಮರೆಯಾಗಿ
ಪುರಸತಿ = ತ್ರಿಪುರಾಸುರನ - ಪತ್ನಿಯರು
ಪುರಹೂತ = ಇಂದ್ರ
ಪುಲಿನಗರ್ತದಿ = ಉಸುಕಿನತಗ್ಗಿನಲ್ಲಿ
ಪೂಗ = ರಾಶಿ
ಪೂತ = ಪವಿತ್ರ
ಪೆರ್ಚಿ = ಅಧಿಕವಾಗಿ, ಹೆಚ್ಚಾಗಿ
ಪೋತ = ನಾವೆ
ಪೋರ = ಹುಡುಗ
ಪ್ರತೀಕ = ಚಿಹ್ನೆ, ಗುರುತು
ಪ್ರಮಿತ = ಜ್ಞಾನಿ
ಪ್ರಾಭಂಜನ = ವಾಯುದೇವರು
ಪ್ರೇಷ್ಟನೆ = ಪ್ರಿತ್ಯಾಸ್ಪದನಾದ
ಪ್ಲವಗ = ಕೋತಿ

## ಬ

ಬಂಧುರ = ಸುಂದರವಾದ
ಬಗೆ = ಹೃದಯ
ಬಧಿರ = ಕಿವುಡ
ಬನ್ನ = ಕಷ್ಟ, ದುಃಖ
ಬಲಾರಿ = ಇಂದ್ರ
ಬವರ = ಯುದ್ಧ
ಬಾವನ = ಶ್ರೀಗಂಧ
ಬಿಸಜ = ಕಮಲ
ಬೋಧೆ = ಜ್ಞಾನ
ಬೋವ = ಸಾರಥಿ

## ಭ

ಭರತ = ವಾಯು: ಶ್ರೀ ರಾಮನ ತಮ್ಮ
ಭವತೂಲಕಾಲಾನಲನೆ = ಸಂಸಾರವೆಂಬ ಹತ್ತಿಗೆ ಅಗ್ನಿಯಂತಿರುವವನೆ
ಭಾನು = ಸೂರ್ಯ
ಭಾಸ್ಕರ = ಸೂರ್ಯ
ಭಿದಮತ = ದ್ವೈತಮತ
ಭಿದುರ = ಮಿಂಚು
ಭುಜಂಗ = ಹಾವು, ಸರ್ಪ
ಭುಜಗಾಂಚಿತ = ಸರ್ಪದಿಂದ ಪೂಜಿಸಲ್ಪಟ್ಟ
ಭೂತಪತಿ = ರುದ್ರದೇವರು
ಭೂದರಾಗ್ರ = ಪರ್ವತದ ಮೇಲಿನ
ಭೂಧರ = ವರಾಹರೂಪಿ ಭಗವಂತ
ಭುವರ = ರಾಜ
ಭೋಗೀಶಯನ = ವಿಷ್ಣು

## ಮ

ಮಂಗಳಾಂಗ = ಶ್ರೀಹರಿ, ಪರಮಾತ್ಮ
ಮಂದಜ = ಕಮಲ
ಮಂದಜಭವ = ಬ್ರಹ್ಮ
ಮಂದಜಾಸನ = ಬ್ರಹ್ಮ
ಮಂದಜಾಕ್ಷಿ ಮಣಿ =ಕಮಲಾಕ್ಷಿಮಣಿ
ಮಂದಾರ = ಕಲ್ಪವೃಕ್ಷ
ಮಖ = ಯಜ್ಞ
ಮಡದಿ = ಹೆಂಡತಿ, ಪತ್ನಿ
ಮರ್ತರೆ = ಮರೆತರೆ
ಮಥಿಸು = ಕಡೆ
ಮದತ = ಕುತ್ಸಿತವಾದ ಗರ್ವ
ಮದಂತ್ರದಿ = ನನ್ನ ಹೃದಯದಲ್ಲಿ
ಮಧುಘಾತಿ = ಮಧುಸೂದನ, ವಿಷ್ಣು
ಮನಸಿಜಾತ = ಮನ್ಮಥ ಕಾಮ
ಮನೀಷಿ = ಪಂಡಿತ
ಮನ್ನ = ಮನ
ಮನ್ನಾದ = ಮನಸ್ಸಿನ
ಮರ್ಮ = ಗುಟ್ಟು
ಮರಿಚ = ಮೆಣಸು
ಮಾಗಧರಿಪು = ಜರಾಸಂಧನ ವೈರಿ ಭೀಮ
ಮಾರ್ಗಣೆ = ಬಾಣ
ಮಾಜಿಸಿ = ನಿವೃತ್ತಿಮಾಡಿ, ಕಳೆದು
ಮಾಣದೆ = ಸಮ್ಮನಿಂದೆ
ಮಾಣವಕ = ಶಿಷ್ಯ
ಮಾತಂಗ = ಆನೆ
ಮಾತರಿಶ್ವ = ವಾಯುದೇವರು
ಮಾರ್ತಾಂಡ = ಸೂರ್ಯ

ಮಾನ = ಅಭಿಮಾನ
ಮಾನಿನಿ = ಸ್ತ್ರೀ
ಮಾರಾರಿ = ಈಶ್ವರ
ಮಾಲೋಲ = ಶ್ರೀಕೃಷ್ಣ
ಮಾಷ = ಉದ್ದು
ಮಾತೃ = ತಾಯಿ
ಮಿತ್ರ = ಸೂರ್ಯ
ಮಿಸುಣಿ = ಬಂಗಾರ
ಮಿಸುಪುದು = ಹೊಳೆಯುವದು
ಮೋಚಾ = ಬಾಳೆಯಗಿಡ
ಮೋದತೀರ್ಥ = ಮಧ್ವಾಚಾರ್ಯರು; ಆನಂದ ತೀರ್ಥರು
ಮೃಗ = ಜಿಂಕೆ
ಮೃಡ = ಈಶ್ವರ
ಮೃತ್‌ಕಲಾಪ = ಮಣ್ಣಿನ ಒಡ್ಯಾಣ

## ಯ

ಯದುರಾಯ = ಶ್ರೀಕೃಷ್ಣ
ಯಾತುಧಾನಗಣ = ರಾಕ್ಷಸರಗಣ
ಯಾಮ = ದಿನದ ಎಂಟನೆಯ ಒಂದು ಭಾಗ; ಹಿಡಿತ
ಯೋಗ = ಏಕಾಗ್ರತೆ

## ರ

ರತ್ನ = ಸಂಪತ್ತು
ರತ್ನಗರ್ಭನ = ಸಮುದ್ರರಾಜನ
ರವಿಕುಲಜಾತ = ಸೂರ್ಯವಂಶಜನಾಥ ರಾಮ
ರವಿಜಗೆ = ಸುಗ್ರೀವನಿಗೆ
ರಸ = ಹಾಲು – ನೀರು
ರಾಪು = ಗರ್ವ
ರಾವಣಿ = ರಾವಣನ ಮಗನಾದ ಅಕ್ಷಯ ಕುಮಾರ
ರಾಸಭ = ಕತ್ತೆ
ರುಜೋತ್ತಮನೆ = ರುಜುಗಳಲ್ಲಿ ಶ್ರೇಷ್ಠನೆ
ರೂಢಿ = ಭೂಮಿ ಧರೆ

## ಲ

ಲಹರಿ = ಅಲೆ: ತರಂಗ
ಲುಲಾಯ = ಕೋಣ
ಲೂಖಲ = ಒರಳು
ಲೇಖಾಗ್ರಣಿ = ದೇವತೆಗಳ ಒಡೆಯ

## ವ

ವಂಧ್ಯಾ = ಬಂಜೆ
ವಟಾದ ಎಲೆ = ವಟದ ಎಲೆ
ವನಧಿ = ಸಮುದ್ರ
ವನ್ನುತೇರ = ಸ್ತ್ರೀಯರ
ವರಣ = ಬಣ್ಣ
ವಸು = ಬಂಗಾರ
ವಸುಧೀಶ = ರಾಜ
ವಸುಮತಿ = ಭೂಮಿ
ವಕ್ಷ = ಹೃದಯ
ವಾಜಿವರದ = ಹಯವದನ ವಿಷ್ಣುವಿನ ಅವತಾರ
ವಾತದೇವ = ವಾಯುದೇವರು
ವಾರಣ = ಆನೆ
ವಾರಣ ನಿಚಯ = ಆನೆಗಳ ಗುಂಪು
ವಾರಾಸಿಜೆ = ಸಮುದ್ರದಿಂದ ಉತ್ಪನ್ನಳಾದಲಕ್ಷ್ಮಿ

ವಾಸವ = ಇಂದ್ರ

**ಶ**

ಶೀತಗಿರಿಸುತೆ = ಪಾರ್ವತಿ
ಶ್ವೈತವಾಹನ = ಅರ್ಜುನ
ಶೇಷದ = ಒಣಗದ

**ಷ**

ಷಟ್ಪದ = ದುಂಬಿ

**ಸ**

ಸಂಚಿತ = ಜನ್ಮಾಂತರಗಳಿಂದ ಕೂಡಿ ಬಂದ ಕರ್ಮಗಳು
ಸಟೆಯಲ್ಲ = ಸುಳ್ಳಲ್ಲ
ಸದರ = ಸಲಿಗೆ
ಸದಮಲಾಂಬರ = ನಿರ್ಮಲವಾದ ವಸ್ತ್ರ
ಸದ್ಯೋಜಾತ = ಈಶ್ವರ
ಸಮಯ = ಸಿದ್ಧಾಂತ, ಮತ
ಸಮಾಸಮೆ = ಲಕ್ಷ್ಮಿ
ಸಮೀರಗಿರಿ = ವೆಂಕಟಾಚಲ
ಸರಕುಮಾಡದೆ = ಲಕ್ಷಮಾಡದೆ
ಸರ್ವಗ = ಎಲ್ಲೆಡೆವ್ಯಾಪಿಸಿದ
ಸವ್ಯಶಾಚಿ = ಅರ್ಜುನ
ಸಾನುಜ = ತಮ್ಮನಿಂದ ಕೂಡಿದ
ಸಾಮಜ = ಆನೆ
ಸಾಮಾಜನಾಥ = ಶ್ರೀಕೃಷ್ಣ
ಸಾರ = ಗುಣ
ಸಾರಭೋಕ್ತ = ಸ್ವಾಖ್ಯರಸ ಸ್ವೀಕರಿಸುವವ
ಸಾರೆಗರೆಯೊ = ಹತ್ತಿರಕರೆಯೊ
ಸಾರೆಕರೆದು = ಹತ್ತಿರಕರೆದು
ಸಾಸಿರಾಕ್ಷ = ಇಂದ್ರ
ಸಿಂಗ = ಸಿಂಹ
ಸಿಂಧುಜಾತ = ಚಂದ್ರ
ಸುತ್ರಾಮ = ಇಂದ್ರ
ಸುಖತೀರ್ಥ = ಆನಂದತೀರ್ಥ, ಮಧ್ವಾಚಾರ್ಯ
ಸುಪರಣ = ಗರುಡ
ಸುಮನ
ಸಾರ್ಕರ = ದೇವೇಂದ್ರರ
ಸುಮ್ಮನ = ಸಂತೋಷ, ಒಳ್ಳೆಯ ಮನಸ್ಸು
ಸುರಪ = ಇಂದ್ರ
ಸುರಯೂಥ = ದೇವತಾಸಮೂಹ
ಸುರವರಾನನ = ಅಗ್ನಿ
ಸುರಸೌರಭಿ = ಕಾಮಧೇನು
ಸೂರಿಧ್ಯೆಯಾ = ಜ್ಞಾನಿಗಳಿಂದ ಧ್ಯಾನಿಸಲ್ಪಡುವ
ಸುಸಿನಿಂದ = ವ್ಯಾಪಿಸುವಂತೆ
ಸೋಮ = ಚಂದ್ರಾಂಶ
ಸ್ವರ್ಣಕಶಿಪು = ಹಿರಣ್ಯಕಶಿಪು
ಸ್ವರ್ಣಾಂಬಕ = ಹಿರಣ್ಯಾಕ್ಷ
ಸ್ವರ್ಣನಗಧರ = ಬಂಗಾರದ ಆಭರಣ ಧರಿಸಿದ
ಸ್ವರ್ನಗದಿರ = ಸೂರ್ಯ
ಸ್ವಸ್ತಿ = ಕ್ಷೇಮ
ಸ್ವಸ್ಥ = ಶಾಂತವಾದ
ಸ್ವಾದೋದಕ = ಕುಡಿಯುವ ನೀರು
ಸ್ವಾನನ = ಸುಂದರವಾದ ಮುಖ

## ವ

ವಿಖನಸಅಂಡ = ಬ್ರಹ್ಮಾಂಡ
ವಿತತ = ವಿಸ್ತಾರವಾದ
ವಿಪಿನ = ಕಾಡು; ಅಡವಿ
ವಿಷಯ = ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು
ವೀಪ = ಗರುಡ
ವೀಸ = ಗರುಡ
ವೃತ್ರಾಹನನುಜ = ಉಪೇಂದ್ರ
ವೃಷ್ಣಿನಾಯಕ = ಯದುನಾಯಕ ಶ್ರೀಕೃಷ್ಣ
ವೇಧ = ಬ್ರಹ್ಮ
ವೈದರ್ಭಿರಮಣ = ರುಕ್ಮಿಣಿರಮಣ, ಶ್ರೀಕೃಷ್ಣ
ವೈಷಿಕ = ವಿಷಯಗಳಿಗೆ ಸಂಭಂಧಿಸಿದ
ವ್ಯಾಧಿ = ರೋಗ
ವ್ಯೂಥ = ಸಮೂಹ
ವ್ರತತಿಜ = ಹೂವು, ಕಮಲ
ವ್ರಾತ = ಸಮೂಹ

## ಶ

ಶಂಬರಾರಿ = ಮನ್ಮಥ
ಶಕಲ = ತುಂಡು
ಶತಮನ್ಯು = ಇಂದ್ರ
ಶತಮುಖ = ಇಂದ್ರ
ಶತಮೋದ = ಬ್ರಹ್ಮ
ಶತಾನಂದ = ಬ್ರಹ್ಮ
ಶಮಲ = ಪಾಪ
ಶರ = ಬಾಣ
ಶರಜ = ಕಮಲ
ಶರಜನ್ಮ = ಷಣ್ಮುಖ
ಶರಧಿ = ಸಮುದ್ರ
ಶರ್ವ = ಇಂದ್ರ
ಶಾಖಾಮೃಗ = ಕಪಿ
ಶಿಖಿಸಖ = ವಾಯು
ಶಿಶಿಕರ = ಬಿಳುಪಾದ

## ಹ

ಹಂಸ = ಮುನಿ, ಸನ್ಯಾಸಿ
ಹಮ್ಮು = ಗರ್ವ, ಸೊಕ್ಕು
ಹರಣ = ಪ್ರಾಣ, ಜೀವ
ಹರಿ = ವಾಯು, ಗರುಡ, ಶ್ರೀಕೃಷ್ಣ, ಕಪಿ
ಹಸನಗೆಡು = ವಿಕಾರವಾಗು
ಹಳಿ = ದೂಷಿಸು
ಹಾಟಕ = ಚಿನ್ನ
ಹಾಟಕಾಂಬರ = ಪೀತಾಂಬರ
ಹಿಮಾಕರ = ಚಂದ್ರ
ಹುಡುಗನೆನಿಸಿ = ವಾಮನನಾಗಿ
ಹೇರೊಡಲ = ಗಣಪತಿ
ಹರ್ಮ್ಯ = ಭವನ

## ಕ್ಷ

ಕ್ಷಣಕೆ = ಸರಿಯಾದ ಸಮುಯಕ್ಕೆ
ಕ್ಷತಜ = ರಕ್ತ
ಕ್ಷುಧೆ = ಹಸಿವು
ಕ್ಷಮಾತಳದಿ = ಭೂಮಿಯಲ್ಲಿ
ಕ್ಷರರು = ದೇಹನಾಶವುಳ್ಳ ಬ್ರಹ್ಮಾದಿ ದೇವತೆಗಳು
ಕ್ಷೋಣಿಜಾ = ಸೀತೆ

## ಶ್ರೀ ವರದೇಶವಿಠಲರು

ಅಘ = ಪಾಪ
ಅಸು = ಪ್ರಾಣ
ಅಹಿತುಳಿದನು = ಹಾವು ತುಳಿದಶ್ರೀ ಕೃಷ್ಣ
ಅಜ = ಬ್ರಹ್ಮ
ಅಧರ = ಕೆಳತುಟಿ
ಆಸಾಸು = ಅಷ್ಟಷ್ಟು
ಇನ = ಸೂರ್ಯ
ಉಗ್ರೇಶ್ವರ = ಈಶ್ವರ, ರುದ್ರ
ಏಸೇಸು = ಎಷ್ಟಷ್ಟು
ಕಂಸಾರಿ = ಕಂಸನ ವೈರಿಯಾದ ಶ್ರೀ ಕೃಷ್ಣ
ಕವಚ = ಹೊದಿಕೆ, ಉಕ್ಕಿನ ಅಂಗಿ
ಕರಿವರದ = ಶ್ರೀ ಕೃಷ್ಣ
ಕುಶಾಸ್ತ್ರ = ದುಷ್ಟಶಾಸ್ತ್ರಗಳು
ಕಾಯಜ = ಮನ್ಮಥ
ಗಾದಿಸುತ =
ಚತುರಾಸ್ಯ = ನಾಲ್ಕು ಮುಖದ ಬ್ರಹ್ಮ
ಜವದಿ = ವೇಗದಿಂದ
ದಮ್ಮಡಿ = ದುಗ್ಗಾಣಿ ಬಿಡಿಕಾಸು
ತ್ರಿಯಂಬಕ = ಈಶ್ವರ
ದಾಶರಥಿ = ದಶರಥನ ಮಗನಾದ ಶ್ರೀರಾಮ
ದ್ರುಂಕಿಣ = ಬ್ರಹ್ಮ
ಧೂರ್ಜಟಿ = ಈಶ್ವರ
ನಾಲ್ಮೊಗ = ಬ್ರಹ್ಮ
ಪರಮೇಷ್ಟಿ = ಬ್ರಹ್ಮ
ಪವಮಾನ = ವಾಯುದೇವರು
ಪಶುಪತಿ = ಈಶ್ವರ ರುದ್ರ
ಪಿನಾಕಿ = ಈಶ್ವರ
ಪ್ರೌಢ = ಪ್ರಬುದ್ಧನಾದ
ಫಣಿಧರ = ಹಾವನ್ನುಧರಿಸಿದ ಈಶ್ವರ
ಬಿಸುರಾಹಾಪ್ತ = ಸೂರ್ಯ
ಭವಾರ್ಣವ = ಭವ ಎಂಬಅಟವಿ
ಭೇಶ = ಚಂದ್ರ
ಮರುನ್ಮತ = ಮಧ್ವಮತ
ಮಹಿ = ಭೂಮಿ
ರಜತಪುರಾಧೀಶ =ಶ್ರೀ ಕೃಷ್ಣ
ರಜನಿಚರನಾಶ = ಶ್ರೀ ಕೃಷ್ಣ
ರವಿಜ = ಕರ್ಣ ಸುಗ್ರೀವ ಯಮ
ರೈಪತಿ = ವಿಷ್ಣು
ಲೇಸಾಗಿ = ಚೆನ್ನಾಗಿ
ವಾಮದೇವ = ಈಶ್ವರ
ವಿಪ = ಪಕ್ಷಿ
ವಿರಿಂಚಿ = ಬ್ರಹ್ಮ
ವಿಹಂಗವಾಹನ = ವಿಷ್ಣು - ಕೃಷ್ಣ
ಶರಧಿ = ಸಮುದ್ರ
ಶಿಖಿನೇತ್ರ = ಈಶ್ವರ
ಶ್ರೀ ಮನೋಹರ= ವಿಷ್ಣು–ಕೃಷ್ಣ
ಸರ್ಪಶಯ್ಯ = ಶ್ರೀ ಕೃಷ್ಣ
ಸುಖತೀರ್ಥ = ಶ್ರೀ ಮಧ್ವಾಚಾರ್ಯರು
ಸೂರಿ = ಜ್ಞಾನಿ, ಪಂಡಿತ
ಸೊನ್ನೊಡಲ = ಬ್ರಹ್ಮ

# ಅನುಬಂಧ ೨

## ಟಿಪ್ಪಣಿಗಳು - ಪೂರ್ವಕಥಾ ಸಂದರ್ಭಗಳು

**ಶ್ರೀ ಗುರುಜಗನ್ನಾಥದಾಸರು**

೧

ಇಭಗುಹ - ಆನೆಗುಂದಿ: ಹಂಪೆಯ ಹತ್ತಿರವಿರುವ ಒಂದು ಊರು.

೨

ಈಷಣತ್ರಯ - ಹಣ, ಹೆಂಡತಿ - ಮಕ್ಕಳು, ಈ ಮೂರು ವಸ್ತುಗಳ ಮೇಲಿನ ಮೋಹಕ್ಕೆ ಈಷಣ ಪ್ರೇಮ ಎಂದು ಹೆಸರು. ಮಾನವನ ಮೋಕ್ಷಸಾಧನೆಗೆ ಇವುಗಳನ್ನು ಬಿಡಬೇಕೆಂಬುದು ಶಾಸ್ತ್ರದ ಅದೇಶ.

೩

ಚತುರವಿಂಶತಿತತ್ವಪತಿ ದೇವತೆಗಳು - ಒಟ್ಟಿಗೆ ೨೪ ತತ್ವಗಳಿದ್ದು, ಆಯಾ ತತ್ವಗಳಿಗೆ ಒಬ್ಬೊಬ್ಬ ಅಭಿಮಾನದೇವತೆಗಳಿರುತ್ತಾರೆ. ಅವು ಈ ಕೆಳಗಿನಂತಿವೆ.

**ತತ್ವಗಳು - ಅಭಿಮಾನಿದೇವತೆಗಳು.**

| | | | |
|---|---|---|---|
| ೧. | ಅವ್ಯಕ್ತ ತತ್ವ | - | ಶ್ರೀ. ಸರಸ್ವತಿ, ಭಾರತಿ |
| ೨. | ಮಹತ್ತತ್ವ | - | ಬ್ರಹ್ಮ, ವಾಯು |
| ೩. | ಅಹಂಕಾರತತ್ವ | - | ಹರುಡ, ಶೇಷ, ರುದ್ರರು |
| ೪. | ಮನಸ್ತತ್ವ | - | ಇಂದ್ರ, ಕಾಮ |
| ೫. | ಶ್ರೋತ್ರ | - | ದಿಗ್ದೇವತೆಗಳು |
| ೬. | ತ್ವಕ್ | - | ಅಹಂಕಾರಿಕಪ್ರಾಣ |
| ೭. | ಚಕ್ಷಸ್ತತ್ವ | - | ಸೂರ್ಯ |
| ೮. | ಜಿಹ್ವಾ | - | ವರುಣ |

| | | | |
|---|---|---|---|
| ೯. | ಘ್ರಾಣ | – | ಅಶ್ವಿನಿದೇವತೆಗಳು |
| ೧೦. | ವಾಕ್ | – | ಅಗ್ನಿ |
| ೧೧. | ಪಾಣಿ | – | ದಕ್ಷಪ್ರಜಾಪತಿ |
| ೧೨. | ಪಾದ | – | ಜಯಂತ |
| ೧೩. | ಪಾಯು | – | ಮಿತ್ರ |
| ೧೪. | ಉಪಸ್ಥ | – | ವೈವಸ್ವತಮನು |
| ೧೫. | ಶಬ್ದ | – | ಬೃಹಸ್ಪತಿ, ಪ್ರಾಣವಾಯು |
| ೧೬. | ಸ್ಪರ್ಶ | – | ಅಪಾನವಾಯು |
| ೧೭. | ರೂಪ | – | ವ್ಯಾನವಾಯು |
| ೧೮. | ರಸ | – | ಉದಾನವಾಯು |
| ೧೯. | ಗಂಧ | – | ಸಮಾನವಾಯು |
| ೨೦. | ಆಕಾಶ | – | ಗಣಪತಿ |
| ೨೧. | ವಾಯು | – | ಪ್ರವಹವಾಯು |
| ೨೨. | ತೇಜ | – | ಅಗ್ನಿ |
| ೨೩. | ಜಲ | – | ವರುಣ |
| ೨೪. | ಪೃಥ್ವೀ | – | ಶನೈಶ್ವರ, ಧರಾದೇವಿ |

೪

ಧರೆಯನಳೆದ ಅಳತೆಗಾರ :–ಶ್ರೀಹರಿಯು ವಾಮನಾವತಾರವನ್ನು ಮಾಡಿ ಬಲಿಚಕ್ರವರ್ತಿಯು ಮಾಡುತ್ತಿದ್ದ ಯಜ್ಞಮಂಟಪಕ್ಕೆ ಬಂದು, ಅವನಿಂದ ಮೂರು ಅಡಿ ಭೂಮಿ ದಾನವನ್ನು ಪಡೆದು, ತನ್ನ ಪಾದದಿಂದ, ಅಳೆದುಕೊಂಡನು. ಆಗ ತ್ರಿವಿಕ್ರಮನಾಗಿ ಬೆಳೆದು ತನ್ನ ಪಾದದಿಂದ ಭೂ ವ್ಯೋಮಗಳನ್ನು ವ್ಯಾಪಿಸಿದ ಕಥೆ ಇಲ್ಲಿ ಉಕ್ತವಾಗಿದೆ.

೫

ನವವಿಧ ಭಕುತಿ:–ಶ್ರೀ ಮಧ್ಭಾಗವತದಲ್ಲಿ ಸಪ್ತಮ ಸ್ಕಂಧದಲ್ಲಿ ಪ್ರಹ್ಲಾದರಾಜರು ದೈತ್ಯಬಾಲಕರಿಗೆ ಉಪದೇಶ ಮಾಡುತ್ತ ಭಕ್ತಿಯನ್ನು ಕುರಿತು ಹೇಳಿದ್ದಾರೆ. ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮ ನಿವೇದನೆ, – ಇವೇ ಆ ಒಂಭತ್ತು ವಿಧದ ಭಕ್ತಿಗಳು.

೬

ನೀನೋದ್ದ ದ್ವಿಜನ:–ಹಿಂದೊಮ್ಮೆ ಋಷಿಗಳು ಯಜ್ಞ ಮಾಡುತ್ತಿರುವಾಗ ದೇವತೆಗಳಲ್ಲಿ ಯಾರು ಶ್ರೇಷ್ಠರು ಎಂಬ ವಾದ ಹುಟ್ಟಿತು. ಆಗ ಎಲ್ಲ ಋಷಿಗಳು ಭೃಗುಮಹರ್ಷಿಗಳನ್ನು

ನಿರ್ಣಯ ಮಾಡಲು ಕೇಳಿಕೊಂಡರು. ಆಗ ಭೃಗು ಮಹರ್ಷಿಗಳು ಬಹ್ಮಲೋಕ ಹಾಗೂ ಕೈಲಾಸಕ್ಕೂ ಹೋದರು. ಅಲ್ಲಿ ಬ್ರಹ್ಮನಾಗಲಿ, ಮಹೇಶ್ವರರಾಗಲಿ ಬಂದ ಅತಿಥಿಗಳನ್ನು ಗೌರವಿಸಲಿಲ್ಲ ಆಗ ಆ ಋಷಿಗಳು ಬ್ರಹ್ಮನಿಗೂ – ಮಹೇಶ್ವರನಿಗೂ ಶಾಪಕೊಟ್ಟು ಅಲ್ಲಿಂದ ವೈಕುಂಠಕ್ಕೆ ತೆರಳಿದರು. ಅಲ್ಲಿ ಶ್ರೀಮನ್ನಾರಾಯಣನು ಲಕ್ಷ್ಮಿಯಿಂದ ಪಾದಸೇವೆ ಮಾಡಿಸಿ ಕೊಳ್ಳುತ್ತಿದ್ದ. ಋಷಿಗಳ ಕಡೆಗೆ ಗಮನ ಕೊಡಲಿಲ್ಲ. ಆಗ ಸಿಟ್ಟಿಗೆದ್ದ ಭೃಗು ಋಷಿಗಳು ತಮ್ಮ ಕಾಲಿನಿಂದ ಶ್ರೀಮನ್ನಾರಾಯಣನ ವಕ್ಷಸ್ಥಳಕ್ಕೆ ಒದ್ದರು. ಆಗ ಪರಮಾತ್ಮನು ಕೋಪಿಸಿಕೊಳದೆ ಆ ಋಷಿಗಳ ಪಾದ ಪೂಜೆಯನ್ನು ಮಾಡುತ್ತಾನೆ. ಹಾಗೂ. ಅವರ ಅಹಂಕಾರವನ್ನು ಕಳೆದು, ಅನುಗ್ರಹಿಸುತ್ತಾನೆ. ಈ ಕಥೆ ಇಲ್ಲಿ ಉಕ್ತವಾಗಿದೆ.

೭

ಮಂಡಿಗೆ:– ಇದು ಗೋಧಿಯಿಂದ ತಯಾರಿಸಿದ ಒಂದು ಸಿಹಿ ಭಕ್ಷ್ಯ. ಬಹು ಪ್ರಸಿದ್ಧವೂ, ಬೇಡಿಕೆ ಯುಳ್ಳದ್ದೂ ಆಗಿದೆ.

ತಪ್ಪಿದೆ. (೮)

ಭಾಗವತ:–

ಭಗವಾನ್ ವೇದವ್ಯಾಸರು ಒಟ್ಟು ೧೮ ಪುರಾಣಗಳನ್ನು ರಚಿಸಿದ್ದು, ಅದರಲ್ಲಿ ಭಾಗವತವೂ ಒಂದು. ಇದು ಎಲ್ಲ ಪುರಾಣಗಳಲ್ಲಿ ಬಹುಪ್ರಸಿದ್ಧಿಯಗಿದ್ದು ಶ್ರೀಮನ್ನಾರಾಯಣನ ಅವತಾರಗಳನ್ನು, ಅವನ ಮಹಿಮೆಗಳನ್ನು ಕುರಿತು ಹೇಳುವ ಪುರಾಣಗಳ ರಾಜ.

೯

ಭೇದಪಂಚಕ:– ಶ್ರೀಮದಾಚಾರ್ಯರು ಪಂಚಭೇದಗಳನ್ನು ಹೇಳುತ್ತಾರೆ, ಅವುಹೀಗಿವೆ.

ಜೀವ – ಜೀವಗಳಲ್ಲಿ ಭೇದ
ಜೀವ – ಪರಮಾತ್ಮಭೇದ
ಜೀವ – ಜಡ ಭೇದ
ಜಡ – ಜಡ ಭೇದ
ಜಡ – ಪರಮಾತ್ಮ ಭೇದ

೧೦

ಮೂರುಕಾಲ:–

ಭೂತ – ಭವಿಷ್ಯತ್. ವರ್ತಮಾನಕಾಲ
ಬಾಲ್ಯ – ಯೌವನ, ಮುಪ್ಪು
ಪ್ರಾತಃಕಾಲ – ಮಧ್ಯಾನಕ್ಕಾಲ, ಸಂಧ್ಯಾಕಾಲ

೧೧

ಮೂರು ಮಾಡುವಿ:– ಸೃಷ್ಟಿ, ಸ್ಥಿತಿ, ಲಯ

೧೨

ಮೂರು ವಿಧ ಜೀವರು:– ಸಾತ್ವಿಕರು, ರಾಜಸರು, ತಾಮಸರು

೧೩

ಮೂರಾರು ಭಕುತಿ:– ನವವಿಧ ಭಕುತಿ, ಇದನ್ನು ಕುತಿತು 'ನವವಿಧ ಭಕುತಿ: ಎಂದು ಮೇಲೆ ಉಲ್ಲೇಖಿಸಿದ ಪದದಲ್ಲಿ ಉಲ್ಲೇಖಿಸಲಾಗಿದೆ.

೧೪

ಮೂರೇಳು ತತ್ವ:– ೨೧ – ತತ್ವಗಳು.

೧೫

ಮೂರೊಂದು ಮಗ:– ನಾಲ್ಕು ಮುಖವುಳ್ಳ ಬ್ರಹ್ಮ

೧೬

ಯಂತ್ರೋದ್ಧಾರ:– ಹಂಪೆಯಲ್ಲಿ ಒಂದು ಹನುಮಂತ ದೇವರಗುಡಿ, ಮಾರುತಿ ಮಂದಿರವನ್ನು ಶ್ರೀವ್ಯಾಸರಾಯರು ಪ್ರತಿಷ್ಠಾಪಿಸಿರುವರೆಂದು ಐತಿಹ್ಯ ಇಂದಿಗೂ ಇದು ಸುಪ್ರಸಿದ್ಧ ಹಾಗೂ ಜಾಗೃತ ಸ್ಥಳ ವಾಗಿದೆ.

೧೭

ಯೋಗೀಂದ್ರ ವಂದಿತ: ಶ್ರೀರಾಘವೇಂದ್ರ ಸ್ವಾಮಿಗಳು ಶ್ರೀ ಯೋಗೀಂದ್ರರೆಂಬವರಿಗೆ ಆಶ್ರಮ ಕೊಟ್ಟು ಅವರನ್ನು ಸರ್ವಜ್ಞಪೀಠದಲ್ಲಿ ಕೂಡಿಸಿದರು. ಅವರಿಂದ ವಂದಿತ ಎಂದರೆ ಶ್ರೀ ರಾಘವೇಂದ್ರ ಗುರುಗಳು ಎಂದರ್ಥ.

೧೮

ವರದಾತೀರದಿ ಶೋಭಿಪ ಯತಿವರ:– ವರದಾ ಒಂದು ನದಿ, ಈ ನದಿಯು ಕರ್ಜಗಿ ಹೊಸರಿತ್ತಿಗಳಲ್ಲಿ ಹರಿದು ಮುಂದೆ ಹೋಗಿದೆ. ಹೊಸರಿತ್ತಿಯಲ್ಲಿ ಶ್ರೀಧಿರೇಂದ್ರರ ಬೃಂದಾವನವಿದೆ. ಶ್ರೀಧೀರೇಂದ್ರರನ್ನು ಸಂಬೋಧಿಸಿ ಈ ಮಾತನ್ನು ಹೇಳಲಾಗಿದೆ.

೧೯

ವಾದೀಂದ್ರರ ತನುಜ:-ಶ್ರೀ ವಾದೀಂದ್ರರು ತಮ್ಮನಂತರ ಆ ಸರ್ವಜ್ಞಪೀಠದಲ್ಲಿ ಶ್ರೀ ದೀರೇಂದ್ರರೆಂಬವರನ್ನು ಕೂಡ್ರಿಸಿದರು. ಈ ಮಾತು ಶ್ರೀಧೀರೇಂದ್ರರಿಗೆ ಅನ್ವಯಿಸುತ್ತದೆ.

೨೦

ಸಮಾಸಮೆ:- ಶ್ರೀ ಮಹಾಲಕ್ಷ್ಮಿಯು ಶ್ರೀಹರಿಗೆ ಸಮಾನಳೂ ಹಾಗೂ ಅಸಾಮನಳೂ ಅಗಿದ್ದಾಳೆ. ಹೇಗೆಂದರೆ ಗುಣಗಳಿಂದ ಅಸಾಮನಳು. ದೇಶಕಾಲಗಳಿಂದ ಸಮಾನಳು

೨೧

ಸವನತ್ರಯ : ಪ್ರಾತಃಸವನ, ಮಧ್ಯಾಂದಿನಸವನ, ಹಾಗೂ ಸಾಯಂ ಸವನ: ಈ ಮೂರು ಕಾಲ ನಿರ್ದೇಶನಕ್ಕೆ ಸವನತ್ರಯ ಎನ್ನುತ್ತಾರೆ.

೨೨

ಹರಿಕಥಾಮೃತಸಾರ: ಹರಿಕಥಾಮೃತಸಾರವು ದಾಸಸಾಹಿತ್ಯದ ಒಂದು ದಿವ್ಯ ಕೃತಿ, ಶ್ರೀ ಜಗನ್ನಾಥದಾಸರು ಇದರ ಕರ್ತೃಗಳು ಇದರಲ್ಲಿ ೩೨ ಸಂಧಿಗಳಿದ್ದು, ೯೮೮ ಭಾಮೀನಿ ಷಟ್ಪದಿ ಪದ್ಯಗಳಿವೆ.

೨೩

ದ್ವಾದಶಪುಂಡ್ರ - ಮುದ್ರ : ದ್ವಾದಶ ಅಂದರೆ ಹನ್ನೆರಡು ನಾಮಗಳು. ಪಂಚಮುದ್ರೆಗಳು. ವೈಷ್ಣವರಲ್ಲಿ ಅಂದರೆ ಶ್ರೀಮದ್ವಾಚಾರ್ಯರ ಅನುಯಾಯಿಗಳಲ್ಲಿ ಸ್ನಾನದನಂತರ ಈ ನಾಮಗಳನ್ನು ಪಂಚಮುದ್ರೆಗಳನ್ನು ಧರಿಸುವ ಪದ್ಧತಿ ಇದೆ.

೨೪

ತ್ರಿವಿಧ ಕರ್ಮ : ಸಾತ್ವಿಕ, ರಾಜಸ ಹಾಗೂ ತಾಮಸ ಎಂದು ಮೂರು ವಿಧಕರ್ಮಗಳು.

೨೬

ತ್ರಿವಿಧಚೇತರು : ಸಾತ್ವಿಕ, ರಾಜಸ ಹಾಗು ತಾಮಸ ಎಂಬ ಮೂರು ಜೀವಗಳೀಗೆ ತ್ರಿವಿಧ ಚೇತನರು ಎಂದು ಹೆಸರು.

೨೬

ತ್ರಿವಿಧ ಶ್ವಾಸ : 'ಭೂ', 'ಅಭೂ' 'ಹಾಗೂ' 'ಭೂರಭೂ' ಎಂಬ ಮೂರುವಿಧ ಶ್ವಾಸಗಳು.

# ಅನುಬಂಧ ೩

## ವಿಶೇಷ ಪದಸೂಚಿ

### ಶ್ರೀ ವರದೇಶವಿಠಲರು

| | |
|---|---|
| ಅಲವಬೋಧ ಶಾಸ್ತ್ರ | – ಶ್ರೀ ಮಧ್ವಾಚಾರ್ಯರ ಶಾಸ್ತ್ರ : ದ್ವೈತ ಶಾಸ್ತ್ರ. |
| ಆಷಾಢ ಮಾಸ | – ಆಷಾಡ ಮಾಸದಲ್ಲಿ ಬರುವ ಷಷ್ಠಿ ತಿಥಿಷಷ್ಠಿ ಅಂದರೆ ೬ನೇತಿಥಿ |
| ಏಕಾದಶ ಸೇವಕರು | – ಏಕಾದಶರುದ್ರರು ? ಹನ್ನೊಂದು ಇಂದ್ರಿಯಗಳು |
| ಕಾಗಿನಿತೀರ ನಿವಾಸ | – ಟೀಕಾರಾಯರು (ಜಯತೀರ್ಥರು) |
| ಕೀರ್ಮಿರಾಂತಕ | – ಕೀರ್ಮೀರನನ್ನು ಕೊಂದ ಭೀಮಸೇನ |
| ಕೌಸಲರಾಜವರ ವಂಶೋದ್ಭವ | – ಶ್ರೀರಾಮ ಚಂದ್ರ |
| ಖೇಚರೇಶ | – ಪಕ್ಷಿಗಳರಾಜಗರುಡ |
| ಗೋಪಾಲದಾಸ | – ಶ್ರೀ ವಿಜಯದಾಸರ ಶಿಷ್ಯರಾದ ಶ್ರೀ ಭಾಗಣ್ಣದಾಸರು. |
| ಧರ್ಮಾನುಜ | – ಧರ್ಮರಾಜನಸಹೋದರ |
| ನರಸಂಬಂಧಿಪ್ರಾಂತ | – ಮಾನವಿ ಎಂಬಕ್ಷೇತ್ರ |
| ಪಾವಮಾನರಾಣಿ | – ಭಾರತಿದೇವಿಯರು |
| .ಪರಿಮಳಗ್ರಂಥಕರ್ತೃ | – 'ಪರಿಮಳ' ಎಂಬ ಗ್ರಂಥ ರಚಿಸಿದ ಶ್ರೀ ರಾಘವೇಂದ್ರ ಸ್ವಾಮಿಗಳು. |
| ಪುಣೆ | – ಇದು ಮಹಾರಾಷ್ಟ್ರದಲ್ಲಿದೆ. ಇಲ್ಲಿ ಶ್ರೀ ವರದೇಂದ್ರ ತೀರ್ಥರ ಬೃಂದಾವನವಿದೆ. |
| ಪುಷ್ಪಕ | – ಪುಷ್ಪಕ ಎಂಬ ವಿಮಾನು. |
| ಪಿತೃಭ್ರಾತಾಚಾರ್ಯ | – ಅಪ್ಪಣ್ಣಾಚಾರ್ಯರೆಂಬ ಹೆಸರಿನ ಶ್ರೀರಾಯರಭಕ್ತರು. |

| | |
|---|---|
| ಪ್ರಲ್ಹಾದಭಾತ್ಯನ | – ಪ್ರಲ್ಹಾದರಾಜರತಮ್ಮನಾದ ಸಲ್ಹಾದ |
| ಫಣಿ ಮೇಲ್ | – ಹಾವಿನ ಹೆಡೆಯ ಮೇಲೆ ಕುಣಿದ ಶ್ರೀಕೃಷ್ಣ |
| ಬ್ಯಾಗವಾಟ | – ಮಾನವಿ ಬಳಿ ಇರುವ ಒಂದು ಹಳ್ಳಿ. ಇದು ಶ್ರೀ ಜಗನ್ನಾಥದಾಸರು ಹುಟ್ಟಿದ ಸ್ಥಳ |
| ಭುಜಗಿರಿವಾಸ | – ಶೇಷಾಚಲ ವಾಸನಾದತಿರುಪತಿ ವೆಂಕಟೇಶ. |
| ಭೇದಮತ | – ಜೀವ ಪರಮಾತ್ಮ ಭೇದವನ್ನು ಹೇಳುವ ಮಧ್ವಮತ |
| ಮೃಕಂಡಜವರದ | – ಮೃಕಂಡು ಮುನಿಯ ಮಗನಾದ ಮಾರ್ಕಂಡೇಯನಿಗೆ ಅನುಗ್ರಹ ಮಾಡಿದ ಪರಮೇಶ್ವರ |
| ಮುಪ್ಪುರಹರ | – ಮೂರು ಪಟ್ಟಣಗಳನ್ನು ನಾಶ ಮಾಡಿದ ಪರಮೇಶ್ವರ |
| ಮೂರು ಮೂರು ಮೂರು ಒಂದು ಮೂರು ಸಾರಿದ | – ದ್ವೈತ ಧರ್ಮ ಪ್ರಸಾರವಮಾಡಿದ ಶ್ರೀ ಮಧ್ವಾಚಾರ್ಯರು. |
| ರಜನಿಚರನಾಶ | – ರಾಕ್ಷಸರನ್ನು ನಾಶ ಮಾಡಿದ ಶ್ರೀ ಕೃಷ್ಣ |
| ರಜತಪುರಾಧೀಶ | – ಉಡುಪಿಯ ಒಡೆಯನಾದ ಶ್ರೀ ಕೃಷ್ಣ |
| ರಾಮನಾಮ ಲೋಲ | – ರಾಮನಾಮದಲ್ಲಿ ಆಸಕ್ತನಾದ ಮಾರುತಿ. |
| ವರಮಂತ್ರ ಪದ್ಮನಿಲಯ | – ಮಂತ್ರಾಲಯ ಪ್ರಭುಗಳಾದ ಗುರುರಾಜರು |
| ವಸುಧೀಂದ್ರಕರ ಸಂಜಾತ | – ವಸುಧೇಂದ್ರರ ನಂತರ ಸರ್ವಜ್ಞಪೀಠಾರೋಹಣ ಮಾಡಿದ ಶ್ರೀವರದೇಂದ್ರರು |
| ವಿಜಯದಾಸ | – ಚೀಕಲಪರಿವಿಯಲ್ಲಿ ಜನಿಸಿದ ಇವರು ದಾಸಪ್ಪ ಎಂಬ ಹೆಸರುಳ್ಳವರಾಗಿದ್ದು ಸ್ವಪ್ನದಲ್ಲಿ ಶ್ರೀಹರಿಯೇ ಇವರನ್ನು ವ್ಯಾಸಕಾಸಿಗೆ ಕರೆದೊಯ್ದು. ಪುರಂದರ |

